SRI NAVA BHARATH ASRAM TRUST, BANGALORE

SPIRITUAL AND MORAL INSTRUCTION PROGRAMME

ಕನ್ನಡ ಪುಸ್ತಕ—ನಗಾಲೆ ಒಂದು

# ಭಗವದ್ಗೀತೆಯಲ್ಲಿರುವ

# ಭಕ್ತಿಯೋಗ

(ಏಳನೆಯ ಅಧ್ಯಾಯದಿಂದ ಹನ್ನೆರಡನೆಯ ಅಧ್ಯಾಯ ಪೂರ್ತಿ ಸರಳ ತಾತ್ಪರ್ಯ)

ಮತ್ತು

# ಕ್ಷೇತ್ರ ಕ್ಷೇತ್ರಜ್ಞ ವಿಚಾರ

(ಹದಿಮೂರನೆಯ ಅಧ್ಯಾಯ—ಶ್ಲೋಕ, ಅರ್ಥ, ತಾತ್ಪರ್ಯ ಮತ್ತು ವಿಶೇಷಾರ್ಥಗಳು)

**ಲೇಖಕರು:** ಶ್ರೀ ಎಂ. ಎ. ನಾರಾಯಣ ಐಯ್ಯಂಗಾರ್, ಎಂ.ಎ., ಬಿ.ಎಲ್.,
ನಿವೃತ್ತ ಡೆಪ್ಯುಟಿ ಡೈರಕ್ಟರ್ ವಿದ್ಯಾ ಇಲಾಖೆ, ಬೆಂಗಳೂರು.

**ಪ್ರಕಾಶಕರು:** ಮೈಸೂರು ವೈಶ್ಯ ಪತ್ರಿಕೆಯಲ್ಲಿ 1958 ನೇ ಇಸವಿಯಿಂದ 1962 ರ ವರಿಗೆ ಪ್ರಕಟಿಸಲ್ಪಟ್ಟಿದೆ.

Foreword by Sri A. G. Ramachandra Rao, B.A., LL.B.,
(*Former Minister for Law, Labour and Education*)

**Compiled in October 1967.**

**ಬೆಲೆ:** ರೂ. 2-00

96, Appajappa Agrahar,
Chamarajpet, Bangalore.
*Dated 4—6—1964.*

## FOREWORD

### By A. G. Ramachandra Rao, B.A., LL.B.

*(Former Minister for Law, Labour and Education)*

Thro' the centuries the Bhagavad Githa has been a unique classic in spiritual literature. It has moulded the lives of many eminent personalities in the world like Mahatma Gandhi—the father of the nation in India. To him its study was a daily ritual.

Prof. Narayanaiengar (Retired Deputy Director of Public Instruction) has done distinct service to the student world in bringing out this small booklet in *Kannada* "ಭಗವದ್ಗೀತೆಯಲ್ಲಿರುವ ಭಕ್ತಿಯೋಗ"—the message of love in the Bhagavad Githa. This is the principal theme detailed in central six chapters of this great work.

The narration is in simple prose and the subject matter is easily understandable even by the students of High Schools. To the teacher the topics detailed in the contents of the booklet serve as a basis for lecture in the class room. It offers a profitable reading to the general public ignorant of Sanskrit.

The learned professor has lucidly explained the technical terms avoiding dogmatism and sectarianism. The outlook is cosmopolitan throughout.

The booklet deserves a place in the class room of a secular state.

A. G RAMACHANDRA RAO.

I wrote this booklet on Bhakti Yoga for the Spiritual and Moral Instruction of High School and College students and the booklet on Kshetra-Kshetragna Vichara for that of the College students only. I express my respects to Sri A. G. Ramachandra Rao, B.A., LL.B., Former Minister of Mysore State for having kindly written the Foreword for this book. My thanks are due to Sri P. Gopalakrishna Setty, B.SC., B.L., Ex-M.L.C. and Advocate for having published these articles in the "Vaisya Patrike", Mysore. I offer my sincere thanks to my sister Sow. M. N. Yeggammal, Madras, and my daughter Sow. M. A. Vedavalli, B.A., Bangalore for their valuable help rendered to me in writing the booklet on Bhakti Yoga.

M. A. NARAYANA IYENGAR,
*Retired Deputy Director of Public Instruction,*
*Bangalore.*

Printed by P.N. Vaidyanathan, Yuganthara Press, B'lore-18.

ವಿಷಯ-ಸೂಚಿಕೆ

# ಭಗವದ್ಗೀತೆಯಲ್ಲಿರುವ ಭಕ್ತಿಯೋಗ

## (7 ನೇ ಅಧ್ಯಾಯದಿಂದ 12 ನೇ ಅಧ್ಯಾಯ ಪೂರ್ತಿ — 6 ಅಧ್ಯಾಯಗಳ ಸರಳ ತಾತ್ಪರ್ಯ

**ಏಳನೆಯ ಅಧ್ಯಾಯ**— ಭಗವಂತನಿಗೂ ಜಗತ್ತಿಗೂ ಇರುವ ಸಂಬಂಧವೇನು? ಆವನ ಉಪಾಸನೆಯನ್ನು ಯಾರು, ಏಕೆ ಮತ್ತು ಹೇಗೆ ಮಾಡಬೇಕು?



**ಎಂಟನೆಯ ಅಧ್ಯಾಯ**— ಭಕ್ತನು ಮರಣಕಾಲದಲ್ಲಿ ಭಗವಂತನನ್ನು ಹೇಗೆ ಧ್ಯಾನ ಮಾಡಬೇಕು? ಕಾಲವಾದ ಮೇಲೆ ಆವನ ಗತಿಯೇನು?

## ಹನ್ನೊಂದನೆಯ ಅಧ್ಯಾಯ—ಭಗವಂತನ ವಿಶ್ವರೂಪ ದರ್ಶನ



## ಹನ್ನೆರಡನೆಯ ಅಧ್ಯಾಯ—ಭಕ್ತಿಯೋಗ





---

ಗ್ರಂಥಕರ್ತರು ಬೆಂಗಳೂರಿನಲ್ಲಿದ್ದು ಈ ಸಂಪುಟಗಳು ಮೈಸೂರಿನಲ್ಲಿ ಅಚ್ಚಾದುದರಿಂದ ಪುಸ್ತಕದಲ್ಲಿ ಅಲ್ಲಲ್ಲಿ ಕೆಲವು ತಪ್ಪುಗಳಿವೆ (Printing mistakes). ಅವುಗಳನ್ನು ತಿದ್ದಿಕೊಳ್ಳಬೇಕೆಂದು ಪ್ರಾರ್ಥನೆ.

## ಹದಿಮೂರನೆಯ ಅಧ್ಯಾಯ— ಕ್ಷೇತ್ರ ಮತ್ತು ಕ್ಷೇತ್ರಜ್ಞ ವಿಚಾರ



---

ಭಗವದ್ಗೀತೆಯ ಹದಿಮೂರನೆಯ ಅಧ್ಯಾಯದಲ್ಲಿ ಕ್ಷೇತ್ರಜ್ಞನ ಅಥವ ಜ್ಞೇಯ ಸ್ವರೂಪದ ವರ್ಣನೆ ಇರುವುದು. ಆಚಾರ್ಯರುಗಳು ಈ ಜ್ಞೇಯ ಸ್ವರೂಪದ ಶ್ಲೋಕಗಳಿಗೆ ಬೇರೆ ಬೇರೆ ಅರ್ಥಗಳನ್ನು ಮಾಡಿರುವರು ಜ್ಞೇಯವು ಅಪ್ರಮೇಯ ಸ್ವರೂಪವಾಗಿದ್ದಾಗ್ಯೂ ಅದು ಉಂಟಾದ ಜಗತ್ತಿನಲ್ಲಿಯೂ ಪ್ರಕಾಶಿಸುವುದು. ಆದುದರಿಂದ ಜ್ಞೇಯವನ್ನು ಅದ್ವೈತ ಸಿದ್ಧಾಂತದಲ್ಲಿ ನಿರ್ಗುಣ ಬ್ರಹ್ಮನನ್ನಾಗಿಯೂ ಶುದ್ಧಾದ್ವೈತ ಸಿದ್ಧಾಂತದಲ್ಲಿ ಅಖಂಡ ಶುದ್ಧ ಶ್ರೇಷ್ಠ ಜ್ಞಾನವನ್ನಾಗಿಯೂ, ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಶುದ್ಧ ಪ್ರತ್ಯಗಾತ್ಮನನ್ನಾಗಿಯೂ, ದ್ವೈತ ಸಿದ್ಧಾಂತದಲ್ಲಿ ಸಗುಣ ಬ್ರಹ್ಮನನ್ನಾಗಿಯೂ ಮತ್ತು ಆಧುನಿಕ ಜ್ಞಾನಿಗಳಲ್ಲಿ ಕೆಲವರು ನಿರ್ಗುಣ-ಸಗುಣ ಬ್ರಹ್ಮನನ್ನಾಗಿಯೂ ವರ್ಣಿಸಿರುವರು. ವಿದ್ಯಾರ್ಥಿಗಳಾದ ನಾವು ಈ ಎಲ್ಲಾ ಅಭಿಪ್ರಾಯಗಳನ್ನೂ ತಿಳಿದು ಜ್ಞೇಯವನ್ನು ವಿಧವಿಧವಾಗಿ ಮನನ ಮಾಡುತ್ತಾ ಧ್ಯಾನ ಮಾಡಿ, ಅಮಾನಿತ್ವಾದಿ ಜ್ಞಾನಾಭ್ಯಾಸಗಳನ್ನು ಜೀವನದಲ್ಲಿ ಆಚರಿಸಿದರೆ ನಮ್ಮ ಮನಸ್ಸಿನಲ್ಲಿ ಕ್ರಮೇಣ ಬ್ರಾಹ್ಮೀ ಸ್ಥಿತಿಯುಂಟಾಗುವ ಪರಮ ಶಾಂತಿಯು ದೊರಕುತ್ತದೆ.

# ಭಗವಂತನಿಗೂ ಜಗತ್ತಿಗೂ ಇರುವ ಸಂಬಂಧವೇನು? ಅವನ ಉಪಾಸನೆಯನ್ನು ಯಾರು, ಏಕೆ ಮತ್ತು ಹೇಗೆ ಮಾಡಬೇಕು ?

ಭಗವದ್ಗೀತೆಯ ಮೊದಲು ಆರು ಅಧ್ಯಾಯಗಳಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಜೀವಾತ್ಮ ಸ್ವರೂಪವನ್ನೂ, ಅವನ ಪ್ರಕೃತಿಬಂಧನಕ್ಕೆ ಕಾರಣವನ್ನೂ ಮತ್ತು ಕರ್ಮಯೋಗ ಜ್ಞಾನ ಯೋಗಗಳಿಂದ ಅವನು ಆತ್ಮ ಸಾಕ್ಷಾತ್ಕಾರವನ್ನು ಪಡೆಯುವ ರೀತಿಯನ್ನೂ ಉಪದೇಶ ಮಾಡಿದನು. ಇನ್ನು ಮುಂದಿನ ಆರು ಅಧ್ಯಾಯಗಳಲ್ಲಿ ಭಕ್ತಿಯೋಗವನ್ನು ತಿಳಿಸುತ್ತಾನೆ. ಅವುಗಳಲ್ಲಿ ಮೊದಲನೆ ಅಧ್ಯಾಯವಾದ ಏಳನೆಯ ಅಧ್ಯಾಯದಲ್ಲಿ ಭಕ್ತಿ ಯೋಗವನ್ನು ಆಚರಿಸಲು ತಿಳಿಯಬೇಕಾದ ಭಗವಂತನ ಜ್ಞಾನ ವಿಜ್ಞಾನ ಸ್ವರೂಪವನ್ನೂ ಮತ್ತು ಭಕ್ತಿಯಿಂದ ಕೂಡಿದ ಉಪಾಸನೆಯಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯುವ ರೀತಿಯನ್ನೂ ಅರ್ಜುನನಿಗೆ ಉಪದೇಶ ಮಾಡುತ್ತಾನೆ. ಆದುದರಿಂದ ಈ ಅಧ್ಯಾಯವನ್ನು " ಜ್ಞಾನ-ವಿಜ್ಞಾನಯೋಗ " ಎಂದು ಕರೆದಿವೆ. ಈ ಅಧ್ಯಾಯದ ಶ್ಲೋಕಗಳಲ್ಲಿರುವ ವಿಷಯಗಳನ್ನು ವಿದ್ಯಾರ್ಥಿಗಳಿಗೆ ಸುಲಭವಾಗಿ ತಿಳಿಸುವ ಪ್ರಯತ್ನವನ್ನು ಮಾಡಿದೆ.

## ಭಗವಂತನಿಗೂ ಜಗತ್ತಿಗೂ ಇರುವ ಸಂಬಂಧ

ನಮಗೆ ಗೋಚರವಾಗುವ ಮತ್ತು ನಾವು ವಾಸಮಾಡುವ ಜಗತ್ತಿನಲ್ಲಿ ಎರಡು ಪ್ರಕೃತಿಗಳಿವೆ. ಒಂದು ಸಜೀವ ಪ್ರಕೃತಿ ಇನ್ನೊಂದು ನಿರ್ಜೀವವಾದ ಜಡ ಪ್ರಕೃತಿ ಇವುಗಳಲ್ಲಿ ಮೊದಲನೆಯದು ಶ್ರೇಷ್ಠವಾಗಿಯೂ, ಎರಡನೆಯದು ಕೀಳು ದರ್ಜೆಯದಾಗಿಯೂ ಇರುವುದರಿಂದ ಇವುಗಳು ಭಗವಂತನ ' ಪರಾ ' ಮತ್ತು ' ಅಪರಾ ' ಪ್ರಕೃತಿಗಳೆಂದು ಕರೆಯಲ್ಪಟ್ಟಿವೆ. ನಮ್ಮ ಕಣ್ಣಿಗೆ ಕಾಣುತ್ತಿರುವ ಜಗದ್ರೂಪವಾದ ನಿರ್ಜೀವವಾದ ಜಡಪ್ರಕೃತಿಯೇ ಭಗವಂತನ ಅಪರಾಪ್ರಕೃತಿಯು. ಇದು ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರ ಹೀಗೆ ಎಂಟು ವಿಧವಾಗಿ ಭಿನ್ನವಾಗಿದೆ. ಇವು ಭಗವಂತನ ಪ್ರಕೃತಿಯಾಗಿ ಅವನದಾಗಿವೆ. (ಶ್ಲೋಕ-೪). ಜೀವರೂಪ ಪ್ರಕೃತಿಯೇ ಭಗವಂತನ ಪರಾ ಅಥವ ಶ್ರೇಷ್ಠವಾದ ಇನ್ನೊಂದು ಪ್ರಕೃತಿಯು. ಇದು ಜಗತ್ತಿನಲ್ಲಿರುವ ಅಚೇತನ ಪ್ರಕೃತಿಗಳನ್ನು ಧರಿಸಿ ಅದಕ್ಕೆ ಆಧಾರವಾಗಿಯೂ, ಸತ್ತಾದಾಯಕವಾಗಿಯೂ ಇದೆ ; ಆದ್ದರಿಂದ ಅದಕ್ಕಿಂತ ಶ್ರೇಷ್ಠವಾದುದು. (ಶ್ಲೋಕ-೫). ಮೇಲೆ ವಿವರಿಸಿದ ಈ ಚಿತ್ ಮತ್ತು ಅಚಿತ್ ಅಂದರೆ ಚೇತನ ಮತ್ತು ಅಚೇತನ ಪ್ರಕೃತಿಗಳ ಸಂಯೋಗದಿಂದ ಜಗತ್ತಿನ ಸಮಸ್ತಭೂತಗಳೂ ಉತ್ಪನ್ನವಾಗಿವೆ. ಆದರೆ ಈ ಎರಡು ಪ್ರಕೃತಿಗಳಿಗೂ ಭಗವಂತನೇ ಕಾರಣ ಕರ್ತನಾಗಿರುವುದರಿಂದ, ಅವನೇ ಸಮಸ್ತ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೂ ಕೊನೆಯ ಕಾರಣ ಕರ್ತನಾಗಿದ್ದಾನೆ. (ಶ್ಲೋಕ-೬). ಈ ಕಾರಣಗಳಿಂದ ಭಗವಂತನೇ ಜಗತ್ತಿನಲ್ಲೆಲ್ಲಾ ಶ್ರೇಷ್ಠತಮನು ; ಅವನಿಗಿಂತ ಶ್ರೇಷ್ಠವಾದುದು ಜಗತ್ತಿನಲ್ಲಿ ಯಾವುದೂ ಇಲ್ಲ. ದಾರದಲ್ಲಿ ಪೋಣಿಸಿರುವ ಮಣಿಗಳ ಸಮೂಹದಂತೆ ಈ ಸಮಸ್ತವಾದ ಜಗತ್ತೂ ಮತ್ತು ಅದರಲ್ಲಿರುವ ಸಜೀವ ನಿರ್ಜೀವ ಪದಾರ್ಥಗಳೂ ಭಗವಂತನಲ್ಲಿ ಪೋಣಿಸಲ್ಪಟ್ಟಿವೆ; ಅವುಗಳಲ್ಲಿ ಆತ್ಮನಾಗಿ ನಿಂತಿರುವ ಅವನನ್ನು ಆಶ್ರಯಿಸಿಕೊಂಡು ಅವನ ಆಧಾರದಮೇಲೆ ನಿಂತಿವೆ. (ಶ್ಲೋಕ-೭). ಜಗತ್ತಿನಲ್ಲಿರುವ ಸಮಸ್ತ ವಸ್ತುಗಳೂ ಭಗವಂತನದೇ ಆಗಿರುವುದರಿಂದ ಸರ್ವಪ್ರಕಾರದಲ್ಲಿಯೂ ಭಗವಂತನೇ ಇರುವನು ಮತ್ತು ಸಮಸ್ತ ಶಬ್ದಗಳೂ ಅವನ ವರ್ಣನೆಯೇ ಆಗಿರುವುವು. ಈ ಸಮಸ್ತ ವಸ್ತುಗಳಲ್ಲಿರುವ ಭಾವಗಳೂ ಅಥವ ಗುಣಗಳೂ ಭಗವಂತನಿಂದಲೇ ಹುಟ್ಟಿವೆ. ಆದುದರಿಂದ ನೀವು

ಗಳ ರಸವೂ, ಚಂದ್ರಸೂರ್ಯರ ಪ್ರಕಾಶವೂ, ಸಮಸ್ತವೇದಗಳ ಓಂಕಾರವೂ, ಆಕಾಶದ ಶಬ್ದವೂ, ಪುರುಷರ ಪುರುಷತ್ವವೂ ಭಗವಂತನೇ ಆಗಿದ್ದಾನೆಂದು ವರ್ಣಿಸಿದೆ. (ಶ್ಲೋಕ–೮) ಹಾಗೆಯೇ ಭೂಮಿಯ ಶ್ರೇಷ್ಠವಾದ ಗಂಧವೂ, ಅಗ್ನಿಯ ತೇಜಸ್ಸೂ, ಸಮಸ್ತ ಪ್ರಾಣಿಗಳ ಜೀವ ಸ್ವರೂಪವೂ, ತಪಸ್ವಿಗಳ ತಪಸ್ಸೂ ಭಗವಂತನೇ ಆಗಿದ್ದಾನೆ. (ಶ್ಲೋಕ–೯). ಸಮಸ್ತ ಪ್ರಾಣಿಗಳ ಅನಾದಿಯಾದ ಬೀಜವೂ ಅವನೇ, ಬುದ್ಧಿವಂತರ ಬುದ್ಧಿಯೂ, ತೇಜಸ್ವಿಗಳ ತೇಜಸ್ಸೂ ಅವನೇ ಆಗಿದ್ದಾನೆ (ಶ್ಲೋಕ–೧೦). ಬಲಿಷ್ಟರ ಕಾಮರಾಗ ರಹಿತವಾದ ಬಲವೂ ಧರ್ಮಕ್ಕೆ ವಿರೋಧವಲ್ಲದ ಕಾಮವೂ ಅಥವ ಪ್ರೀತಿಯೂ ಭಗವಂತನೇ ಆಗಿದ್ದಾನೆ. (ಶ್ಲೋಕ–೧೧) ಹಾಗಾದರೆ ಪದಾರ್ಥಗಳಲ್ಲಿರುವ ಸ್ವಾತಿಕ ಗುಣಗಳು ಮಾತ್ರ ಭಗವಂತನಿಂದ ಹುಟ್ಟಿವೆಯೆ ? ಇಲ್ಲ, ಜಗತ್ತಿನಲ್ಲಿರುವ ಸಮಸ್ತ ಸಾತ್ವಿಕ, ರಾಜಸ ಮತ್ತು ತಾಮಸ ಸ್ವಭಾವಗಳೂ ಅಂದರೆ ಗುಣಗಳೂ ಭಗವಂತನಿಂದಲೇ ಉತ್ಪನ್ನವಾಗಿವೆ. ಅವೆಲ್ಲವೂ ಅವನಲ್ಲಿವೆ ಆದರೆ ಅವನು ಅವುಗಳಲ್ಲಿ ಇಲ್ಲ. ಅಂದರೆ ಭಗವಂತನು ಈ ಸಮಸ್ತ ಪದಾರ್ಥಗಳಿಗೂ ಮತ್ತು ಅವುಗಳ ಗುಣಗಳಿಗೂ ಆಧಾರನಾಗಿಯೂ ಸ್ವಾಮಿಯಾಗಿಯೂ ಇದ್ದಾನೆಯೇ ಹೊರತು ಅವುಗಳ ಆಧಾರಕ್ಕಾಗಲೀ ಅಥವ ಅಧೀನಕ್ಕಾಗಲೀ ಅವನು ಒಳಪಟ್ಟಿಲ್ಲ. ಸಜೀವ ಪದಾರ್ಥಗಳಲ್ಲಿ ಜೀವಾತ್ಮನು ಶರೀರದ ಸ್ಥಿತಿಗೆ ಆಧಾರನಾಗಿದ್ದರೂ ಕೂಡ ತನ್ನ ಶರೀರದಿಂದ ಆತನಿಗೆ ಸುಖದಿಂದ,ಉಪಕಾರವೂ ದುಃಖದಿಂದ ಅಪಕಾರವೂ ಕಾಣುತ್ತದೆ. ಆದರೆ ಭಗವಂತನಿಗಾದರೋ ಸಜೀವ ನಿರ್ಜೀವ ಪದಾರ್ಥಗಳಿಂದ ಈ ವಿಧವಾದ ಯಾವ ಉಪಕಾರವಾಗಲಿ ಮತ್ತು ಅಪಕಾರವಾಗಲಿ ಇರುವುದಿಲ್ಲ. ಸಕಲ ಜಗತ್ತೂ ಅವನಿಗೆ ಕೇವಲ ಲೀಲೆಯಾಗಿರುವ ಪ್ರಯೋಜನವನ್ನು ಮಾತ್ರ ಪಡೆದಿವೆ ಎಂದು ಭಾವವು (ಶ್ಲೋಕ–೧೨). ಇಲ್ಲಿಯವರೆಗೆ ಭಗವಂತನು ಜಗತ್ತಿನ ವಸ್ತುಗಳಲ್ಲಿ ಮಣಿಗಳ ಸಮೂಹಗಳೊಳಗಿರುವ ದಾರದ ಹಾಗೆ ಇದ್ದು ಅವುಗಳ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾಗಿದ್ದಾಗ್ಯೂ ಅವುಗಳಿಂತ ವ್ಯತಿರಿಕ್ತನಾಗಿಯೂ ಮತ್ತು ಶ್ರೇಷ್ಠನಾಗಿಯೂ ಇರುವನೆಂಬುದನ್ನು ತಿಳಿದೆವು. ಆದರೆ ಭಗವಂತನು ನಿಜಸ್ವರೂಪದಲ್ಲಿ ನಾಶರಹಿತನು ; ಅತಂತ್ಯ ಉತ್ತಮನಾದವನು ಅವನ ಸ್ವರೂಪವು, ಸುಲಭವಾಗಿ ವ್ಯಕ್ತವಾಗುವುದಿಲ್ಲ ಮತ್ತು ಅವನು ಅಜನ್ಮನು ಎಂಬುದನ್ನು ಮರೆಯಕೂಡದು ; (ಶ್ಲೋಕಗಳು–೨೪ವ೨೫) ಭಗವಂತನು ಸರ್ವಜ್ಞನು ; ಅವನು ಹಿಂದೆ ಆಗಿಹೋದ, ಈಗಿರುವ ಮತ್ತು ಮುಂದೆ ಆಗುವ ಸಕಲ ಭೂತಗಳನ್ನೂ ತಿಳಿದವನು ; ಆದರೆ ಅವನನ್ನು ಯಾರೂ ಅರಿಯಲಾರರು (ಶ್ಲೋಕ–೨೬) ಭಗವಂತನು ತನ್ನನ್ನು ಉಪಾಸಿಸುವವರಿಗೆ ಅವರ ಇಷ್ಟಾರ್ಥಗಳನ್ನು ಕೊಡುವನು ಮತ್ತು ತನ್ನ ಭಕ್ತರಾದವರನ್ನು ತನ್ನ ಆತ್ಮನಂತೆಯೇ ಭಾವಿಸಿ ಅವರನ್ನು ಪ್ರೀತಿಸಿ ಕಾಪಾಡುವನು (ಶ್ಲೋಕ–೧೭).

## ಲೋಕದಲ್ಲಿ ಬಹುಮಂದಿ ಭಗವಂತನನ್ನು ಪೂಜಿಸುವುದಿಲ್ಲ.

ಹೀಗೆ ಭಗವಂತನು ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾಗಿಯೂ, ಸರ್ವರಿಗೂ ಸ್ವಾಮಿಯಾಗಿಯೂ, ಶ್ರೇಷ್ಠತಮನಾಗಿಯೂ, ಭಕ್ತ ರಕ್ಷಕನಾಗಿಯೂ ಇದ್ದಾಗ್ಯೂ ಅನೇಕರು ಅವನನ್ನು ಏಕೆ ನಂಬಿ ಪೂಜಿಸುವುದಿಲ್ಲ ? ಲೋಕದಲ್ಲಿರುವ ಮಾನವರಲ್ಲಿ ಬಹುಮಂದಿ ಶಾಸ್ತ್ರಜ್ಞಾನವನ್ನೇ ಪಡೆದಿರುವುದಿಲ್ಲ, ಹಾಗೆ ಶಾಸ್ತ್ರಜ್ಞಾನವನ್ನು ಪಡೆದಿರುವ ಕೆಲವರು ಮಾತ್ರ ಸಿದ್ಧಿಗಾಗಿ ಪ್ರಯತ್ನಿಸುತ್ತಾರೆ, ಅಂದರೆ ಅನೇಕರು ಪ್ರಯತ್ನವನ್ನೇ ಮಾಡುವುದಿಲ್ಲ. ಹಾಗೆ ಪ್ರಯತ್ನಿಸುವ ಕೆಲವರಲ್ಲಿ ಅಲ್ಪಮಂದಿಗಳು ಮಾತ್ರ ಸಿದ್ಧಿ ಪರ್ಯಂತ ಪ್ರಯತ್ನವನ್ನು ಮುಂದುವರಿಸುತ್ತಾರೆ. ಸಿದ್ಧಿ ಪರ್ಯಂತ ಪ್ರಯತ್ನಿಸುವವರಲ್ಲಿ ಯಾವನೋ ಒಬ್ಬನು ಭಗವಂತನನ್ನು ಸತ್ಯವಾಗಿ ಸಾಕ್ಷಾತ್ಕರಿಸುತ್ತಾನೆ. ಒಟ್ಟಿನಲ್ಲಿ ಭಗವಂತನನ್ನು ಸಾಕ್ಷಾತ್ಕರಿಸುವ ಮನುಷ್ಯನು ಸಿಕ್ಕುವುದೇ ಕಷ್ಟವಾಗಿರುವುದರಿಂದ ಸಾಮಾನ್ಯ ಜನರು ಭಗವಂತನನ್ನು ನಂಬಿ ಪೂಜಿಸುವುದಿಲ್ಲ (ಶ್ಲೋಕ—೩) ಇಷ್ಟೆ ಅಲ್ಲ ; ಭಗವಂತನಿಂದಲೇ ಉಂಟಾದ ಅಥವ ಅವನಿಗೆ ಸೇರಿದ ಸತ್ವರಜಸ್ತಮೋಗುಣಗಳಿಂದ ಕೂಡಿದ ಈ ಪ್ರಕೃತಿಯು ಸರ್ವರಿಗೂ ಅವನ ಸ್ವರೂಪವನ್ನೇ ಮರೆಸಿ, ತನ್ನ ನಶ್ವರವಾದ ಸ್ವರೂಪದಲ್ಲಿಯೇ ಭೋಗ್ಯತ್ವವನ್ನು ಉಂಟುಮಾಡುವ ವಿಚಿತ್ರಕಾರ್ಯವನ್ನು ಮಾಡುತ್ತದೆ. ಹೀಗೆ ಶಾಶ್ವತವಲ್ಲದ ವಿಷಯಗಳಲ್ಲಿ ಜನರಿಗೆ “ ಇವು ಶಾಶ್ವತವಾಗಿ ನಮ್ಮೊಡನೆ ಇರುತ್ತವೆ ” ಎಂಬ ಬುದ್ಧಿಯನ್ನು ಪ್ರಕೃತಿಯು ಉಂಟುಮಾಡುವುದರಿಂದ ಇದನ್ನೇ ಮಾಯೆಯೆಂದೂ ಕರೆದಿದ್ದಾರೆ.. ಈ ಮಾಯೆಯು ಭಗವಂತನಿಂದಲೇ ಹುಟ್ಟಿದುದಾಗಿರುವುದರಿಂದ ಮನುಷ್ಯನು ಇದನ್ನು ದಾಟುವುದು ಕಷ್ಟ. ಈ ದಾಟಲಶಕ್ಯವಾದ ತ್ರಿಗುಣಗಳಿಂದ ಕೂಡಿದ ಮಾಯಾಪ್ರಕೃತಿಯಿಂದಲೇ ಲೋಕದಲ್ಲಿ ಸಮಸ್ತರೂ ಮೋಹಿಸಲ್ಪಟ್ಟವರಾಗಿ ಅವನ ಉತ್ತಮವಾದ ಸ್ವರೂಪವನ್ನು ತಿಳಿದು ಅವನನ್ನು ಪೂಜಿಸುವುದಿಲ್ಲ (ಶ್ಲೋಕಗಳು (೧೩–೧೪). ಇದರ ಪರಿಣಾಮವೇನು ? ಜನರು ತಮ್ಮ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸದೆ, ಪ್ರಕೃತಿಯ ವಸ್ತುಗಳ ಮೇಲೆಯೇ ಮಮತೆಯನ್ನು ಬೆಳೆಸುತ್ತಾ, ಅನೇಕವೇಳೆ ಪಾಪಕಾರ್ಯಗಳನ್ನೂ ಮಾಡುತ್ತ ದುಷ್ಕರ್ಮಿಗಳಾಗುವರು ; ಕೆಲವರು ಭಗವಂತನು ಇರುವನೆಂಬ ವಿಷಯವನ್ನು ತಿಳಿಯದೆ

ಪ್ರಕೃತಿಯ ವಿಷಯಗಳಲ್ಲಿ ಮಾತ್ರ ಆಸಕ್ತರಾಗಿ ಮೂಢರಾಗಿರುತ್ತಾರೆ ; ಇನ್ನು ಕೆಲವರು ಭಗವಂತನ ಸ್ವರೂಪ, ರೂಪ, ಗುಣಗಳನ್ನು ಆಚಾರ್ಯರುಗಳಿಂದ ಕೇಳಿದಾಗ್ಯೂ ಕೂಡ ಅವನಿಗೆ ಸಂಬಂಧಪಟ್ಟ ವಿಷಯಗಳಲ್ಲಿ ಶ್ರದ್ಧೆಯನ್ನೇ ಪಡೆಯುವುದಿಲ್ಲ. ಮತ್ತೆ ಕೆಲವರು ಭಗವಂತನ ವಿಷಯಜ್ಞಾನವನ್ನು ಪಡೆದಾಗ್ಯೂ ಕೂಡ ಕೆಲವರು ಅಲ್ಪಯುಕ್ತಿಗಳಿಂದ ಭಗವಂತನು ಇಲ್ಲವೆಂದು ವಾದಿಸಿದಾಗ ಅವನು ನಿಜವಾಗಿ ಇದಾನೆಂದು ನಂಬುವುದಿಲ್ಲ. ಸ್ವಲ್ಪಮಂದಿ ಹುಟ್ಟಿದಂದಿನಿಂದ ಆ ಸುರಸ್ವಭಾವವುಳ್ಳವರಾಗಿ ಭಗವಂತನಲ್ಲಿ ಒಂದು ವಿಧವಾದ ದ್ವೇಷಭಾವನೆಯನ್ನೇ ಹೊಂದುವರು. ಹೀಗೆ ಮೂಢರೆಂದೂ, ನರಾಧಮರೆಂದೂ, ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರೆಂದೂ, ಆಸುರ ಭಾವ ಉಳ್ಳವರೆಂದೂ, ಕರೆಸಿಕ್ಕೊಳ್ಳುವ ಇವರೆಲ್ಲರೂ ಭಗವಂತನ ವಿಷಯವನ್ನೇ ಯೋಚಿಸುವುದಿಲ್ಲ ; ಇನ್ನು ಅವನನ್ನು ಪೂಜಿಸುವುದಂತೂ ಇಲ್ಲವೇ ಇಲ್ಲ (ಶ್ಲೋಕ ೧೫). ಸರ್ವರೂ ತನ್ನನ್ನು ಆಶ್ರಯಿಸಲಿ ಎಂದು ಭಗವಂತನು ಮನುಷ್ಯಾದಿ ಅವತಾರಗಳನ್ನು ಎತ್ತುತ್ತಾನೆ ; ಉದಾಹರಣೆಗಾಗಿ ಈ ಭಗವದ್ಗೀತೆಯನ್ನು ಉಪದೇಶಿಸಿರುವ ಭಗವಂತನೇ ವಸುದೇವನ ಪುತ್ರನಾಗಿ ಶ್ರೀ ಕೃಷ್ಣಾವತಾರವನ್ನು ಎತ್ತಿದನು. ಆದರೆ ಅವನು ತನ್ನ ಅವತಾರ ಕಾಲದಲ್ಲಿ ತನ್ನ ಯೋಗಮಾಯೆಯಿಂದ ತನ್ನ ನಿಜಸ್ವರೂಪವನ್ನು ಮರೆಸಿಕೊಂಡು ಎಲ್ಲರಿಗೂ ಪ್ರಕಾಶನಾಗುವುದಿಲ್ಲ. ಆದುದರಿಂದ ತಿಳುವಳಿಕೆ ಇಲ್ಲದ ಜನರು ಈ ನಾಶರಹಿತನಾದ, ಉತ್ಪತ್ತಿರಹಿತನಾದ, ಸರ್ವೋತ್ಕೃಷ್ಟನಾದ ಅವತಾರಪುರುಷನನ್ನು ಪರಮಾತ್ಮಸ್ವಭಾವವನ್ನು ಪಡೆದವನೆಂದು ತಿಳಿಯದೆ, ಅವನನ್ನು ವ್ಯಕ್ತನಾದವನಂತೆ, ಅಂದರೆ ಲೋಕದಲ್ಲಿರುವ ಒಬ್ಬ ರಾಜಕುಮಾರನೆಂದು ಭಾವಿಸಿ ಈ ರೂಪದಲ್ಲಿರುವ ಭಗವಂತನನ್ನೂ ಕೂಡ ಆಶ್ರಯಿಸುವುದೂ ಇಲ್ಲ ಮತ್ತು ಆರಾಧಿಸುವುದೂ ಇಲ್ಲ (ಶ್ಲೋಕ ೨೫). ಜನರು ಭಗವಂತನನ್ನು ತಿಳಿಯುವ ಪ್ರಯತ್ನವನ್ನು ಮಾಡದೆ ಇರುವದಕ್ಕೆ ಇನ್ನೊಂದು ಪ್ರಬಲಕಾರಣವುಂಟು. ಜನರು ತಮ್ಮ ತಮ್ಮ ಹಿಂದಿನ ಜನ್ಮಗಳಲ್ಲಿ ಯಾವಯಾವ ವಸ್ತುಗಳಲ್ಲಿ ಮಮತೆಯನ್ನು ಅಥವಾ ದ್ವೇಷವನ್ನು ಬೆಳಸಿದ್ದರೋ ಆಯಾ ಇಚ್ಛಾದ್ವೇಷಗಳ ವಾಸನೆಯಿಂದಲೇ ಅವರು ಈ ಜನ್ಮದಲ್ಲಿ ಹುಟ್ಟಿರುವರು. ಆದುದರಿಂದ ಈ ಇಚ್ಛಾದ್ವೇಷಗಳ ದ್ವಂದ್ವದಿಂದ ಹುಟ್ಟಿದಂದಿನಿಂದ ಮೋಹಿತರಾದ ಈ ಜನರಿಗೆ ಭಗವಂತನ ಮೇಲೆ ಪ್ರೀತಿ ಹುಟ್ಟುವ ಬದಲು ಅವರವರ ಪೂರ್ವ ಜನ್ಮದಿಂದ ಬಂದಿರುವ ವಾಸನೆಗಳ ಫಲವಾಗಿ ಅವರಿಗೆ ಆಯಾ ಪ್ರಕೃತಿ ವಿಷಯಗಳ ಮೇಲೆಯೇ ಇಚ್ಛಾದ್ವೇಷಗಳು ಉತ್ಪನ್ನವಾಗುತ್ತವೆ. ಅವರ ಮನಸ್ಸೆಲ್ಲಾ ಯಾವಾಗಲೂ ಆ ಪ್ರಕೃತಿಯ ಪದಾರ್ಥಗಳ ಮೇಲೆಯೇ ಇರುತ್ತದೆಯೇ ವಿನಹ ಭಗವಂತನ ಮೇಲೆ ಇರುವುದೇ ಇಲ್ಲ (೨೭)

## ಅನೇಕರು ಭಗವಂತನನ್ನು ಪೂಜಿಸದಿದ್ದರೂ ಅನ್ಯ ದೇವತೆಗಳನ್ನು ಪೂಜಿಸುತ್ತಾರೆ

ಸಾಮಾನ್ಯ ಜನರು ಅವರವರಿಗೆ ಸಂಬಂಧಪಟ್ಟ ಪ್ರಕೃತಿಯ ವಾಸನೆಗಳಿಂದ ನಿತ್ಯವೂ ಬಂಧಿಸಲ್ಪಟ್ಟವರಾಗಿ, ಆಯಾ ವಾಸನೆಗಳ ಪ್ರಭಾವದಿಂದ ಅವರ ಇಚ್ಛೆಗಳನ್ನು ಪಡೆಯುವರು. ಆಗ ಅವರ ಇಚ್ಛೆಗಳಿಗೆ ವಿಷಯಗಳಿಂದ ಪದಾರ್ಥಗಳನ್ನು ಪಡೆದು ಅವನ್ನು ಅನುಭವಿಸುವುದರಲ್ಲಿಯೇ ಅವರ ಜ್ಞಾನವು ಅಪಹರಿಸಲ್ಪಟ್ಟು ಸಂಕುಚಿತವಾಗುವುದು. ಈ ಕಾಮನೆಗಳನ್ನು ಹೊಂದುವುದಕ್ಕಾಗಿ ಅವರು ಲೌಕಿಕ ಪ್ರಯತ್ನಗಳನ್ನು ಮಾಡುವುದಲ್ಲದೆ, ಅಲೌಕಿಕ ಸಾಧನವಾದ ಅನ್ಯದೇವತೆಗಳ ಪೂಜೆಗಳನ್ನು ಕೈಗೊಳ್ಳುತ್ತಾರೆ. ಅದಕ್ಕಾಗಿ ಶಾಸ್ತ್ರೀಯವಾದ ನಿಯಮಗಳನ್ನು ಶ್ರದ್ಧೆಯಿಂದ ಆಚರಿಸುತ್ತಾ ಆ ದೇವತೆಗಳನ್ನು ಶರಣು ಹೊಂದುತ್ತಾರೆಯೇ ವಿನಹ ಅವರು ಭಗವಂತನನ್ನು ಪೂಜಿಸುವುದಿಲ್ಲ (ಶ್ಲೋಕ—೨೦). ಆದರೇನು, ಆ ದೇವತೆಗಳೂ ಕೂಡ ಭಗವಂತನ ಶರೀರವೇ ಆಗಿರುವುದರಿಂದ, ಭಗವಂತನು ತನ್ನ ಶರೀರವೇ ಆಗಿರುವ ಆಯಾ ದೇವತೆಗಳನ್ನು ಪೂಜಿಸುವ ದೇವತಾ ಭಕ್ತರಿಗೆ ಆಯಾ ದೇವತೆಗಳ ಮೂಲಕವೇ ಅವರವರ ಇಚ್ಛಾವಿಷಯಗಳನ್ನು ದಯಪಾಲಿಸುತ್ತಾನೆ. ಇಷ್ಟೇ ಅಲ್ಲ, ಆಯಾ ದೇವತೆಗಳಲ್ಲಿರುವ ಅವರವರ ಶ್ರದ್ಧೆಯನ್ನು ನಿರ್ವಿಘ್ನವಾಗಿ ವೃದ್ಧಿಪಡಿಸುತ್ತಾನೆ ; ತನ್ಮೂಲಕ ಆ ಭಕ್ತನು ತನ್ನ ಇಷ್ಟ ದೇವತೆಯ ಆರಾಧನೆಯನ್ನು ಮಾಡುತ್ತಲೇ ಇರುವನು (ಶ್ಲೋಕ ೨೧—೨೨). ಇದರ ಫಲವೇನು ? ದೇವತೆಗಳೂ ಕೂಡ ತಮ್ಮ ಹಾಗೆ ಪರಿಮಿತಿಯುಳ್ಳ ಭೋಗವುಳ್ಳವರು ಮತ್ತು ಪರಿಮಿತಿ ಕಾಲದವರೆಗೆ ಜೀವಿಸಿರುವವರಾಗಿರುವರೆಂಬುದನ್ನು ಅರಿಯದ ಅಲ್ಪ ಬುದ್ಧಿಯುಳ್ಳ ಈ ಮನುಷ್ಯರು ಇಂದ್ರಾದಿ ದೇವತೆಗಳ ಆರಾಧನೆಯಿಂದ ಹೊಂದುವ ಈ ಫಲಗಳು ಅಲ್ಪವಾದವುಗಳು ಮತ್ತು ಕ್ಷಣಿಕವಾದವುಗಳು. ಅಂದರೆ ಕೆಲವು ಕಾಲವಾದ ನಂತರ ನಾಶವನ್ನು ಹೊಂದುತ್ತವೆ. ಇಷ್ಟೇ ಅಲ್ಲ, ಹೀಗೆ ದೇವತೆಗಳನ್ನೂ ಶ್ರದ್ಧೆಯೊಡನೆ ಪೂಜಿಸುವವರು ಆಯಾ ದೇವತೆಗಳನ್ನು ಹೊಂದುತ್ತಾರೆಯೇ ವಿನಹ, ದೇವತೆಗಳಿಗೆಲ್ಲಾ ಒಬ್ಬನೇ ಯಜಮಾನನಾದ ಭಗವಂತನನ್ನು ಹೊಂದುವುದಿಲ್ಲ. ದೇವತೆಗಳನ್ನು ಆಶ್ರಯಿರುವವರು ಆಯಾದೇವತೆಯೊಂದಿಗೆ ನಾಶವನ್ನು ಹೊಂದುತ್ತಾರೆ ; ಆದರೆ ಭಗವಂತನನ್ನೇ ಆರಾಧಿಸುವವರು ನಾಶರಹಿತನೂ ಶ್ರೇಷ್ಠನೂ ಆದ ಭಗವಂತನನ್ನೇ ನಾಶರಹಿತರಾಗಿ ಹೊಂದುತ್ತಾರೆ (ಶ್ಲೋಕ—೨೩).

## ಕೆಲವರು ಅರ್ಥಕಾಮ ಪುರುಷಾರ್ಥಗಳನ್ನು ಪಡೆಯಲು ಅನ್ಯದೇವತೆಗಳನ್ನು ಬಿಟ್ಟು ಭಗವಂತನನ್ನೇ ಪೂಜಿಸುತ್ತಾರೆ

ಯಜ್ಞಯಾಗಾದಿ ಪುಣ್ಯಕರ್ಮಗಳನ್ನು ಮಾಡುತ್ತಿರುವ ಜನರಿಗೆ ಕಷ್ಟನಷ್ಟಗಳುಂಟಾದಾಗ ಸ್ವಪ್ರಯತ್ನದಿಂದ ಐಶ್ವರ್ಯ, ಅಧಿಕಾರ ಮತ್ತು ಕೀರ್ತಿ ಲಭಿಸದಿದ್ದಾಗ ಮತ್ತು ಮನುಷ್ಯನ ಆಧೀನದಲ್ಲಿ ಇಲ್ಲದಿರುವ ಆದಿ ಭೌತಿಕ ಆದಿ ದೈವಿಕ ದುಃಖ ಗಳುಂಟಾದಾಗ ಭಗವಂತನ ಕೃಪೆಯಿಂದ ಅವರಿಗೆ ಆ ಭಗವಂತನ ಸ್ಮರಣೆಯುಂಟಾಗುವುದು. ಆಗ ಅವರು ಐಹಿಕ, ಆಮುಷ್ಮಿಕ, ಕಷ್ಟಗಳು ತೊಲಗುವುದಕ್ಕೂ, ಆರೋಗ್ಯ ಐಶ್ವರ್ಯ, ಅಧಿಕಾರ ಕೀರ್ತಿಗಳು ವೃದ್ಧಿಯಾಗುವುದಕ್ಕೂ ಮತ್ತು ಕಾಲ ವಾದ ಮೇಲೆ ಸ್ವರ್ಗವನ್ನು ಪಡೆಯುವುದಕ್ಕೂ ಅನ್ಯದೇವತೆಗಳ ಪೂಜೆಗಳನ್ನು ಮಾಡದೆ ಭಗವಂತನನ್ನೇ ಪ್ರಾರ್ಥಿಸಿ ಪೂಜೆ ಮಾಡುತ್ತಾರೆ. ಇಂಥಹವರಲ್ಲಿ ಆರೋಗ್ಯವನ್ನೂ, ಅಶ್ವರ್ಯ ವನ್ನೂ, ಪ್ರತಿಷ್ಠೆಯನ್ನೂ ಕಳೆದುಕೊಂಡು ಅವವನ್ನು ಪುನಃ ಹೊಂದಲು ಅಪೇಕ್ಷಿಸಿ ಅದಕ್ಕಾಗಿ ಭಗವಂತನನ್ನು ಭಜಿಸುವವ ನನ್ನು "ಆರ್ತ" ನೆಂದು ಕರೆದಿದೆ. ಎಂದೂ ಐಶ್ವರ್ಯಾದಿಗಳನ್ನು ಹೊಂದದೆ ಇದ್ದು ಅವುಗಳನ್ನು ಹೊಂದಲೂ ಮತ್ತು ಕಾಲವಾದ ಮೇಲೆ ಸ್ವರ್ಗಸುಖವನ್ನು ಪಡೆಯಲೂ ಭಗವಂತನನ್ನು "ಅರ್ಥಾರ್ಥಿ" ಎಂದು ಕರೆದಿದೆ. ಈ ಇಬ್ಬರು ಭಗವದ್ಭಕ್ತರುಗಳು ಕೀಳುದರ್ಜೆಯವರು. ಇವರುಗಳಿಗಿಂತ "ಜಿಜ್ಞಾಸು" ಮತ್ತು "ಜ್ಞಾನಿ" ಎಂಬ ಭಗವದ್ಭಕ್ತರು ಶ್ರೇಷ್ಠರು. ತಾನು ಸ್ವಪ್ರಯ ತ್ನದಿಂದ. ಅಂದರೆ ಯೋಗಭ್ಯಾಸದಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯಲಾರದೆ ಆತ್ಮ ಸಾಕ್ಷಾತ್ಕಾರವನ್ನು ದಯಪಾಲಿಸ ಬೇಕೆಂದು ಭಗವಂತನನ್ನು ಭಜಿಸುವವನೇ ಜಿಜ್ಞಾಸುವು ಇವನು. ತನ್ನ ನಿಜ ಆತ್ಮಸ್ವಸೂಪದ ಆನಂದವನ್ನು ಪಡೆಯುವುದಕ್ಕಾಗಿ ಭಗವಂತನನ್ನು ಆಶ್ರಯಿಸಿ ಪೂಜಿಸುವವನು. ಈ ಉತ್ತಮ ಫಲವು ಅರ್ಥ, ಕಾಮ, ಪುರುಷಾರ್ಥ ಫಲಗಳಿಗಿಂತ ದುಃಖ ಮಿಶ್ರವಿಲ್ಲದೆ ಶಾಶ್ವತವಾಗಿರುವುದರಿಂದ ಬಹು ಮೇಲಾದುದು. (ಶ್ಲೋಕ ೧೬)

## ಜ್ಞಾನಿಯು ಯಾರು ? ಅವನೇ ಭಗವದ್ಭಕ್ತರಲ್ಲೆಲ್ಲಾ ಶ್ರೇಷ್ಠನು.

ಯಾವ ಭಕ್ತನು ಕಳೆದು ಹೋದ ಆರೋಗ್ಯ ಐಶ್ವರ್ಯಾದಿ ಗಳನ್ನು ಪಡೆಯುವುದಕ್ಕೂ, ಹೊಸದಾಗಿ ಆರೋಗ್ಯ ಐಶ್ವರ್ಯಾದಿ ಗಳನ್ನು ಹೊಂದುವುದಕ್ಕೂ, ಸ್ವರ್ಗಗಳ ಸುಖವನ್ನು ಕಾಲವಾದ ಮೇಲೆ ಅನುಭವಿಸುವುದಕ್ಕೂ ಮತ್ತು ಆತ್ಮ ಸಾಕ್ಷಾತ್ಕಾರದ ವಿಕಾಸವನ್ನೂ ಆನಂದವನ್ನೂ ಪಡೆಯುವುದಕ್ಕೂ ಭಗವಂತ ನನ್ನು ಪ್ರಾರ್ಥಿಸದೆ, ಪೂಜಿಸದೆ, ಇರುವನೋ ಮತ್ತು ಭಗವಂತನ ಸಾಕ್ಷಾತ್ಕಾರವನ್ನೇ ತಾನು ಪಡೆದು, ಅವನನ್ನು ಹೊಂದಿ, ಭಗವದಾನಂದವನ್ನು ಪಡೆಯುವುದಕ್ಕಾಗಿ ಭಗವಂತನನ್ನೇ ಮರೆಹೊಕ್ಕು, ಅವನನ್ನು ಭಜಿಸಿ ಪೂಜಿಸುತ್ತಾನೆಯೋ ಅವನೇ "ಜ್ಞಾನಿ" ಎಂಬ ಮಹಾಭಕ್ತನು (ಶ್ಲೋಕ–೧೬). ಆರ್ತ, ಅರ್ಥಾರ್ಥಿ, ಜಿಜ್ಞಾಸು, ಜ್ಞಾನಿ ಎಂಬ ನಾಲ್ಕು ವಿಧ ಭಕ್ತರೂ ಶ್ಲಾಘ್ಯರಾದವರೇ ಆಗಿರುತ್ತಾರೆ ; ಏಕೆಂದರೆ ಇವರುಗಳು ಪುಣ್ಯ ಕರ್ಮಗಳನ್ನು ಮಾಡುತ್ತಾ, ತನ್ಮೂಲಕ ಪ್ರಕೃತಿ ಸಂಬಂಧದಿಂದ ಉಂಟಾಗುವ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಶೋಕ ಎಂಬ ವಾಸನೆಗಳನ್ನು ನಾಶಮಾಡಲು ಪ್ರಯತ್ನಿಸುತ್ತಾ, 'ಪ್ರಕೃತಿಯ ಛಾಯೆಯಿಂದ ಉಂಟಾಗುವ ದುಃಖಗಳನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಭಗವಂತನಲ್ಲಿ ಶರಣಾ ಗತಿಯನ್ನು ಮಾಡಿ ಅವನನ್ನು ಉಪಾಸಿಸುವರು (ಶ್ಲೋಕ–೨೮) ಆದರೆ ಇವರುಗಳಲ್ಲಿ "ಜ್ಞಾನಿಯಾದ ಭಕ್ತನು ಮಾತ್ರ ಅತ್ಯಂತ ಶ್ರೇಷ್ಠನಾಗಿರಲು ಕಾರಣವೇನು ? ಮೊದಲು ಮೂರು ವಿಧ ಭಕ್ತರೂ ತಾವು ಇಚ್ಛೆಪಡುವ ಭಗವಂತನಲ್ಲದ ಬೇರೆ ಬೇರೆ ಫಲಗಳ ಪ್ರಾಪ್ತಿಗಾಗಿ ಭಗವಂತನನ್ನು 'ಆಶ್ರಯಿಸಿ ಪೂಜಿಸು ವರು. ಆದುದರಿಂದ ಅವರು ತಾವು ಅಪೇಕ್ಷಿಸುವ ಫಲಗಳು ಲಭಿಸುವವರೆಗೆ ಮಾತ್ರ ಭಗವಂತನಲ್ಲಿ ಮನಸ್ಸುಳ್ಳವರಾಗಿರು ತ್ತಾರೆ ; ಅಂದರೇನು, ಅವರು ಭಗವಂತನಲ್ಲಿ ಮಾಡುವ ಭಕ್ತಿಯು ತಾವು ಇಚ್ಛೆಪಡುವ ಫಲಗಳಿಗೆ ಸಾಧನವಾಗಿದೆಯೇ ಹೊರತು ಅವರಿಗೆ ಭಗವಂತನ ಮೇಲೆ ನಿಜವಾದ ಪ್ರೀತಿಯಿಂದ ಉಂಟಾದುದಲ್ಲ. ಆದರೆ ಜ್ಞಾನಿಯಾದ ಭಕ್ತನ ರೀತಿಯೇ ಬೇರೆ. ಅವನು ಭಗವಂತನ ಸಾಕ್ಷಾತ್ಕಾರವನ್ನೇ ಪಡೆಯ ಬೇಕೆಂಬ ಒಂದೇ ಧ್ಯೇಯದಿಂದ, ಸರ್ವದಾ ಭಗವಂತನಲ್ಲೇ ನೆಟ್ಟ ಮನಸ್ಸುವುಳ್ಳವನಾಗಿ, ಸದಾ ಭಗವಂತನೊಂದಿಗೆ ಸೇರಿದ್ದಾನೆ ; ಅಂದರೆ ನಿತ್ಯಯುಕ್ತನಾಗಿದ್ದಾನೆ. ಭಗವಂತನೊಬ್ಬನಲ್ಲೇ ಭಕ್ತಿ ಯನ್ನು ಹೊಂದಿದವನಾಗಿ ಏಕಭಕ್ತನಾಗಿದ್ದಾನೆ. ಅದೂ ಅಲ್ಲದೆ ಅವನು ಭಕ್ತಿಯನ್ನು ಸಾಧನವಾಗಿಯೂ ಅಲ್ಲದೆ ಫಲವಾಗಿಯೂ ಹೊಂದಿದ್ದಾನೆ. ಏಕೆಂದರೆ ಅವನ ಭಕ್ತಿಯು ಭಗವಂತನ ಮೇಲೆ ಅತ್ಯಂತ ಪ್ರೀತಿಯಿಂದ ಉಂಟಾಗಿದೆಯೇ ಹೊರತು ಇತರ ಫಲ ಗಳ ಅಪೇಕ್ಷೆಯಿಂದ ಉಂಟಾದುದಲ್ಲ. ಅವನಿಗೆ ಭಗವಂತನ ಮೇಲೆ ಅತ್ಯಧಿಕವಾದ ಪ್ರೀತಿ ಇದೆ. ಆದುದರಿಂದ ಅವನೂ ಕೂಡ ಭಗವಂತನಿಗೂ ಅತ್ಯಂತ ಪ್ರಿಯನಾಗಿದ್ದಾನೆ. ಅಂದ ರೇನು, ಭಗವಂತನು ಅಂಥಾ ಜ್ಞಾನಿಯನ್ನು ತನ್ನವನೆಂದೇ ಭಾವಿಸುತ್ತಾನೆ. (ಶ್ಲೋಕಗಳು–೧೭–೧೮).

(Re-printed from Mysore Vysya Patrika September-October 1960)

# ಭಗವದ್ಗೀತಾ ಅಧ್ಯಾಯ ಏಳು

## ಜ್ಞಾನಿಯು ಭಗವಂತನನ್ನು ಪೂಜಿಸುವ ರೀತಿ

ಭಕ್ತನಾದ ಜ್ಞಾನಿಯು ಭಗವಂತನಲ್ಲೇ ನೆಟ್ಟ ಮನಸ್ಸುಳ್ಳವನಾಗಿರುವನೆಂದೂ, ಭಗವಂತನನ್ನೇ ಸರ್ವೋತ್ತಮ ಗತಿಯಸಾಗಿ ಹೊಂದಿರುವುದರಿಂದ ಭಗವಂತನ ಸ್ಮರಣೆಇಲ್ಲದಿದ್ದರೆ ತನ್ನ ಆತ್ಮಧಾರಣೆಯನ್ನು ಮಾಡಲು ಅಶಕ್ತನಾಗಿ ಇರುವನೆಂಮೂ ಮತ್ತು ಭಗವಂತನೂ ಕೂಡ ಜ್ಞಾನಿಯು ತನ್ನ ಆತ್ಮಧಾರಣೆಗೆ ಕಾರಣನೆಂದು ಭಾವಿಸುವನೆಂದೂ ಇಲ್ಲಿಯವರೆಗೆ ತಿಳಿದಿದ್ದೇವೆ. ಇನ್ನು ಜ್ಞಾನಿಗಳಾದ ಭಕ್ತರು ಯಾವ ರೀತಿಯಲ್ಲಿ ಭಗವಂತನನ್ನು ಭಕ್ತಿಯಿಂದ ಉಪಾಸನೆ ಮಾಡುತ್ತಾರೆಂಬುದನ್ನು ತಿಳಿಯೋಣ. ಯಾವ ಭಕ್ತರು ದುಃಖಗಳನ್ನು ತಪ್ಪಿಸಿಕ್ಕೊಳ್ಳುವುದಕ್ಕಾಗಿ ಹುಟ್ಟು, ಮುಪ್ಪು, ಸಾವುಗಳಿಂದ ಮುಕ್ತರಾಗಬೇಕೆಂದು ಇಚ್ಛಿಸುವರೋ ಅವರು ಬ್ರಹ್ಮಜ್ಞಾನವನ್ನೂ, ಸಮಸ್ತಕರ್ಮಗಳ ಜ್ಞಾನವನ್ನೂ, ಸಮಸ್ತವಾದ ಅಧ್ಯಾತ್ಮಜ್ಞಾನವನ್ನೂ ಪಡೆಯಬೇಕು. (ಶ್ಲೋಕ ೨೯). ಅವರು ಅದಿದೈವದೊಂದಿಗೂ, ಅಧಿಯಜ್ಞದೊಂದಿಗೂ ಭಗವಂತನನ್ನು ತಿಳಿಯುತ್ತಾ ಸಾವಧಾನ ಮನಸ್ಕರಾಗಿ ಮರಣಕಾಲದಲ್ಲಿಯೂ ಭಗವಂತನನ್ನು ತಿಳಿಯುವರು. (ಶ್ಲೋಕ ೩೦). ಆದರೆ ಭಕ್ತರಾದ ಜ್ಞಾನಿಗಳು ತಮ್ಮ ಜೀವಿತ ಕಾಲದಲ್ಲೆಲ್ಲಾ ಸದಾ ಭಗವಂತನಲ್ಲೇ ಸಕ್ತವಾದ ಮನಸ್ಸುಳ್ಳವರಾಗಿ, ಭಗವಂತನನ್ನೇ ಆಶ್ರಯಿಸಿ ಭಕ್ತಿಯೋಗವನ್ನು ಆಚರಿಸುತ್ತಾರೆ. ಅಂದರೇನು, ಅವರು ತೈಲಧಾರೆಯಂತೆ ಅವಿಚ್ಛಿನ್ನವಾಗಿ (ಎಡಬಿಡದೆ) ಸರ್ವದಾ ಭಗವಂತನನ್ನು ಪ್ರೀತಿಯಿಂದಲೂ ಸಂತೋಷದಿಂದಲೂ ಸ್ಮರಿಸುತ್ತಿರುವರು. ಇದನ್ನೇ ಧ್ರುವಾಸ್ಮೃತಿ ಎಂದೂ, ಧ್ಯಾನವೆಂದೂ, ಉಪಾಸನೆಯೆಂದೂ ಆಚಾರ್ಯರು ಕರೆದಿದ್ದಾರೆ. ಈ ಭಕ್ತಿಮಾರ್ಗವನ್ನೇ ಜ್ಞಾನಿಗಳು ಸದಾ ಆಚರಿಸುವರು. ಅವರಿಗೆ ಭಗವತ್ಪ್ರಾಪ್ತಿಯೇ ಮುಖ್ಯವಾದ ಗುರಿಯು ; ಭಗವಂತನಲ್ಲಿ ; ಶರಣಾಗತಿಯೇ ಉಪಾಯವು. (ಶ್ಲೋಕ–೧). ಹೀಗೆ ಸಮಸ್ತ ಜಗತ್ತು ವಾಸುದೇವನಲ್ಲದೆ ಬೇರೆಯಲ್ಲವೆಂಬ ಜ್ಞಾನದಿಂದ ಕೂಡಿದವರಾಗಿ, ಅಂದರೆ ಭಗವಂತನನ್ನೇ ಪರಮಪ್ರಾಪ್ಯನನ್ನಾಗಿಯೂ, ಪ್ರಾಪಕನನ್ನಾಗಿಯೂ ಪರಿಗಣಿಸುತ್ತಾ, ಕೊನೆಗೆ ತಮ್ಮ ಮನೋರಥವೆಲ್ಲಾ ಭಗವಂತನೇ ಆಗಿ, ಅವನನ್ನೇ ಶರಣುಹೊಂದುವ ಮಹಾಮನಸ್ಸುಳ್ಳ ಮಹಾತ್ಮರು ಲೋಕದಲ್ಲಿ ದುರ್ಲಭರು. ಆದಾಗ್ಯೂ ಭಕ್ತರು ಅನೇಕ ಜನ್ಮಗಳು ಸತತವಾಗಿ ಪುಣ್ಯಕರ್ಮಗಳನ್ನೂ ಮಾಡುತ್ತಾ ಭಕ್ತಿಯೋಗವನ್ನು ಮಾಡುತ್ತಿದ್ದರೆ ಕೊನೆಗೆ ಅವರು ಭಗವಂತನನ್ನು ಹೊಂದುವುದರಲ್ಲಿ ಸಂದೇಹವಿಲ್ಲ ಎಂದು ಶ್ರೀ ಕೃಷ್ಣನು ಭರವಸೆಯನ್ನು ಕೊಟ್ಟಿದ್ದಾನೆ (ಶ್ಲೋಕ ೧೯).

## ಭಗವದ್ಭಕ್ತನಾದ ಜ್ಞಾನಿಯು ಪಡೆಯುವ ಮಹಾಫಲವು.

ಮೇಲೆ ವಿವರಿಸಿದಂತೆ ಭಗವಂತನಲ್ಲೇ ಸಕ್ತವಾದ ಮನಸ್ಸುಳ್ಳವನಾಗಿ, ಭಗವಂತನನ್ನೇ ಆಶ್ರಯಿಸಿ, ಭಗವಂತನ ಯೋಗವನ್ನು ಅಂದರೆ ಭಕ್ತಿಯೋಗವನ್ನು ಆಚರಿಸುವ ಜ್ಞಾನಿಯು ಭಗವಂತನನ್ನು ಯಥಾವತ್ತಾಗಿ ಅಂದರೆ ಅವನು ಹೇಗೆ ಇರುವನೋ ಹಾಗೆ ಸಾಕ್ಷಾತ್ಕರಿಸುವನು. (ಶ್ಲೋಕ–೧) ; ಏಕೆಂದರೆ, ಯಾರು ಚಿದಚಿದ್ವಸ್ತುಗಳನ್ನು ಉಪಾಸಿಸುವುದಕ್ಕೆ ಬದಲು ಭಗವಂತನಲ್ಲಿ ಶರಣಾಗತರಾಗಿ ಅವನನ್ನು ಉಪಾಸನೆ ಮಾಡುತ್ತಾರೋ ಅವರು ದುಸ್ತರವಾದ ಪ್ರಕೃತಿಯ ಮಾಯೆಯನ್ನು ದಾಟುತ್ತಾರೆ. (ಶ್ಲೋಕ ೧೪). ಇಷ್ಟೇ ಅಲ್ಲ ; ಭಗವಂತನ ನಿಜಸ್ವರೂಪವನ್ನು ವಿಜ್ಞಾನದೊಂದಿಗೆ ತಿಳಿಯುವನು. ವಿಜ್ಞಾನವೆಂದರೆ ವಿವಿಕ್ತಾಕಾರ ವಿಷಯ ಜ್ಞಾನವು ; ಅಂದರೆ ಭಗವಂತನು ತನಗಿಂತ ಬೇರೆಯಾದ ಸಮಸ್ತ ಚಿದಚಿತ್ತು ವಸ್ತುಗಳ ಸಮೂಹಗಳಿಗಿಂತ ವಿಲಕ್ಷಣನಾಗಿರುವ ಜ್ಞಾನ ಈ ಜ್ಞಾನವೊಂದಿಗೆ ಜ್ಞಾನಿಯು ಭಗವಂತನನ್ನು ಸಾಕ್ಷಾತ್ಕರಿಸುವನು. ಹೀಗೆ ವಿಜ್ಞಾನ ಸಹಿತವಾದ ಭಗವಂತನ ಜ್ಞಾನ ಉಂಟಾದರೆ ಆಗ ಮಾನವನಿಗೆ ಮತ್ತೆ ತಿಳಿಯಬೇಕಾದ ಅಂಶವು ಯಾವುದೂ ಉಳಿದಿರುವುದಿಲ್ಲ. ಅಂತಹ ಸಂಪೂರ್ಣವಾದ ಜ್ಞಾನವನ್ನು ಭಕ್ತನಾದ ಜ್ಞಾನಿಯು ಪಡೆಯುವನು. (ಶ್ಲೋಕ ೨).

# ಭಗವದ್ಗೀತಾ ಅಧ್ಯಾಯ ಎಂಟು

### ಭಕ್ತರು ಮರಣಕಾಲದಲ್ಲಿ ಭಗವಂತನನ್ನು ಹೇಗೆ ಧ್ಯಾನ ಮಾಡಬೇಕು? ಕಾಲವಾದಮೇಲೆ ಅವರ ಗತಿಯೇನು?

(ಶ್ಲೋಕಗಳು ಒಂದು ಮತ್ತು ಎರಡು)

ಭಗವಂತನನ್ನು ಉಪಾಸಿಸುವ ಭಕ್ತರು ಆರ್ತ, ಅರ್ಥಾರ್ಥಿ, ಜಿಜ್ಞಾಸು ಮತ್ತು ಜ್ಞಾನಿ ಎಂದು ನಾಲ್ಕು ವಿಧವಾಗಿ ಇರುವ ರೆಂದು ಏಳನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ತಿಳಿಸಿದನು. ಆರ್ತ ಮತ್ತು ಅರ್ಥಾರ್ಥಿ ಎಂಬ ಭಕ್ತರನ್ನು ಒಟ್ಟಿಗೆ ಸೇರಿಸಿ "ಐಶ್ವರ್ಯಾರ್ಥಿಗಳು" ಎಂದು ಕರೆದರೆ ಐಶ್ವ ರ್ಯಾರ್ಥಿ, ಜಿಜ್ಞಾಸು ಮತ್ತು ಜ್ಞಾನಿ ಎಂಬುದಾಗಿ ಭಕ್ತರನ್ನು ಮೂರುಗುಂಪುಗಳಾಗಿ ವಿಭಾಗಿಸಬಹುದು. ಈ ತ್ರಿವಿಧ ಭಕ್ತರುಗಳು ಬ್ರಹ್ಮ, ಅಧ್ಯಾತ್ಮ, ಕರ್ಮ, ಅಧಿಭೂತ, ಅಧಿ ದೈವ ಮತ್ತು ಈ ದೇಹದಲ್ಲಿರುವ ಅಧಿಯಜ್ಞ ಎಂಬೀ ತತ್ವ ವಿಷಯಗಳನ್ನು ಹೇಗೆ ತಿಳಿಯಬೇಕು ಮತ್ತು ಇವರೆಲ್ಲರೂ ತಮ್ಮ ಮರಣಕಾಲದಲ್ಲಿ ಭಗವಂತನನ್ನು ಯಾವ ಕ್ರಮದಲ್ಲಿ ಅಥವ ರೀತಿಯಲ್ಲಿ ಧ್ಯಾನಮಾಡುತ್ತಾರೆ ಮತ್ತು ಕಾಲವಾದಮೇಲೆ ಯಾವ ಯಾವ ಫಲಗಳನ್ನು ಹೊಂದುತ್ತಾರೆ ಎಂದು ಈಗ ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನೆಮಾಡುತ್ತಾನೆ. ಈ ವಿಷಯಗಳನ್ನು ಶ್ರೀಕೃಷ್ಣನು ಈ ಅಧ್ಯಾಯದಲ್ಲಿ ನಾವೆಲ್ಲರೂ ತಿಳಿಯುವ ಹಾಗೆ ಉಪದೇಶಮಾಡಿದ್ದಾನೆ.

### ತ್ರಿವಿಧ ಭಕ್ತರೂ ತಿಳಿಯಬೇಕಾದ ಮೇಲಿನ ತತ್ವ ವಿಷಯಗಳ ಜ್ಞಾನ

(ಶ್ಲೋಕಗಳು ಮೂರು ಮತ್ತು ನಾಲ್ಕು)

ಐಶ್ವರ್ಯಾರ್ಥಿಗಳು ಪ್ರಪಂಚದಲ್ಲಿ ಸಂಪತ್ತನ್ನು ಪಡೆದು ಅಂದರೆ ಧಾರಕ, ಪೋಷಕ, ಭೋಗ್ಯ ಮತ್ತು ವಿಲಾಸವಸ್ತು ಗಳನ್ನು ಪಡೆದು ವಿಧವಿಧಗಳಾದ ಸುಖಗಳನ್ನು ಪಡೆಯಲು ಆಶಿಪಡುತ್ತಾರೆ ಮತ್ತು ಅದಕ್ಕಾಗಿಯೇ ಭಗವಂತನನ್ನು ಉಪಾ ಸನೆ ಮಾಡುತ್ತಾರೆ. ಇವರುಗಳು "ಅಧಿಭೂತವನ್ನೂ, ಅಧಿ ದೈವವನ್ನೂ ಮತ್ತು ಅಧಿಯಜ್ಞನನ್ನೂ" ತಿಳಿಯಬೇಕು. ಅಧಿ ಭೂತವನ್ನು ತಿಳಿಯಬೇಕು ಅಂದರೇನು? ಅವರು ಪೃಥ್ವೀ, ಅಪ್ಪು, ತೇಜಸ್ಸು, ವಾಯು, ಆಕಾಶವೆಂಬ ಪಂಚಮಹಾಭೂತ ಗಳನ್ನು ಒಳಗೊಂಡ ಜಗತ್ತಿನ ಪದಾರ್ಥಗಳನ್ನೂ, ಅವುಗಳ ಪರಿಣಾಮ ವಿಶೇಷವಾದ ಮತ್ತು ನಶ್ವರಸ್ವಭಾವವುಳ್ಳ ವಿಲಕ್ಷಣ ವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೇ ಮೊದಲಾದವು ಗಳನ್ನೂ ತಿಳಿಯಬೇಕು. "ಅಧಿದೈವ" ವನ್ನು ತಿಳಿಯಬೇಕು ಎಂದರೇನು? ಈ ಶಬ್ದಾದಿ ವಿಷಯಗಳನ್ನು ಭೋಗಿಸುವ ಶರೀರದಿಂದ ಕೂಡಿರುವ ಪುರುಷನನ್ನು ತಿಳಿಯಬೇಕು. ಈ ಮಾನವ ಪುರುಷನು ಇಂದ್ರಾದಿ ಮೊದಲಾದ ದೇವತೆಗಳು ಅನುಭವಿಸುವ ಭೋಗಗಳಿಗಿಂತ ವಿಲಕ್ಷಣವಾದ ಶಬ್ದಾದಿ ವಿಷಯಗಳನ್ನು ಭೋಗಿಸುತ್ತಾ, ಅವರಿಗಿಂತ ಈ ವಿಚಾರದಲ್ಲಿ ಮೇಲಾಗಿರುವುದರಿಂದ ಇವನನ್ನು ಗೀತೆಯಲ್ಲಿ "ಅಧಿದೈವ" ಎಂದು ಕರೆದಿದೆ. "ಅಧಿಯಜ್ಞ" ನನ್ನು ತಿಳಿಯಬೇಕು ಎಂದ ರೇನು? ಐಶ್ವರ್ಯಾರ್ಥಿಗಳು ಸ್ವಪ್ರಯತ್ನದಿಂದ ಹೊಂದಲಾರದ ತಮ್ಮ ಇಚ್ಛೆಗಳ ಪೂರ್ತಿಗಾಗಿ ಯಜ್ಞಗಳನ್ನು ಮಾಡುವದು ಅದುದರಿಂದ ಯಜ್ಞಯಾಗಾದಿಗಳಿಂದಲೂ ನಿತ್ಯನೈಮಿತ್ತಿಕಾದಿ ಕರ್ಮಗಳಿಂದಲೂ ಆರಾಧಿಸಲ್ಪಡುವವನು ಯಾರು ಎಂಬುದನ್ನು ತಿಳಿಯಬೇಕು. ಕೆಲವರು ಇಂದ್ರಾದಿ ದೇವತೆಗಳೇ ಈ ಯಜ್ಞ ಯಾಗಾದಿಗಳಿಂದ ಆರಾಧಿಸಲ್ಪಡುವವರು ಎಂದು ಹೇಳುತ್ತಾರೆ. ಆದರೆ ಇಂದ್ರನೇ ಮೊದಲಾದ ದೇವತೆಗಳೆಲ್ಲಾ ಭಗವಂತನ ಶರೀರಗಳಾಗಿರುವುದರಿಂದಲೂ ಮತ್ತು ಭಗವಂತನೇ ಅವರಲ್ಲಿ ಆತ್ಮನಾಗಿ ನಿಂತು ಯಜ್ಞಗಳಫಲಗಳನ್ನು ಕೊಡುವುದರಿಂದಲೂ ಭಗವಂತನೇ ನಿಜವಾಗಿ ಸರ್ವಯಜ್ಞಗಳಿಂದ ಆರಾಧಿಸಲ್ಪಡು ವವನು "ಅಧಿಯಜ್ಞ" ನನ್ನು ನೆನೆಯಬೇಕು ಅಂದರೆ ಮಹಾಯಜ್ಞವೇ ಮೊದಲಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡುವಾಗಲೆಲ್ಲಾ ಅವುಗಳಿಂದ ನಿಜವಾಗಿ ಆರಾಧಿಸಲ್ಪಡುವ "ಅಧಿಯಜ್ಞನು" ಭಗವಂತನೇ ಎಂದು ನೆನೆಯುತ್ತಿರಬೇಕು.

ಜಿಜ್ಞಾಸುಗಳು ಜರಾಮರಣಗಳನ್ನು ಹೋಗಲಾಡಿಸಿ ಕೊಂಡು ಶರೀರರಾದಿಗಳಿಂದ ಬಿಡುಗಡೆಯನ್ನು ಹೊಂದಿ ತಾವೇ ಆದ ಶುದ್ಧ ಪ್ರತ್ಯಗಾತ್ಮಸ್ವರೂಪ ಸಾಕ್ಷಾತ್ಕಾರ ರೂಪವಾದ ಮೋಕ್ಷವನ್ನು ಪಡೆಯಬೇಕೆಂದು ಇಚ್ಛಿಸುತ್ತಾರೆ ಮತ್ತು ಆ ಸಾಕ್ಷಾತ್ಕಾರವನ್ನು ಪಡೆಯುವುದಕ್ಕಾಗಿ ಭಗವಂತನನ್ನು ಪೂಜಿಸುತ್ತಾರೆ. ಇವರು "ಬ್ರಹ್ಮ–ಅಧ್ಯಾತ್ಮ–ಕರ್ಮ" ಇವುಗಳ ಸ್ವರೂಪವನ್ನು ತಿಳಿಯಬೇಕು. "ಬ್ರಹ್ಮಸ್ವರೂಪ" ತಿಳಿಯಬೇಕು ಎಂದರೇನು? ಪ್ರಕೃತಿ ಸಂಬಂಧವನ್ನೇ ಪಡೆಯ ದಿರುವ ಶುದ್ಧಪ್ರತ್ಯಗಾತ್ಮಸ್ವರೂಪವನ್ನು ತಿಳಿಯಬೇಕು ಈ ಆತ್ಮಸ್ವರೂಪವು ಶ್ರೇಷ್ಠವಾದುದಾಗಿಯೂ ಮತ್ತು ನಾಶರಹಿತ

ವಾಗಿಯೂ ಇರುವುದು. " ಅಧ್ಯಾತ್ಮಸ್ವರೂಪ " ವನ್ನು ತಿಳಿಯಬೇಕು ಎಂದರೇನು ? ಸಂಸಾರ ದೆಶೆಯಲ್ಲಿ ಜೀವಾತ್ಮನಿಗೆ ಸೂಕ್ಷ್ಮಭೂತಗಳ ಸಂಬಂಧವಿರುವುದು ಮತ್ತು ಅವುಗಳಿಂದ ಉಂಟಾಗಿರುವ ವಾಸನಾರೂಪವಾದ ಪ್ರಕೃತಿ ವಿಶೇಷಕ್ಕೆ ಅವನು ಒಳಪಟ್ಟಿರುವನು. ಹೀಗೆ ಬದ್ಧದೆಶೆಯಲ್ಲಿ ಜೀವಾತ್ಮನನ್ನು ನಿರ್ಭಂಧದಲ್ಲಿಟ್ಟು, ಅವನಿಗೆ ಸ್ವಭಾವವೆಂದು ಕರೆಯಲ್ಪಡುವ ಸೂಕ್ಷ್ಮಭೂತಗಳು ಮತ್ತು ವಾಸನೆಗಳು "ಅಧ್ಯಾತ್ಮ" ವೆಂದು ಕರೆಯಲ್ಪಡುತ್ತವೆ. ಜಿಜ್ಞಾಸುವು " ಬ್ರಹ್ಮ " ಅಥವ ಶುದ್ಧಪ್ರತ್ಯಗಾತ್ಮ ಸ್ವರೂಪವನ್ನು ಪ್ರಾಪ್ಯವಸ್ತು ಅಂದರೆ ಹೊಂದಬೇಕಾದ ವಸ್ತುವನ್ನಾಗಿ ತಿಳಿಯಬೇಕು. ಹಾಗೆಯೇ ಸಂಸಾರ ದೆಶೆಯಲ್ಲಿ ಅದರೊಂದಿಗೆ ಸಂಬಂಧಿಸಿಕೊಂಡಿರುವ ಸೂಕ್ಷ್ಮಭೂತ ಮತ್ತು ವಾಸನಾರೂಪವಾದ " ಅಧ್ಯಾತ್ಮ " ವೆಂಬ ಪ್ರಕೃತಿ ವಿಶೇಷವನ್ನು ತ್ಯಾಜ್ಯವಸ್ತು ಅಂದರೆ ತ್ಯಾಗಮಾಡತಕ್ಕ ವಸ್ತುವನ್ನಾಗಿ ತಿಳಿಯಬೇಕು. " ಕರ್ಮದ ಸ್ವರೂಪ "ವನ್ನು ತಿಳಿಯಬೇಕು. ಅಂದರೇನು ? ಜಿಜ್ಞಾಸುವು ಯಾವ ರೀತಿಗಳಲ್ಲಿ ಕರ್ಮಗಳನ್ನು ಮಾಡಿದರೆ ಅಥವ ತ್ಯಜಿಸಿದರೆ ತಾನು ಶುದ್ಧ ಪ್ರತ್ಯಗಾತ್ಮ ಸ್ವರೂಪ ಸಾಕ್ಷಾತ್ಕರವನ್ನು ಪಡೆಯಬಹುದು ಎಂಬುದನ್ನು ತಿಳಿಯಬೇಕು. ಪ್ರಪಂಚದಲ್ಲಿ ಸಾಮಾನ್ಯಜನರು ಮದುವೆಮಾಡಿಕೊಂಡು ಸಂಸಾರಿಗಳಾಗಿ ಮಕ್ಕಳನ್ನು ಪಡೆದು ಸುಖದುಃಖಗಳಿಂದ ಕೂಡಿದ ಜೀವನವನ್ನು ನಡೆಸುತ್ತಾರೆ. ಆದರೆ ಜಿಜ್ಞಾಸುವು ಈ ಸಂತಾನ ಉತ್ಪತ್ತಿಯೇ ಮೊದಲಾದ ಜೀವನದ ಕಾರ್ಯಗಳೆಲ್ಲವೂ ಒಟ್ಟಿನಲ್ಲಿ ಕ್ಲೇಶಗಳನ್ನು ಉಂಟುಮಾಡುತ್ತಾ ಜನ್ಮಮರಣಗಳಿಗೆ ಕಾರಣವಾಗುವುವು ಎಂದು ತಿಳಿದು ಅವುಗಳನ್ನು ತ್ಯಜಿಸುವುದಕ್ಕಾಗಿ ಬ್ರಹ್ಮಚರ್ಯಾದಿ ವ್ರತಗಳನ್ನು ಅಂದರೆ ನಿತ್ಯ ನೈಮಿತ್ತಿಕಾದಿ ಕರ್ಮಗಳನ್ನು ಕೈಗೊಳ್ಳಬೇಕು. ಆದುದರಿಂದ " ಕರ್ಮ ಸ್ವರೂಪ "ವನ್ನು ಜಿಜ್ಞಾಸುವು ಅಗತ್ಯವಾಗಿ ತಿಳಿಯಬೇಕು. ಹಾಗಾದರೆ ಜಿಜ್ಞಾಸುವು " ಅಧಿಯಜ್ಞ "ನ ಸ್ವರೂಪವನ್ನು ತಿಳಿಯಬೇಡವೆ ? ಜಿಜ್ಞಾಸುವೂ ಕೂಡ ತಾನು ಮಾಡಬೇಕಾದ ಕರ್ಮಗಳಿಂದ ಆರಾಧಿಸಲ್ಪಡುವವನು ನಿಜವಾಗಿ ಭಗವಂತನೇ (ಅಧಿಯಜ್ಞನೇ) ಹೊರತು ಬೇರೆ ಯಾವ ದೇವತೆಯೂ ಅಲ್ಲವೆಂಬುದನ್ನು ತಿಳಿದು ತಾನು ಮಾಡುವ ಕರ್ಮಗಳ ಕರ್ತೃತ್ವವನ್ನೂ, ಫಲಗಳನ್ನೂ, ಅವನಲ್ಲೇ ಸಮರ್ಪಿಸಬೇಕು.

ಜ್ಞಾನಿಯಾದ ಮನುಷ್ಯನು ಐಶ್ವರ್ಯವನ್ನಾಗಲೀ, ಶುದ್ಧ ಪ್ರತ್ಯಗಾತ್ಮಸ್ವರೂಪ ಸಾಕ್ಷಾತ್ಕಾರವನ್ನಾಗಲೀ ಇಚ್ಛಿಸುವುದಿಲ್ಲ ; ಅವನು ಭಗವಂತನ ಸಾಕ್ಷಾತ್ಕಾರವನ್ನೇ ಪಡೆಯಬೇಕೆಂದು ಅಥವ ಭಗವಂತನನ್ನೇ ಹೊಂದಬೇಕೆಂದು ಇಚ್ಛೆಪಡುತ್ತಾನೆ. ಈ ಮಹಾ ಫಲವನ್ನು ಪಡೆಯುವುದಕ್ಕಾಗಿ ಅವನು ಭಗವಂತನನ್ನೇ ಸದಾಕಾಲದಲ್ಲೂ ಉಪಾಸನೆ ಮಾಡುತ್ತಾನೆ. ಜ್ಞಾನಿಯು ಭಗವಂತನನ್ನೇ ಫಲವನ್ನಾಗಿಯೂ ಮತ್ತು ಅವನನ್ನೇ ಗತಿಯನ್ನಾಗಿಯೂ ಅಥವ ಉಪಾಯವನ್ನಾಗಿಯೂ ತಿಳಿದಿರುತ್ತಾನೆ. ಆದುದರಿಂದ ಅವನು " ಅಧಿಯಜ್ಞ " ನನ್ನು ಚೆನ್ನಾಗಿ ತಿಳಿದು ಶ್ರದ್ಧೆಯಿಂದ ಉಪಾಸನೆ ಮಾಡಬೇಕು ಅಂದರೇನು, ಅವನು " ಅಧಿಯಜ್ಞ " ನಾದ ಭಗವಂತನ ಸ್ವರೂಪವನ್ನು ಚೆನ್ನಾಗಿ ತಿಳಿದು ಸರ್ವಕಾಲಗಳಲ್ಲಿಯೂ ಅಂದರೆ ಸಮಸ್ತ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಮಾಡುತ್ತಿರುವ ಕಾಲಗಳಲ್ಲೆಲ್ಲಾ ಅವುಗಳಿಂದ ಆರಾಧಿಸಲ್ಪಡುವವನು ನಿಜವಾಗಿ ಭಗವಂತನೇ ಎಂದು ತಿಳಿದು ಅವನನ್ನೇ ಸರ್ವದ ನೆನೆಯುತ್ತಿರಬೇಕು. ಇಂಥಾ ಜ್ಞಾನಿಯು ಐಶ್ವರ್ಯಾರ್ಥಿಯ ಹಾಗೆ ಅಧಿಭೂತ ಮತ್ತು ಅಧಿದೈವಗಳಿಗೆ ಗಮನವನ್ನೇ ಕೊಡುವುದಿಲ್ಲ ; ಜಿಜ್ಞಾಸುವಿನ ಹಾಗೆ ಬ್ರಹ್ಮ, ಅಧ್ಯಾತ್ಮ ಮತ್ತು ಕರ್ಮಗಳಿಗೆ ಹೆಚ್ಚುಗಮನವನ್ನು ಕೊಡುವುದಿಲ್ಲ. ಆದರೆ ಅವನ ಮನಸ್ಸು ಸದಾಕಾಲದಲ್ಲಿಯೂ " ಅಧಿಯಜ್ಞ "ನಾದ ಭಗವಂತನಲ್ಲೇ ಪ್ರೀತಿಯಿಂದ ಕೂಡಿದ್ದಾಗಿ ನೆಟ್ಟಿರುವುದು ಮತ್ತು ಅವನು ಭಗವಂತನನ್ನೇ ಹೊಂದಬೇಕೆಂದು ಅಥವ ಅವನ ಸಾಕ್ಷಾತ್ಕಾರವನ್ನು ಪಡೆಯಬೇಕೆಂದು ಅತ್ಯಧಿಕತ್ವರೆಯನ್ನು ಪಡೆದಿರುವನು. ಆದರೆ ಐಶ್ವರ್ಯಾರ್ಥಿ ಮತ್ತು ಜಿಜ್ಞಾಸು ಉಪಾಸಕರೂ ಕೂಡ ಭಗವಂತನ ಭಕ್ತರೆಂಬುದನ್ನು ಮರೆಯಕೂಡದು. ಭಕ್ತರಲ್ಲೆಲ್ಲಾ ಜ್ಞಾನಿಯು ಮಹಾಶ್ರೇಷ್ಠನು ; ಏಕೆಂದರೆ ಅವನು ಹೊಂದಬೇಕಾದ ಫಲವೂ ಭಗವಂತನೇ ಮತ್ತು ಉಪಾಯವೂ ಭಗವಂತನೇ ಅಲ್ಲವೆ (೩–೪).

## ಮರಣಕಾಲದ ಸ್ಮರಣೆಯೇ ಮುಂದಿನ ಜನ್ಮದ ಸ್ವಭಾವಕ್ಕೆ ಕಾರಣವು.

(ಶ್ಲೋಕಗಳು ಐದು, ಆರು, ಏಳು)

ಮನುಷ್ಯನು ಭಗವಂತನನ್ನು ಸ್ಮರಿಸುತ್ತಾ ಶರೀರವನ್ನು ತ್ಯಜಿಸಿದರೆ ಖಂಡಿತವಾಗಿ ಭಗವಂತನನ್ನು ಹೊಂದುವನು. ಇದರಲ್ಲಿ ಸಂಶಯವೇ ಇಲ್ಲ ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಆದರೆ ಭಕ್ತನು ಯಾವರೀತಿ ಸ್ಮರಿಸುತ್ತಾನೆಯೋ ಹಾಗೆ ಅವನನ್ನು ಹೊಂದುವನು. ಅಂದರೆ ಐಶ್ವರ್ಯಾರ್ಥಿಯು ಐಶ್ವರ್ಯವನ್ನು ಹೊಂದುವುದಕ್ಕಾಗಿ ಮರಣಕಾಲದಲ್ಲಿ ಭಗವಂತನನ್ನು ಸ್ಮರಿಸಿದರೆ ಅವನು ಮುಂದಿನ ಜನ್ಮದಲ್ಲಿ ಐಶ್ವರ್ಯವನ್ನು ಪಡೆಯುವನು, ; ಜಿಜ್ಞಾಸುವು ಆತ್ಮಸಾಕ್ಷಾತ್ಕಾರವನ್ನು ಪಡೆಯುವುದಕ್ಕಾಗಿ ಮರಣಕಾಲದಲ್ಲಿ ಭಗವಂತನನ್ನು ಸ್ಮರಿಸಿದರೆ ಕಾಲವಾದ

ಮೇಲೆ ಆತ್ಮಸಾಕ್ಷಾತ್ಕಾರವನ್ನು ಪಡೆಯುತ್ತಾನೆ; ಹಾಗೆಯೇ ಜ್ಞಾನಿಯು ಭಗವಂತನನ್ನು ಹೊಂದುವುದಕ್ಕಾಗಿ ಮರಣಕಾಲದಲ್ಲಿ ಭಗವಂತನನ್ನೇ ಸ್ಮರಿಸಿದರೆ ಕಾಲವಾದ ಮೇಲೆ ಭಗವಂತನನ್ನೇ ಹೊಂದುತ್ತಾನೆ.' ಅಂದರೇನು, ಐಶ್ವರ್ಯವನ್ನಾಗಲೀ ಆತ್ಮಸಾಕ್ಷಾತ್ಕಾರವನ್ನಾಗಲೀ ಸ್ವಲ್ಪವೂ ಅಪೇಕ್ಷಿಸದೆ ಭಗವಂತನನ್ನೇ ಹೊಂದಲು, ಭಗವಂತನನ್ನೇ ಕೊನೆಯಕಾಲದಲ್ಲಿ ಸ್ಮರಿಸಿದರೆ ಅವನನ್ನೇ ಹೊಂದುವನು. (೫)

ಈ ಸಂದರ್ಭದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಜಗತ್ತಿನ ಒಂದು ಮುಖ್ಯವಾದ ನಿಯಮವನ್ನು ತಿಳಿಸಿದ್ದಾನೆ. ಅದೇನೆಂದರೆ ಮನುಷ್ಯರು ತಾವು ಸಾಯುವ ಕಾಲದಲ್ಲಿ ಅತ್ಯಧಿಕ ಆಶೆಯಿಂದ ಯಾವಯಾವ ಭಾವನೆಗಳನ್ನು ಮನಸ್ಸಿನಲ್ಲಿ ಸ್ಮರಿಸುತ್ತಾ ದೇಹವನ್ನು ಬಿಡುತ್ತಾರೆಯೋ ಆದೇ ಭಾವನೆಗಳನ್ನೇ ಅವರು ಮರಣಾನಂತರ ಹೊಂದುವರು. ಇದಕ್ಕೆ ನಿರ್ದಿಷ್ಟವಾಗಿ ಪುರಾಣದಲ್ಲಿರುವ ಆದಿಭರತನ ಕಥೆಯನ್ನು ಜ್ಞಾಪಿಸಿಕೊಳ್ಳಬಹುದು. ಹಾಗಾದರೆ, ಮನುಷ್ಯನು ತನ್ನ ಜೀವನವನ್ನೆಲ್ಲಾ ಅಧರ್ಮ ಮಾರ್ಗದಲ್ಲಿ ತನ್ನ ಇಚ್ಛೆಬಂದ ಹಾಗೆಲ್ಲಾ ಇಂದ್ರಿಯಸುಖಗಳನ್ನು ಅನುಭವಿಸುತ್ತಾ ನಿಶ್ಚಿಂತೆಯಾಗಿದ್ದು ಸಾಯುವುದಕ್ಕೆ ಸ್ವಲ್ಪ ಮುಂಚೆ ಕೊನೆಯ ಗಳಿಗೆಯಲ್ಲಿ ಮಾತ್ರ ಭಗವಂತನನ್ನು ಸ್ಮರಿಸಿದರೆ ಸಾಕು ಎಂದು ತೋರಬಹುದು. ಆದರೆ ಇದು ಸಾಧ್ಯವಿಲ್ಲ ಏಕೆಂದರೆ, ಮನುಷ್ಯನು ಸದಾಕಾಲದಲ್ಲಿಯೂ ಯಾವಯಾವ ಭಾವನೆಗಳನ್ನು ಸ್ಮರಿಸುತ್ತಾನೆಯೋ ಆದೇ ಭಾವನೆಗಳು ಅವನ ಹೃದಯದಲ್ಲಿ ಅಭ್ಯಾಸರೂಪವಾಗಿ ನೆಲೆಸಿ ಅವನಿಗೆ ತಾವಾಗಿಯೇ ಅಂತಿಮ ಕಾಲದಲ್ಲಿ ತೋರುವುವು. ಆದುದರಿಂದ ಆ ಸಾಯುವಕಾಲದಲ್ಲಿ ಮಾತ್ರ ಬೇರೆ ಯಾವ ಹೊಸ ಭಾವನೆಯನ್ನೂ ನೆನೆಸಿಕೊಳ್ಳಲು ಸಾಧ್ಯವಿಲ್ಲ. ಒಟ್ಟಿನಲ್ಲಿ, ಮನುಷ್ಯನಿಗೆ ಉಂಟಾಗುವ ಅಂತಿಮ ಸ್ಮೃತಿಯು ಯಾವುವೆಂದರೆ ಅವನು ತನ್ನ ಜೀವಿತಕಾಲದಲ್ಲೆಲ್ಲಾ ತನ್ನ ಮನಸ್ಸಿನಲ್ಲಿ ಪ್ರೀತಿಯಿಂದ ಹೆಚ್ಚಾಗಿ ಸ್ಮರಿಸುತ್ತಿರುವ ವಿಷಯಗಳೇ ಆಗಿರುತ್ತವೆ. (೬)

ಹಾಗಾದರೆ ಅಂತಿಮಕಾಲದಲ್ಲಿ ಭಗವಂತನನ್ನೇ ಸ್ಮರಿಸುವುದಕ್ಕೆ ಉಪಾಯವೇನು? ಮನುಷ್ಯನು ತಾನು ಬದುಕಿರುವ ಸರ್ವಕಾಲಗಳಲ್ಲಿಯೂ ಭಗವಂತನನ್ನು ಎಡಬಿಡದೆ ಸ್ಮರಿಸುತ್ತಾ ತನ್ನ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡುತ್ತಿರಬೇಕು ಆಗ ಅವನು ಭಗವಂತನಲ್ಲಿ ಭಕ್ತಿಯಿಂದ ಅರ್ಪಿಸಲ್ಪಟ್ಟ ಮನೋಬುದ್ಧಿಗಳುಳ್ಳವನಾಗಿ ಅವನನ್ನೇ ನಿಸ್ಸಂಶಯವಾಗಿ ಹೊಂದುವನು. ಆದುದರಿಂದ ಸರ್ವರೂ ಪ್ರತಿದಿನವೂ ಎಚ್ಚರವಾಗಿರುವ ಪ್ರತಿಕ್ಷಣದಲ್ಲಿಯೂ ಭಗವಂತನನನ್ನು ಸ್ಮರಿಸುತ್ತಾ ತಾವು ಮಾಡಬೇಕಾದ ನಿತ್ಯನೈಮಿತ್ತಿಕಾದಿ ಶಾಸ್ತ್ರವಿಹಿತವಾದ ಕರ್ಮಗಳನ್ನು ಮಾಡುತ್ತಿರಬೇಕು ಇದರಿಂದ ಅವರ ಮನಸ್ಸು ಬುದ್ಧಿಗಳೆಲ್ಲವೂ ಭಗವಂತನಲ್ಲೇ ನೆಟ್ಟವುಗಳಾಗಿ ಅವರಿಗೆ ಮರಣಕಾಲದಲ್ಲೂ ಭಗವಂತನ ಸ್ಮೃತಿಗಳೇ ಉಂಟಾಗುವುವು. ಅದರ ಫಲವಾಗಿ ಭಗವಂತನ ಕೃಪೆಯಿಂದ ಅವರು ಭಗವಂತನನ್ನು ಹೊಂದಿಯೇ ಹೊಂದವರು. ಇದರಲ್ಲಿ ಸಂಶಯವೇ ಇಲ್ಲ.

(Re-printed from Mysore Vysya Patrika
December 1960)

M. V. P. Press Mysore

# ಭಗವದ್ಗೀತಾ ಅಧ್ಯಾಯ ಎಂಟು

### ಭಕ್ತರಲ್ಲಿ ಐಶ್ವರ್ಯಾರ್ಥಿಯು ಧ್ಯಾನಿಸುವ ಕ್ರಮ ಮತ್ತು ಕಾಲವಾದ ಮೇಲೆ ಅವನ ಗತಿ

(ಶ್ಲೋಕಗಳು ೮, ೯, ೧೦, ೧೬, ವಾಕ್ಯ ೧, ೧೭, ೧೮, ೧೯)

ಭಕ್ತನಾದ ಐಶ್ವರ್ಯಾರ್ಥಿಯೂ ಕೂಡ ಅಭ್ಯಾಸದೊಂದಿಗೂ ಮತ್ತು ಯೋಗದೊಂದಿಗೂ ಕೂಡಿದವನಾಗಿರುತ್ತಾನೆ ಅಂದರೇನು, ಅವನು ಪ್ರತಿದಿನದಲ್ಲೂ ತನ್ನ ವರ್ಣಾಶ್ರಮ ಧರ್ಮಗಳನ್ನು ಒಳಗೊಂಡ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡುತ್ತಾ ಸಮಸ್ತ ಕಾಲಗಳಲ್ಲೂ ಮನಸ್ಸಿನಲ್ಲಿ ಉಪಾಸ್ಯನಾದ ಪರಮಾತ್ಮನನ್ನು ಚೆನ್ನಾಗಿ ಚಿಂತನೆ ಮಾಡುವನು ಮತ್ತು ಆಸನಾದಿಗಳೊಡನೆ ಅವನನ್ನು ಧ್ಯಾನ ಮಾಡುವನು. ಈ ಅಭ್ಯಾಸಬಲದಿಂದ ಅವನ ಮನಸ್ಸು ಬೇರೆಕಡೆಗೆ ಹೋಗುವುದಿಲ್ಲ. ಆದುದರಿಂದ ಅವನು ಸಾಯುವ ಕಾಲದಲ್ಲಿಯೂ ಕೂಡ ಅಪ್ರಾಕೃತವಾದ ತೇಜಸ್ಸಿನಿಂದ ಕೂಡಿದ ಪರಮಪುರುಷನನ್ನು (ಪರಮಾತ್ಮನನ್ನೇ) ಸ್ಮರಿಸುತ್ತಾ ಅವನನ್ನೇ ಹೋದುವನು. ಅಂದರೆ ಅವನ ಆಕಾರವನ್ನೇ ಪಡೆಯುವನು. ಆದಿಭರತನು ಅಂತಿಮಕಾಲದಲ್ಲಿ ತಾನು ಪ್ರೀತಿಸುತ್ತಿದ್ದ ಜಿಂಕೆಮರಿಯನ್ನೇ ಚಿಂತಿಸುತ್ತಿದ್ದುದರಿಂದ ಕಾಲವಾದ ಮೇಲೆ ಜಿಂಕೆಮರಿಯ ಆಕಾರವನ್ನೇ ಪಡೆದನೆಂದು ಪುರಾಣದಲ್ಲಿ ಕಥೆ ಇದೆ. ಹಾಗೆಯೇ ಮಹದೈಶ್ವರ್ಯವನ್ನು ಪಡೆಯಬೇಕೆಂದು ಆಶೆಪಡುವ ಐಶ್ವರ್ಯಾರ್ಥಿಯು ಭಕ್ತಿಯಿಂದ ಪರಮಾತ್ಮನನ್ನೇ ಚಿಂತಿಸುವುದರಿಂದ ಅವನು ಕಾಲವಾದ ಮೇಲೆ ಐಶ್ವರ್ಯಗಳಿಂದ ಕೂಡಿರುವ ಪರಮಾತ್ಮನನ್ನೇ ಹೊಂದುವನು. ಅಂದರೇನು, ಐಶ್ವರ್ಯಗಳಿಂದ ಕೂಡಿದ ಪರಮಾತ್ಮನ ಆಕಾರಕ್ಕೆ ಸಮವಾದ ಆಕಾರವುಳ್ಳವನಾಗುತ್ತಾನೆ. (೮)

ಹಾಗಾದರೆ ಐಶ್ವರ್ಯಾರ್ಥಿಯಾದ ಭಕ್ತನು ಪರಮಾತ್ಮನ ಯಾವ ಯಾವ ಸ್ವರೂಪಗುಣಗಳನ್ನು ಚಿಂತನೆ ಮಾಡುತ್ತಾ ಅವನನ್ನು ಉಪಾಸನೆ ಮತ್ತು ಧ್ಯಾನ ಮಾಡುತ್ತಾನೆ? ಪರಮಾತ್ಮನು ಸರ್ವಜ್ಞನು (ಕವಿಂ), ಅನಾದಿಕಾಲದಿಂದ ಇರುವವನು (ಪುರಾಣಂ), ಜಗತ್ತನ್ನು ಆಳುವವನು (ಅನುಶಾಸಿತಾರಂ), ಅಣುಗಳಲ್ಲಿ ಅಣುವಾಗಿ ಇರುವವನು ಅಂದರೆ ಆತ್ಮನಿಗಿಂತಲೂ ಸೂಕ್ಷ್ಮವಾಗಿ ಇರುವವನು (ಅಣೋರಣೀಯಾಂ), ಸರ್ವವನ್ನೂ ಸೃಷ್ಟಿಸುವವನು (ಸರ್ವಸ್ಯ ದಾತಾರಂ), ಬುದ್ಧಿವಂತರಾದ ಮಾನವರಿಂದಲೂ ಚಿಂತಿಸಲು ಅಸಾಧ್ಯವಾದ ರೂಪವುಳ್ಳವನು (ಅಚಿಂತ್ಯರೂಪಂ), ಕತ್ತಲೆ ಎಂಬ ತಮಸ್ಸನ್ನು ಮೀರಿ ಅದರ ಆಚೆ ಇರುವ ಸರ್ವೋತ್ಕೃಷ್ಟವಾದ ಸೂರ್ಯನಿಗೆ ಸಮಾನವಾದ ವರ್ಣವುಳ್ಳವನು ಅಂದರೆ ಅಪ್ರಾಕೃತವಾದ ದಿವ್ಯರೂಪವುಳ್ಳವನು (ಆದಿತ್ಯವರ್ಣಂ ತಮಸಃ ಪರಸ್ತಾತ್). ಯಾವ ಐಶ್ವರ್ಯಾರ್ಥಿಯಾದ ಭಕ್ತನು ಭಕ್ತಿಯಿಂದ ಕೂಡಿದವನಾಗಿ ಮತ್ತು ತನ್ನ ಯೋಗಬಲವೆಂಬ ದೃಢ ಸಂಸ್ಕಾರದಿಂದ ಉಂಟಾದ ನಿಶ್ಚಲವಾದ ಮನಸ್ಸನ್ನು ಪಡೆದವನಾಗಿ ತನ್ನ ಹುಬ್ಬುಗಳ ಮಧ್ಯದಲ್ಲಿ ಪ್ರಾಣವನ್ನು ಚೆನ್ನಾಗಿ ಸಂಸ್ಥಾಪಿಸಿದವನಾಗಿ, ಸಾಯುವ ಕಾಲದಲ್ಲಿ ಮೇಲೆ ಹೇಳಿರುವ ಸ್ವರೂಪಗುಣಗಳಿಂದ ಕೂಡಿರುವ ಪರಮಪುರುಷನನ್ನು ಮೇಲೆ ಮೇಲೆ ಸ್ಮರಿಸುತ್ತಾ ಧ್ಯಾನಮಾಡುತ್ತಾನೋ ಅವನು ದಿವ್ಯನಾದ ಆ ಪರಮಾತ್ಮನನ್ನು ತನ್ನ ಇಚ್ಛಾಪೂರ್ತಿಗಾಗಿ ಹೊಂದುತ್ತಾನೆ. ಅಂದರೇನು, ಅವನ ಐಶ್ವರ್ಯಯುತ ಆಕಾರಕ್ಕೆ ಸಮನಾದ ಐಶ್ವರ್ಯದಿಂದ ಕೂಡಿದ ಆಕಾರವನ್ನು ಪಡೆಯುವನು. (೯–೧೦)

ಐಶ್ವರ್ಯಾರ್ಥಿಯಾದ ಭಕ್ತರು ಕಾಲವಾದ ಮೇಲೆ ಯಾವ ಯಾವ ಅನುಭವಗಳನ್ನು ಪಡೆಯುವರು? ಅವರು ಬಹಳ ಕಾಲದ ವರೆಗೆ ಬ್ರಹ್ಮಾಂಡದಲ್ಲಿ ಬ್ರಹ್ಮಲೋಕದವರೆಗೆ ಇರುವ ವಿವಿಧ ಭೋಗ ಮತ್ತು ಐಶ್ವರ್ಯಸ್ಥಾನಗಳಾಗಿರುವ ಸಮಸ್ತ ಲೋಕಗಳ ಅನುಭವಗಳನ್ನು ಪಡೆದಿರುವರು, ಅವರ ಪುಣ್ಯ ಕರ್ಮಗಳ ಉತ್ತಮ ಫಲಗಳು ಮುಗಿದನಂತರ ಅವರು ಪರ ಲೋಕಗಳ ಸುಖಾನುಭವಗಳನ್ನು ಕಳೆದುಕೊಂಡು ಪುನಃ ಈ ಲೋಕದಲ್ಲಿಯೇ ಹುಟ್ಟುತ್ತಾರೆ. ಏಕೆಂದರೆ, ಪರಮಪುರುಷನಾದ ಭಗವಂತನ ಸಂಕಲ್ಪದಿಂದ ಈ ಸಮಸ್ತಲೋಕಗಳೂ ಮತ್ತು ಇವುಗಳಲ್ಲಿರುವ ವಸ್ತುಗಳೆಲ್ಲವೂ ಉತ್ಪತ್ತಿ–ವಿನಾಶಗಳ ವ್ಯವಸ್ಥೆ

ಯನ್ನು ಪಡೆದಿವಿ. ಆದುದರಿಂದ ಐಶ್ವರ್ಯಗತಿಯನ್ನು ಹೊಂದಿದವರಿಗೆ ಪ್ರಯೋಜನವಾದ ಲೋಕಗಳು ನಾಶ ಹೊಂದುವಾಗ ಈ ಐಶ್ವರ್ಯಾರ್ಥಿಭಕ್ತರಿಗೂ ಉತ್ತಮವಾವ ಲೋಕಾನುಭವಗಳೂ ನಾಶವಾಗುತ್ತವೆ. (೧೬, ವಾಕ್ಯ ೧). ಹಾಗಾದರೆ, ಬ್ರಹ್ಮಲೋಕಪರ್ಯನ್ತವಾದ ಲೋಕಗಳೂ ಮತ್ತು ಅವುಗಳಲ್ಲಿರುವ ಸಕಲ ವಸ್ತುಗಳೂ ಯಾವ ಕ್ರಮದಲ್ಲಿ ಉತ್ಪತ್ತಿ ವಿನಾಶಗಳನ್ನು ಪಡೆಯುತ್ತವೆ. ಹಗಲು ಮತ್ತು ರಾತ್ರಿಗಳ ಅಳತೆಗಳನ್ನು ಪಡೆಯುತ್ತವೆ? ಹಗಲು ಮತ್ತು ರಾತ್ರಿಗಳ ಅಳತೆಯನ್ನು ತಿಳಿದಂಥಾ ಶಾಸ್ತ್ರಜ್ಞರು ಚತುರ್ಮುಖ ಬ್ರಹ್ಮನಿಗೆ ಸಹಸ್ರ ಯುಗಗಳ ಅವಧಿಯು ಒಂದು ಹಗಲಾಗಿಯೂ ಮತ್ತು ಸಹಸ್ರ ಯುಗಗಳ ಅವಧಿಯು ಒಂದು ರಾತ್ರಿಯಾಗಿಯೂ ಭಗವಂತನಿಂದ ಏರ್ಪಟ್ಟಿದೆಯೆಂದು ತಿಳಿಯುತ್ತಾರೆ. (೧೭) ಬ್ರಹ್ಮನಿಗೆ ಹಗಲಾದಾಗ ತ್ರಿಲೋಕಗಳಲ್ಲಿರುವ ದೇಹಗಳೇನು. ಇಂದ್ರಿಯಗಳೇನು, ಭೋಗ್ಯವಸ್ತುಗಳೇನು, ಭೋಗಸ್ಥಾನಗಳೇನು. ಈ ರೂಪಗಳಲ್ಲಿರುವ ಸಮಸ್ತವಾದ ವಸ್ತುಗಳೂ ಚತುರ್ಮುಖ ಬ್ರಹ್ಮನ ಶರೀರದಲ್ಲಿರುವ ಅವ್ಯಕ್ತವಾದ ವಸ್ತುವಿನಿಂದ ಉಂಟಾಗುತ್ತವೆ. ಮತ್ತು ರಾತ್ರಿಯಾಗುವಾಗ ಅದೇ ಅವ್ಯಕ್ತ ಅವಸ್ಥಾ ವಿಶೇಷನಾದ ಆ ಬ್ರಹ್ಮನ ಶರೀರದಲ್ಲೇ ಲಯಿಸಿ ಹೋಗುತ್ತವೆ. (೧೮) ಕರ್ಮಕ್ಕೆ ಅಧೀನಗಳಾದ ಈ ಭೂತ ಸಮೂಹಗಳೆಲ್ಲವೂ ಚತುರ್ಮುಖ ಬ್ರಹ್ಮನ ಹಗಲು ಕಾಲದಲ್ಲಿ ಹುಟ್ಟಿ ಹುಟ್ಟಿ ಅಂದರೆ ಸೃಷ್ಟಿಗೆ ಪದೇಪದೇ ಒಳಗಾಗಿ, ಅವನ ರಾತ್ರಿ:ಕಾಲದಲ್ಲಿ ಲಯಹೊಂದುತ್ತವೆ; ಪುನಃ ಹಗಲು ಬಂದರೆ ತಿರುಗಿಯೂ ಹುಟ್ಟುತ್ತವೆ. (೧೯).

ಈ ಅದ್ಭುತವಾದ ವ್ಯಾಪಾರವನ್ನು ನಾವೆಲ್ಲರೂ ತಿಳಿದು ಆಶ್ಚರ್ಯಪಡಬೇಕು. ಭಗವಂತನ ದಿವ್ಯಸಂಕಲ್ಪದಿಂದ ಉಂಟಾಗಿರುವ ಪ್ರಕೃತಿಯ ಕಟ್ಟಳೆಗಳ ಮಹತ್ವವನ್ನು ಐಶ್ವರಾರ್ಥಿಯು ಭಕ್ತನಾಗಿದ್ದಾಗ್ಯೂ ಕೂಡ ಮೀರಲಾರನು. ಚತುರ್ಮುಖ ಬ್ರಹ್ಮನ ಇಂತಹ ದಿನಗಳುಳ್ಳ ನೂರು ವರುಷಗಳ ಅವಧಿಯಾದ ಮೇಲೆ ಕೊನೆಯ ಸಾವಿರ ಯುಗದಲ್ಲಿ ಬ್ರಹ್ಮಲೋಕ ಪರ್ಯಂತವಾದ ಲೋಕಗಳೂ ಮತ್ತು ಚತುರ್ಮುಖ ಬ್ರಹ್ಮನೂ ಕೂಡ ಭಗವಂತನಲ್ಲೇ ಲಯಹೊಂದುತ್ತಾರೆಂದು ಪುರಾಣಗಳಲ್ಲಿ ವರ್ಣನೆ ಇದೆ. ಯಾವ ಕ್ರಮದಲ್ಲಿ ಲಯವುಂಟಾಗುತ್ತದೆ. ಅಂದರೆ :—ಪೃಥ್ವಿಯು ಅಪ್ಪಿನಲ್ಲಿಯೂ, ಅಪ್ಪು ತೇಜಸ್ಸಿನಲ್ಲಿಯೂ, ಹೀಗೆ ಕ್ರಮ ಕ್ರಮವಾಗಿ ಅವ್ಯಕ್ತ, ಅಕ್ಷರ, ತಮಸ್ಸು ಎಂಬುವವರೆಗೂ ಸಮಸ್ತವೂ ಭಗವಂತನಲ್ಲಿ ಲಯಹೊಂದುತ್ತವೆ. ಈ ರೀತಿಯಾಗಿ ಭಗವಂತ ಮತ್ತು ಶುದ್ಧ ಪ್ರತ್ಯಗಾತ್ಮ ಇವರಿಗಿಂತ ಬೇರೆಯಾದ ಸಮಸ್ತ ಪದಾರ್ಥಗಳೂ ಕಾಲ ವ್ಯವಸ್ಥೆಯ ಪ್ರಕಾರ ಭಗವಂತನಿಂದ ಉತ್ಪತ್ತಿಯನ್ನು ಹೊಂದುತ್ತಾ, ಕ್ಲಿಪ್ತಕಾಲಗಳಾದ ಮೇಲೆ ಅವನಲ್ಲೇ ಲಯವನ್ನು ಹೊಂದುತ್ತಾ, ಉತ್ಪತ್ತಿ ಲಯಗಳ ಪರಂಪರೆಗಳಿಗೆ ಒಳಪಟ್ಟಿವೆ. ಈ ಕಾರಣಗಳಿಂದ ಭಕ್ತರಾದ ಐಶ್ವರ್ಯಾರ್ಥಿಗಳು ಭೋಗಿಸುವ ಸಮಸ್ತಲೋಕಗಳೂ ಮತ್ತು ಅವುಗಳಲ್ಲಿರುವ ವಸ್ತುಗಳೆಲ್ಲವೂ ಕೆಲವು ಕಾಲ ಮಾತ್ರ ಇದ್ದು ಆಮೇಲೆ ನಾಶವಾಗುತ್ತವೆ. ಆದುದರಿಂದ ಕಾಲವಾದ ಮೇಲೆ ಉತ್ತಮವಾದ ಸುಖಗಳನ್ನು ಅನುಭವಿಸುತ್ತಿರುವ ಭಕ್ತರಾದ ಐಶ್ವರ್ಯಾರ್ಥಿಗಳೂ ಕೂಡ ಇತರರಿಗಿಂತಲೂ ಬಹಳ ಕಾಲ ಹೆಚ್ಚಾಗಿ ಸುಖಗಳನ್ನು ಅನುಭವಿಸಬಲ್ಲರೇ ವಿನಹ ಕೊನೆಯಲ್ಲಿ ಆ ಸುಖಗಳೂ ನಾಶವಾಗಿ ಅವರೂ ಕೂಡ ಪುನರ್ಜನ್ಮವನ್ನು ಪಡೆಯಲೇಬೇಕಾಗುತ್ತದೆ. ಹೀಗೆ ಬ್ರಹ್ಮಲೋಕಾದಿ ಪ್ರಾಪ್ತಿರೂಪವಾದ ಮೇಲಾದ ಸಮಸ್ತ ಐಶ್ವರ್ಯಾದಿ ಭೋಗಗಳೆಲ್ಲವೂ ನಶ್ವರಗಳಾಗಿ ಇರುವುದರಿಂದ ಭಕ್ತನು ಅವುಗಳನ್ನು ತ್ಯಜಿಸಬೇಕು ಮತ್ತು ಅವುಗಳಿಗೆ ಬದಲಾಗಿ ಅವನು ಶಾಶ್ವತ ಸ್ವರೂಪನಾದ ಭಗವಂತನನ್ನೇ ಹೊಂದಿ ನಿರತಿಶಯಾನಂದವನ್ನು ಪಡೆಯಬೇಕು. (೧೯).

## ಭಕ್ತರಲ್ಲಿ ಜಿಜ್ಞಾಸುವು ಧ್ಯಾನಿಸುವ ಕ್ರಮ ಮತ್ತು ಕಾಲವಾದ ಮೇಲೆ ಅವನ ಗತಿ.

(ಶ್ಲೋಕಗಳು ೧೧,೧೨,೧೩,೨೦,೨೧)

ಜಿಜ್ಞಾಸುವು ಜರಾಮರಣಗಳಿಂದ (ಹುಟ್ಟು ಸಾವುಗಳಿಂದ) ಬಿಡುಗಡೆಯನ್ನು ಹೊಂದಬೇಕು ಎಂಬ ತ್ವರೆಯನ್ನು ಪಡೆದಿರುವನು. ಈ ಉದ್ದೇಶ ಪೂರ್ತಿಗಾಗಿ "ಅಕ್ಷರ"ವೆಂಬ ಸ್ಥಾನವನ್ನು ಹೊಂದಲು ಸರ್ವ ಪ್ರಯತ್ನಗಳನ್ನೂ ಮಾಡುತ್ತಾನೆ. ಪ್ರಕೃತಿ ಸಂಬಂಧವನ್ನು ಸ್ವಲ್ಪವೂ ಪಡೆಯದೇ ಇರುವ ಅಕ್ಷರ ಸ್ವರೂಪ ಅಥವ ಶುದ್ಧಪ್ರತ್ಯಗಾತ್ಮ ಸ್ವರೂಪವನ್ನು ಸಾಕ್ಷಾತ್ಕರಿಸಲು ಜಿಜ್ಞಾಸುವು ಕೈಗೊಳ್ಳುವ ಉಪಾಯವೇನು? ಸರ್ವಭೂತಗಳು ನಾಶವಾದಾಗ್ಯೂ ತಾನು ನಾಶವಾಗದಿರುವ, ಅವ್ಯಕ್ತನಾದ ಅಂದರೆ ಸ್ಥೂಲವಲ್ಲದೆ ಅತಿಸೂಕ್ಷ್ಮವಾಗಿರುವ ವೇದವನ್ನು ತಿಳಿದಿರುವರಿಂದ "ಪರಮಗತಿಯಾದ ಅಕ್ಷರ" ವೆಂದು ಕರೆಯಲ್ಪಡುವ ಶುದ್ಧಪ್ರತ್ಯಗಾತ್ಮ ಸ್ವರೂಪವನ್ನು ಹೊಂದುವುದಕ್ಕಾಗಿ ಯತಿಗಳು ಬ್ರಹ್ಮಚರ್ಯವ್ರತವನ್ನು ಕೈಗೊಳ್ಳುತ್ತಾರೆ. ಅವರು ವಿಷಯಗಳ ಅಭಿಲಾಷೆಗಳನ್ನು ತ್ಯಜಿಸಿ, ವೈರಾಗ್ಯ ಶಾಲಿಗಳಾಗಿ (ಕಾಗರಹಿತಃ) ಅಕ್ಷರಸ್ವರೂಪವನ್ನೇ ಪ್ರವೇಶಮಾಡುತ್ತಾರೆ ಜಿಜ್ಞಾಸುವು ಈ ಅಕ್ಷರವೆಂಬ ಸ್ಥಾನವನ್ನು ಪಡೆಯುವುದಕ್ಕಾಗಿಯೇ ಭಕ್ತನಾಗಿ ಭಗವಂತನನ್ನೇ ಉಪಾಸನೆ ಮಾಡುತ್ತಾನೆ. (೧೧).

ಜಿಜ್ಞಾಸುವು ಅಕ್ಷರಸ್ಥಾನವನ್ನು ಪಡೆಯುವದಕ್ಕಾಗಿ ಭಗವಂತನನ್ನು ಉಪಾಸನೆ ಮಾಡುವ ಕ್ರಮವೇನು ? ಅವನು ಬಾಹ್ಯವಸ್ತುಗಳನ್ನು ತಿಳಿಯಲು ಬಾಗಿಲಿನಂತಿರುವ ಅಂದರೆ ಯಾವುದರ ಮೂಲಕ ಬಾಹ್ಯವಸ್ತುಗಳ ಜ್ಞಾನವುಂಟಾಗುತ್ತದೆಯೋ ಅಂತಹ ಕಿವಿ ಮೊದಲಾದ ಹತ್ತು ಇಂದ್ರಿಯಗಳನ್ನೂ ತಮ್ಮತಮ್ಮ ವ್ಯಾಪಾರಗಳಿಂದ ಹಿಂತಿರುಗಿಸಿ ಬಿಟ್ಟು ಅವುಗಳನ್ನು ಅಡಗಿಸುತ್ತಾನೆ. ತನ್ನ ಮನಸ್ಸನ್ನು ಇಂದ್ರಿಯಗಳಲ್ಲಿ ಪ್ರಸರಿಸದ ಹಾಗೆ ತಡೆದು, ತನ್ನ ಹೃದಯಕಮಲದಲ್ಲಿರುವ ಅಕ್ಷರಸ್ವರೂಪನಾದ ಭಗವಂತನಲ್ಲಿಯೇ ಅದನ್ನು ನಿಲ್ಲಿಸುತ್ತಾನೆ. ಹೀಗೆ ಅವನು ಚಲಿಸದೆ ಸ್ಥಿರವಾಗಿ ಭಗವಂತನಲ್ಲಿ ಭಕ್ತಿಯನ್ನು ಹೊಂದಿದವನಾಗಿ ಯೋಗಧಾರಣೆಯಲ್ಲಿ ಅಡಿಗಡಿಗೆ ಇರುವನು. ಅವನು ತಾನು ಸಾಯುವಕಾಲದಲ್ಲಿಯೂ ಕೂಡ ಬ್ರಹ್ಮನನ್ನು ಬೋಧಿಸುವ " ಓಂ " ಎಂಬ ಒಂದೇ ಅಕ್ಷರವನ್ನು ಎಡಬಿಡದೆ ಉಚ್ಚರಿಸುತ್ತಲೇ ಇರುವನು. ಏಕೆಂದರೆ, ಯಾವನು " ಓಂ " ಎಂಬ ಶಬ್ದದಿಂದ ವಾಚ್ಯನಾದ ಪರಬ್ರಹ್ಮನ್ನು ಸ್ಮರಿಸುತ್ತಾ, ತನ್ನ ಪ್ರಾಣವಾಯುವನ್ನು ತಲೆಯಲ್ಲಿ ಪ್ರವೇಶಮಾಡಿಸಿ ಶರೀರವನ್ನು ಬಿಟ್ಟು ಹೋಗುವನೋ ಅವನು ಉತ್ತಮವಾದ ಗತಿಯನ್ನು ಹೊಂದುವನು. ಅಂದರೆ ಈ ಜಿಜ್ಞಾಸು ಯೋಗಿಯು ಪರಮಗತಿ ಎಂದು ಹೇಳಿರುವ ಅಕ್ಷರಸ್ವರೂಪವೆಂಬ ಪ್ರಕೃತಿಸಂಬಂಧರಹಿತವಾದ, ಭಗವಂತನ ಅಕ್ಷರಸ್ವರೂಪಕ್ಕೆ ಸಮನಾದ ಆಕಾರವುಳ್ಳ ಪರಿಶುದ್ಧ ಆತ್ಮತತ್ವವನ್ನು ಹೊಂದುವನು. (೧೨–೧೩)

ಜಿಜ್ಞಾಸುವಾದ ಭಕ್ತನು ಕಾಲವಾದ ಮೇಲೆ ಪಡೆಯುವ ಅಕ್ಷರಸ್ಥಾನವನ್ನು " ಪರಮಗತಿ " ಎಂದು ಏಕೆ ಹೇಳಿದೆ ಮತ್ತು ಅದರ ಸ್ವರೂಪವೇನು ಎಂಬುದನ್ನು ವಿಶದವಾಗಿ ತಿಳಿಯೋಣ. ಪರಿಶುದ್ಧ ಆತ್ಮಸ್ವರೂಪವು ಜ್ಞಾನದಿಂದದ ಕೂಡಿರುವುದರಿಂದ ಅದು ಜ್ಞಾನರಹಿತವಾದ ಅಚಿತ್ತಿನ ಪ್ರಕೃತಿಗಿಂತ ಶ್ರೇಷ್ಠವಾದುದಾಗಿದೆ ಮತ್ತು ಜ್ಞಾನವೇ ಇದರ ಆಕಾರವಾಗಿರುವುದರಿಂದ ಅದು ಅಚೇತನಕ್ಕಿಂತ ವಿಲಕ್ಷಣವಾದುದೂ ಆಗಿದೆ. ಇದು ಯಾವ ಇಂದ್ರಿಯಕ್ಕೂ ಗೋಚರವಾಗದೆ ಅವ್ಯಕ್ತವಾಗಿದೆ. ಆದರೆ ತನ್ನ ಜ್ಞಾನಕ್ಕೆ ಮಾತ್ರ ತಾನು ತೋರುವ ಆಕಾರವುಳ್ಳದ್ದಾಗಿದೆ. ಇದು ಇತರರ ಜ್ಞಾನಕ್ಕೆ ತಿಳಿಯುವುದಿಲ್ಲ ; ಆದರೆ ತನ್ನಲ್ಲಿ ತಾನೇ ತೋರುತ್ತದೆ. ಇದು ಸನಾತನವಾದುದು ಅಂದರೆ ಉತ್ಪತ್ತಿನಾಶವಿಲ್ಲದುದಾಗಿದೆ. ಸಮಸ್ತ ಕಾರ್ಯಕಾರಣಗಳಿಂದ ಕೂಡಿದ ಆಕಾಶಾದಿ ಪಂಚಭೂತಗಳೇ ಮೊದಲಾದ ಯಾವ ಯಾವ ಪದಾರ್ಥಗಳುಂಟೋ ಅವುಗಳೆಲ್ಲವೂ ನಾಶವಾಗಿ ಲಯ ಹೊಂದಿದರೂ ಮತ್ತು ಆ ಪದಾರ್ಥಗಳಲ್ಲಿಯೇ ಒಳಗೆ ಸೇರಿಕೊಂಡಿದ್ದರೂ, ಆತ್ಮನು ಎಂದಿಗೂ ನಾಶವನ್ನೇ ಹೊಂದುವುದಿಲ್ಲ. (೨೦). ಆದುದರಿಂದಲೇ ಆತ್ಮನು ತನ್ನ ನಿಜಸ್ವರೂಪದಲ್ಲಿ ಅವ್ಯಕ್ತನೆಂದೂ ಅಕ್ಷರನೆಂದೂ ಕರೆಯಲ್ಪಟ್ಟಿದ್ದಾನೆ. ಇಷ್ಟೇ ಅಲ್ಲ ; ಜ್ಞಾನಿಗಳು ಇದನ್ನೇ ಪರಮಗತಿ ಅಂದರೆ ಉತ್ತಮವಾದ ಗತಿ ಎಂದು ಹೇಳಿದ್ದಾರೆ. ಭಗವಂತನಿಗೆ ಮೂರು ವಿಧವಾದ ಪ್ರಕೃತಿಗಳು ಇವೆ ಎಂಬುದನ್ನು ತಿಳಿಯಬೇಕು. 1. ಅಚೇತನವಾದ ಜಡಪ್ರಕೃತಿಯು ಅವನ ಮೊದಲನೆಯ ನಿಯಮನಸ್ಥಾನವು. 2. ಕರ್ಮವಶದಿಂದ ಅಚೇತನ ಪ್ರಕೃತಿಯೊಂದಿಗೆ ಸಂಬಂಧಿಸಿಕೊಂಡಿರುವ ಬದ್ಧಆತ್ಮನು ಅಥವ ಜೀವಾತ್ಮನು ಅವನ ಎರಡನೆಯ ನಿಯಮನಸ್ಥಾನವು. 3. ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದಿ ಅಚಿತ್ತಿನ ಸಂಬಂಧವನ್ನು ಪಡೆಯದೇ ಇರುವ ಮತ್ತು ಜ್ಞಾನವು ಸಂಕುಚಿತವಾಗಿಲ್ಲದೇ ತನ್ನ ಸ್ವಂತ ವಿಭುಸ್ವರೂಪದಲ್ಲಿಯೇ ಇರುವ ಪರಿಶುದ್ಧ ಆತ್ಮನ ಅಥವ ಮುಕ್ತಾತ್ಮನ ಸ್ವರೂಪವು ಭಗವಂತನ ಮೂರನೆಯ ನಿಯಮನಸ್ಥಾನವು, ಪರಮಗತಿಯು ಅಥವ ಸರ್ವೋತ್ಕೃಷ್ಟ ಸ್ಥಾನವು. ಈ ಅಭಿಪ್ರಾಯವನ್ನೇ ಇನ್ನೊಂದು ವಿಧವಾಗಿ ಹೇಳಿದೆ. ಜ್ಞಾನರಹಿತವಾದ ಅಚಿತ್ತು ಭಗವಂತನ ಅಪರಾಪ್ರಕೃತಿಯು ; ಸಂಕುಚಿತಜ್ಞಾನವನ್ನು ಪಡೆದಿರುವ, ಅಚಿತ್ತಿನಲ್ಲಿ ಬಂಧಿಸಲ್ಪಟ್ಟಿರುವ ಜೀವಾತ್ಮನು ಭಗವಂತನ ಪರಾಪ್ರಕೃತಿಯು. ಅಚಿತ್ತಿನ ಸಂಬಂಧವನ್ನೇ ಪಡೆಯದೇ ಅನಂತವಾದ ವಿಭುಜ್ಞಾನವನ್ನು ಪಡೆದಿರುವ ಶುದ್ಧ ಪ್ರತ್ಯಗಾತ್ಮನು ಭಗವಂತನ ಪರಾಪ್ರಕೃತಿಯು. ಯಾವ ಈ ಶುದ್ಧ ಆತ್ಮಸ್ವರೂಪವನ್ನು ಹೊಂದಿ ಪುನರ್ಜನ್ಮವನ್ನು ಪಡೆಯುವುದಿಲ್ಲವೋ ಆ ಆತ್ಮಸ್ವರೂಪವೇ ಅತ್ಯುತ್ತಮವಾದ ನಿಯಮನಸ್ಥಾನವು ಅಥವ ಪರಮಗತಿಯು ಪ್ರಕೃತಿಸಂಬಂಧ ರಹಿತವಾದ ಈ ಪರಿಶುದ್ಧ ಆತ್ಮಸ್ವರೂಪಕ್ಕೆ ಉತ್ಪತ್ತಿವಿನಾಶ ಇಲ್ಲದಿರುವುದರಿಂದ ಈ ಸ್ವರೂಪವನ್ನು ಪಡೆಯುವವರಿಗೆ ಪುನರ್ಜನ್ಮವಿಲ್ಲ. ಪ್ರಕೃತಿಯಿಂದ ಕೂಡಿಕೊಂಡಿರುವ ಬದ್ಧ ಜೀವಾತ್ಮನ ಜ್ಞಾನವು ಪರಿಮಿತ ಅಥವ ಸಂಕುಚಿತ ಜ್ಞಾನವಾಗಿದೆ. ಆದರೆ ಪ್ರಕೃತಿಸಂಬಂಧವು ಸ್ವಲ್ಪವೂ ಇಲ್ಲದಿರುವ ಮುಕ್ತಾತ್ಮನ ಜ್ಞಾನವು ಅಪರಿಮಿತವಾಗಿ ಅಥವ ವಿಭುವಾಗಿ ಇದೆ. ಆದುದರಿಂದಲೂ ಕೂಡ ಈ ದಿವ್ಯಾತ್ಮಸ್ವರೂಪವು ಭಗವಂತನ ಅತಿಶ್ರೇಷ್ಠವಾದ ನಿಯಮನ ಸ್ಥಾನವು. (೩೧)

ಇಲ್ಲಿ ಒಂದು ಸಂದೇಹವನ್ನು ಪರಿಹರಿಸಬೇಕಾಗಿದೆ. ಹೀಗೆ ತಾನೇ ಆದ ಪರಿಶುದ್ಧ ಆತ್ಮಸ್ವರೂಪವನ್ನು ಪಡೆದು ಪರಮಗತಿಯನ್ನು ಹೊಂದಿದವನು ಭಗವಂತನನ್ನು ಹೊಂದುವುದಿಲ್ಲನೆ ? ಈ ಅಚಿತ್ ಸಂಬಂಧವಿಲ್ಲದ ಪರಿಶುದ್ಧ ಆತ್ಮವಸ್ತುವು ಭಗವಂತನನ್ನೇ ಆತ್ಮನಾಗಿ ಹೊಂದಿರುವುದರಿಂದಲೂ ಮತ್ತು ಅದು

ಪರಮಾತ್ಮನಿಗೆ ಶೇಷಭೂತವಾಗಿ ಅಂದರೆ ಅವನ ನಿಯಮಕ್ಕೆ
ಒಳಪಟ್ಟು ಇರುವುದರಿಂದಲೂ, ಈ ಜಿಜ್ಞಾಸುವೂ ಕೂಡ ತಾನು
ಇಚ್ಛಿಸುವ ಆತ್ಮಸಾಕ್ಷಾತ್ಕಾರವನ್ನು ಪಡೆದ ಕಾರಣದಿಂದ
ಕ್ರಮೇಣ ಪರಬ್ರಹ್ಮನನ್ನು ಹೊಂದುವನಾಗುತ್ತಾನೆ.

### ಭಕ್ತರಲ್ಲಿ ಜ್ಞಾನಿಯು ಧ್ಯಾನಿಸುವ ಕ್ರಮ ಮತ್ತು ಕಾಲವಾದಮೇಲೆ ಅವನ ಗತಿ

(ಶ್ಲೋಕಗಳು ೧೪, ೧೫, ೧೬ ವಾಕ್ಯ ೨, ೨೨)

ಜ್ಞಾನಿಯು ಭಕ್ತರಲ್ಲೆಲ್ಲಾ ಶ್ರೇಷ್ಠನು ಎಂದು ಏಳನೆಯ
ಅಧ್ಯಾಯದಲ್ಲಿ ಹೇಳಿದೆ ; ಏಕೆಂದರೆ ಅವನು ನಿತ್ಯಯುಕ್ತನು.
ಅವನು ಐಶ್ವರ್ಯಾರ್ಥಿಯ ಹಾಗೆ ಭಗವಂತನ ಭಾವಗಳಾದ
ಐಶ್ವರ್ಯಾದಿಗಳನ್ನು ಮಾತ್ರ ಅಪೇಕ್ಷಿಸುವುದಿಲ್ಲ ; ಜಿಜ್ಞಾಸುವಿನ
ಹಾಗೆ ತನ್ನ ನಿಜಸ್ವರೂಪವೇ ಆದ ಅಕ್ಷರಸ್ವರೂಪಾನುಭಾವವನ್ನು
ಮಾತ್ರ ಪಡೆಯಲು ಇಷ್ಟ ಪಡುವುದಿಲ್ಲ ಅವನು ಭಗವಂತನನ್ನೇ
ಪ್ರೀತಿಸಿ ಅವನೊಡನೆ ನಿತ್ಯಸಂಬಂಧವನ್ನು ಹೊಂದಲೇಬೇಕೆಂದು
ಅಧಿಕವಾದ ತ್ವರೆಯುನ್ನು ಪಡೆದಿರುವನು. ಆದುದರಿಂದ
ಜ್ಞಾನಿಯು ಈ ಪವಿತ್ರ ಧ್ಯೇಯವನ್ನು ಪ್ರಾರಂಭಿಸಿದ ದಿನ
ಮೊದಲುಗೊಂಡು ನಿತ್ಯವಾಗಿ ಅಂದರೆ ಎಲ್ಲಾ ಕಾಲದಲ್ಲೂ
ಬೇರೊಂದು ಅರ್ಥ, ಕಾಮ, ಧರ್ಮ ಮತ್ತು ಕೈವಲ್ಯ ಪುರುಷಾ
ರ್ಥವನ್ನೇ ಅಪೇಕ್ಷಿಸದೆ ಭಗವಂತನನ್ನೆ ಚಿಂತಿಸುತ್ತಾನೆ. ಅಂದರೆ
ಅವನು ಭಗವಂತನ ಕೀರ್ತನೆ, ಸ್ತೋತ್ರ, ಸೇವೆ, ಉಪಾಸನೆ,
ಮನನ, ಧ್ಯಾನ ಮೊದಲಾದವುಗಳನ್ನು ಮಾಡುತ್ತಲೇ
ಇರುವನು. ಜ್ಞಾನಿಗೆ ಭಗವಂತನಲ್ಲಿ ಅತ್ಯಧಿಕವಾದ ಪ್ರೀತಿ
ಇದೆ ; ಭಗವಂತನ ಸ್ಮೃತಿ ಇಲ್ಲದ ವೇಳೆಯೇ ಅವನಿಗಿಲ್ಲ.
ಏಕೆಂದರೆ, ಆ ಸ್ಮೃತಿಯೇ ಅವನ ಜೀವಧಾರಣೆಗೆ ಬಹುಮುಖ್ಯ
ವಾಗಿದೆ ; ಆ ಸ್ಮೃತಿ ಇಲ್ಲದಿದ್ದರೆ ಅವನು ಬದುಕಲಾರನು.
ಈ ಪ್ರಕಾರದಲ್ಲಿ ಭಗವಂತನ ಸ್ಮರಣಮೂಲಕ ಸರ್ವದಾ ಅವ
ನೊಂದಿಗೆ ಸೇರಿರುವ ಅಂದರೆ ನಿತ್ಯಯುಕ್ತನಾದ ಆ ಜ್ಞಾನಿಯಾದ
ಭಕ್ತನಿಗೆ ಭಗವಂತನೇ ಅತಿಸುಲಭನಾಗಿ ಪ್ರಾಪ್ಯನಾಗುತ್ತಾನೆ
(ಹೊಂದಲ್ಪಡುತ್ತಾನೆ). ಅಂದರೇನು, ಈ ಭಗವಂತನು ಕೊಡು
ವುದು ತನ್ನ ಭಾವಗಳಾದ ಐಶ್ವರ್ಯಾದಿಗಳೇ ಅಲ್ಲ ; ಅಥವ
ಜೀವಾತ್ಮನ ಅಕ್ಷರಸ್ವರೂಪಾನುಭವವೇ ಅಲ್ಲ ; ಇವುಗಳಿಗೆ
ಬದಲಾಗಿ ಅತಿ ದೊಡ್ಡ ಪ್ರಯೋಜನವಾದ ತನ್ನನ್ನೇ ಅಂದರೆ
ತನ್ನ ಸಂಯೋಗವನ್ನೇ ಅವನಿಗೆ ಕೊಡುತ್ತಾನೆ. ಜ್ಞಾನಿ
ಎಂಬ ನಿತ್ಯಯೋಗಿಗೆ ಭಗವಂತನು ಸುಲಭವಾಗಿ ಸಿಕ್ಕುತ್ತಾನೆ ;
ಏಕೆಂದರೆ ಭಗವಂತನೂ ಕೂಡ ಜ್ಞಾನಿಯ ಅಗಲುವಿಕೆಯನ್ನು
ಸಹಿಸಲಾರದೆ ತಾನೇ ತನ್ನ ಈ ಭಕ್ತನನ್ನು ಸ್ವೀಕರಿಸಿ, ತನ್ನನ್ನು
ಹೊಂದುವುದಕ್ಕೆ ಅರ್ಹವಾದ ಪಕ್ವವಾದ ಉಪಾಸನಾಜ್ಞಾನ
ವನ್ನೂ ಕೊಟ್ಟು, ಈ ಜ್ಞಾನವನ್ನು ಅಡ್ಡಿಮಾಡುತ್ತಿರುವ
ವಿರೋಧಿಗಳನ್ನು ತೊಲಗಿಸಿ, ತನ್ನಲ್ಲಿ ಪ್ರೀತಿಯಿಂದ ಕೂಡಿದ
ಭಕ್ತಿಯನ್ನು ಫಲಪರ್ಯಂತ ವೃದ್ಧಿಪಡಿಸುತ್ತಾನೆ. (೧೪)

ಮಹಾತ್ಮರು ಅಂದರೆ ಭಗವದ್ಭಕ್ತರಾದ ಜ್ಞಾನಿಗಳು ಶ್ರೇಷ್ಠ
ವಾದ ಮನಸ್ಸಿನಿಂದ ತಮ್ಮ ನಿಜಸ್ವರೂಪವನ್ನು ಯಥಾಸ್ಥಿತಿ
ಯಾಗಿ ಅರಿತು, ಭಗವಂತನನ್ನೇ ಆಶಿಸಿಪಟ್ಟು ಉತ್ಕೃಷ್ಟವಾದ
ಪುರುಷಾರ್ಥವನ್ನೇ ಸಾಧಿಸುವರು ಅಂದರೆ ಅವನನ್ನೇ ಹೊಂದು
ವರು. ಇವರು ಭಗವಂತನನ್ನು ಅಗಲಿದರೆ ತಮ್ಮ ಆತ್ಮವನ್ನೇ
ಧರಿಸಲಾರದವರಾಗಿ, ಅವನನ್ನೇ ಆಶ್ರಯಿಸಿರುವ ಮನಸ್ಸಿ
ನೊಂದಿಗೆ ಅವನನ್ನೇ ನಂಬಿ, ಉಪಾಸ್ಯನಾದ ಪರಮಾತ್ಮನನ್ನೇ
ಉತ್ಕೃಷ್ಟವಾದ ಪ್ರಯೋಜನವಾಗಿ ಹೊಂದುತ್ತಾರೆ. ಈ ರೀತಿ
ಯಲ್ಲಿ ಭಗವಂತನನ್ನು ಸಮೀಪಿಸಿದ ಜ್ಞಾನಿಗಳು ತಿರಿಗಿಯೂ
ಎಲ್ಲಾ ದುಃಖಗಳಿಗೂ ಜನ್ಮಸ್ಥಾನವಾದ ಈ ಅಶಾಶ್ವತವಾದ
ದೇವಮನುಷ್ಯಾದಿ ಜನ್ಮಗಳನ್ನು ಹೊಂದುವದೇ ಇಲ್ಲ. ಅಂದರೇನು
ಅವರು ದುಃಖಕ್ಕೆ ಆಸ್ಪದವಾದ. ಸ್ಥಿರವಲ್ಲದ ಪ್ರಾಕೃತ ಶರೀರ
ಸಂಬಂಧವನ್ನು ಹೊಂದುವುದಿಲ್ಲ. (೧೫). ಏಕೆಂದರೆ ಸರ್ವಜ್ಞ
ನಾಗಿ, ಸಕಲಜಗತ್ತಿಗೂ ಉತ್ಪತ್ತಿಸ್ಥಿತಿಲಯಗಳನ್ನು ನಡೆಸು
ವವನಾಗಿ, ಪರಮಕಾರುಣಿಕನಾಗಿ, ಯಾವಾಗಲೂ ಒಂದೇ
ಆಕಾರವುಳ್ಳವನಾಗಿರುವ ಭಗವಂತನನ್ನು ಹೊಂದಿದವನಿಗೆ
ನಾಶವೆಂಬ ಮಾತೇ ಇಲ್ಲದಿರುವುದರಿಂದ ಪುನರ್ಜನ್ಮವು ಎಂದಿಗೂ
ಉಂಟಾಗಲಾರದು. (೧೬—೨ ನೇ ವಾಕ್ಯ.)

ಜ್ಞಾನಿಯ ಭಕ್ತಿಯು ಪವಿತ್ರವಾದುದು ; ಏಕೆಂದರೆ
ಅವನಿಗೆ ಭಗವಂತನಲ್ಲಲ್ಲದೆ ಬೇರೊಬ್ಬರಲ್ಲಿಯೂ ಭಕ್ತಿ ಇರುವು
ದಿಲ್ಲ. ಐಶ್ವರ್ಯಾರ್ಥಿಭಕ್ತನು ಪರಮಾತ್ಮನ ಆಕಾರವಾದ ಐಶ್ವರ್ಯ
ವನ್ನು ಹೊಂದುವನು ; ಜಿಜ್ಞಾಸುವು ಪರಮಾತ್ಮನನ್ನು ಅಂತ
ರ್ಯಾಮಿಯಾಗಿ ಪಡೆದಿರುವ ತನ್ನ ನಿಜ ಅಕ್ಷರ ಸ್ವರೂಪವನ್ನು
ಹೊಂದುವನು. ಆದರೆ ಜ್ಞಾನಿಯು ಮಾತ್ರ ಪರಮಾತ್ಮನನ್ನೇ
ಹೊಂದಬೇಕೆಂದು ಆಸೆಪಟ್ಟು, ಆ ಲಾಭವನ್ನು ಹೊಂದುವುದ
ಕ್ಕಾಗಿ ಕೆಳಗೆ ವಿವರಿಸಿರುವ ಪರಮಾತ್ಮನ ಸ್ವರೂಪವನ್ನು ಸದಾ
ಚಿಂತಿಸುತ್ತಾ ಭಕ್ತಿಮಾಡುವನು. ಪ್ರಳಯಕಾಲದಲ್ಲಿ ಆ ಪರ
ಮಾತ್ಮನು ಎಲ್ಲಾ ಭೂತಗಳನ್ನೂ, ಅವುಗಳ ಅತಿಸೂಕ್ಷ್ಮ ಅವಸ್ಥೆ
ಯಲ್ಲಿ, ಅಂದರೆ ಅವನೊಳಗೆ ಲಯವಾಗಿದೆಯೋ ಎನ್ನುವ
ಅವಸ್ಥೆಯಲ್ಲಿ, ತನ್ನಲ್ಲಿಯೇ ಇಟ್ಟುಕೊಂಡಿರುವನು. ಪುನಃ ಸೃಷ್ಟಿ
ಕಾಲದಲ್ಲಿ ವಿಚಿತ್ರವಾದ ವಿವಿಧ ಸ್ಥೂಲ ಪದಾರ್ಥಗಳನ್ನು
ಸೃಷ್ಟಿಸುತ್ತಾ, ಪರಿಣಮಿಸುತ್ತಾ, ಅವುಗಳೊಳಗೆ ವ್ಯಾಪಿಸಿರು
ವನು. ಅಂದರೇನು, ಜ್ಞಾನಿಯಾದ ಭಕ್ತನು ಪ್ರಳಯ ಕಾಲ
ದಲ್ಲಿ ಭಗವಂತನಲ್ಲಿ ಲಯವಾಗಿದ್ದನು. ಮತ್ತು ಈ ಸೃಷ್ಟಿಕಾಲ
ದಲ್ಲಿ ಅವನನ್ನು ಅಂತರ್ಯಾಮಿಯಾಗಿ ಪಡೆದಿರುವನು. ಆದುದ
ರಿಂದ ಜ್ಞಾನಿಯು ಭಗವಂತನೇ ತನಗೆ ಧಾರಕನು, ಪೋಷಕನು
ಮತ್ತು ನಿಯಾಮಕನು ಎಂದೂ ಮತ್ತು ತಾನು ಅವನ ಭೋಗ್ಯ
ವಸ್ತು ಎಂದು ಭಗವಂತನನ್ನು ಸದಾ ಚಿಂತಿಸುತ್ತಾ
ಅವನಲ್ಲಿ ಸದಾ ಪ್ರೇಮಯುತ ಭಕ್ತಿ ಭಾವವನ್ನು ಪಡೆದಿರುವನು.
(೨೨)

(Re-printed from Mysore Vysya Patrika
February 1961)

M. V. P. Press, Mysore

# ಭಗವದ್ಗೀತಾ ಅಧ್ಯಾಯಗಳು ಎಂಟು-ಒಂಭತ್ತು

### ಕಾಲವಾದವರಿಗೆ ಶುಕ್ಲಗತಿ ಮತ್ತು ಕೃಷ್ಣಗತಿ ಎಂದು ಎರಡು ಮಾರ್ಗಗಳಿವೆ.

(ಶ್ಲೋಕಗಳು ೨೩, ೨೪, ೨೫, ೨೬, ೨೭)

ಈ ಶ್ಲೋಕಗಳಿಗೆ ಅರ್ಥವನ್ನೂ ಅವುಗಳ ಅಭಿಪ್ರಾಯಗಳನ್ನೂ ಸಮನ್ವಯ ಮಾಡಿ ತಿಳಿದುಕೊಳ್ಳಲು ಸ್ವಲ್ಪ ಶ್ರಮ ಪಡಬೇಕಾಗುತ್ತದೆ. ಇಪ್ಪತ್ತುಮೂರನೆಯ ಶ್ಲೋಕದಲ್ಲಿ " ಯಾವ ಕಾಲದಲ್ಲಿ ಹೋದರೆ ಹಿಂತಿರುಗುತ್ತಾರೆ. ಅಥವ ಹಿಂತಿರುಗುವುದಿಲ್ಲ ಆ ಕಾಲವನ್ನು ತಿಳಿಸುತ್ತೇನೆ " ಎಂದು ಹೇಳಿದೆ. ಇಪ್ಪತ್ತಾರನೆಯ ಶ್ಲೋಕದಲ್ಲಿ '' ಶುಕ್ಲ, ಕೃಷ್ಣ ಎಂಬ ಎರಡು ಗತಿಗಳು ಅಥವ ಮಾರ್ಗಗಳು ಜಗತ್ತಿನಲ್ಲಿ ಶಾಶ್ವತವಾಗಿ ಏರ್ಪಟ್ಟಿವೆ ". ಎಂದು ಹೇಳಿದೆ. ಪುನಃ ಇಪ್ಪತ್ತೇಳನೆಯ ಶ್ಲೋಕದಲ್ಲಿ '' ಅರ್ಜುನಾ ! ಈ ಎರಡು " ಸೃತಿಗಳನ್ನು " ಅಂದರೆ ಮಾರ್ಗಗಳನ್ನೂ ತಿಳಿದಿರತಕ್ಕ ಯಾವ ಯೋಗಿಯೂ "ಮೋಹಗೊಳ್ಳುವುದಿಲ್ಲ " ಎಂದು ಹೇಳಿದೆ. ಈ ಶ್ಲೋಕಗಳಲ್ಲಿರುವ '' ಕಾಲ '' " ಗತಿ " ಮತ್ತು '' ಸೃತಿ " ಎಂಬ ಮೂರು ಪದಗಳಿಗೂ ಒಂದೇ ಅರ್ಥಮಾಡಬೇಕಾಗುತ್ತದೆ. ಆದುದರಿಂದ ಇಪ್ಪತ್ತು ಮೂರನೆಯ ಶ್ಲೋಕದಲ್ಲಿರುವ "ಕಾಲ" ಎಂಬ ಪದಕ್ಕೆ " ಗತಿ " ಅಥವ " ಸೃತೀ " ಅಂದರೆ "ಮಾರ್ಗ" ಎಂದು ಅರ್ಥಮಾಡಿದ್ದಾರೆ. "ಕಾಲ" ಎಂಬ ಪದಕ್ಕೆ "ಮಾರ್ಗ" ಎಂದು ಅರ್ಥಮಾಡಿದರೆ ಇಪ್ಪತ್ತು ನಾಲ್ಕನೆಯ ಶ್ಲೋಕದಲ್ಲಿರುವ '' ಅಹಃ ", '' ಶುಕ್ಲಃ ", '' ಉತ್ತರಾಯಣ ಷಣ್ಮಾಸಃ " ಎಂಬ ಕಾಲವನ್ನು ಸೂಚಿಸುವ ಪದಗಳಿಗೂ ಮತ್ತು ಇಪ್ಪತ್ತೈದನೆಯ ಶ್ಲೋಕದಲ್ಲಿರುವ ''ಧೂಮೋ", "ರಾತ್ರಿ", '' ಕೃಷ್ಣಃ ", '' ದಕ್ಷಿಣಾಯನ ಷಣ್ಮಾಸಃ " ಎಂಬ ಕಾಲವನ್ನು ಸೂಚಿಸುವ ಪದಗಳಿಗೂ '' ಆಯಾ ಕಾಲಗಳ ಅಭಿಮಾನ ದೇವತೆಗಳು " ಎಂದು ಆಚಾರ್ಯರುಗಳು ಅರ್ಥಮಾಡಿದ್ದಾರೆ. ಪದಗಳಿಗೆ ಮೇಲೆ ಸೂಚಿಸಿರುವ ಅರ್ಥಗಳ ಪ್ರಕಾರ ಈ ಶ್ಲೋಕದಲ್ಲಿರುವ ಅಭಿಪ್ರಾಯಗಳನ್ನು ಕೆಳಗೆ ವಿವರಿಸಿದ್ದೇವೆ.

ಮೋಕ್ಷಾರ್ಥಿಯಾದ ಯೋಗಿಯು ಅಂದರೆ ಜಿಜ್ಞಾಸುವಾದ ಭಕ್ತನು ಮತ್ತು ಜ್ಞಾನಿಯಾದ ಭಕ್ತನು ಇವರಿಬ್ಬರೂ ಕಾಲವಾದ ಮೇಲೆ ಯಾವ ಮಾರ್ಗದಿಂದ ಹೋಗಿ ಹಿಂದಿರುಗದೇ ಇರುತ್ತಾರೆ ಮತ್ತು ಐಶ್ವರ್ಯಾರ್ಥಿಯಾದ ಭಕ್ತನು ಕಾಲವಾದ ಮೇಲೆ ಯಾವ ಮಾರ್ಗದಿಂದ ಹೋಗಿ ಪುನಃ ಹಿಂತಿರುಗುತ್ತಾನೆ ? (೨೩). ಜಿಜ್ಞಾಸುವೂ ಮತ್ತು ಜ್ಞಾನಿಯೂ ಕಾಲವಾದ ಮೇಲೆ ಹೋಗುವ ಮಾರ್ಗದಲ್ಲಿ ಪ್ರಕಾಶವಾದ ಅಗ್ನಿದೇವತೆಯೂ, ಹಗಲಿನ ಅಭಿಮಾನ ದೇವತೆಯೂ, ಶುಕ್ಲಪಕ್ಷದ ಅಭಿಮಾನ ದೇವತೆಯೂ, ಉತ್ತರಾಯಣ ಆರು ಮಾಸಗಳ ಅಭಿಮಾನ ದೇವತೆಯೂ ಇರುವರು. ಅವರು ಅವನನ್ನು ಎದುರುಗೊಂಡು ಸತ್ಕರಿಸುವರು. ಇಂಥಾ ಅತ್ಯುತ್ತಮವಾದ ಮಾರ್ಗದಲ್ಲಿ ಹೋದಂಥಾ ಬ್ರಹ್ಮೋಪಾಸಕರಾದ ಜನಗಳು ಅಂದರೆ ಜಿಜ್ಞಾಸುಗಳೂ ಮತ್ತು ಜ್ಞಾನಿಗಳೂ ಬ್ರಹ್ಮನನ್ನೇ ಹೊಂದುತ್ತಾರೆ ; ಅವರು ಎಂದಿಗೂ ಹಿಂತಿರುಗುವುದಿಲ್ಲ. ಅಂದರೆ ಪುನರ್ಜನ್ಮವನ್ನು ಪಡೆಯುವುದಿಲ್ಲ. (೨೪) ಆದರೆ ಐಶ್ವರ್ಯಾರ್ಥಿಯಾದ ಯೋಗಿಯು ಅಥವ ಪುಣ್ಯ ಕರ್ಮಗಳನ್ನು ಮಾಡಿದ ಭಕ್ತನು ಕಾಲವಾದ ಮೇಲೆ ಹೋಗುವ ಮಾರ್ಗದಲ್ಲಿ ಸಾಯಂಕಾಲ ಅಭಿಮಾನಿಯಾದ ದೇವತೆಯು (ಧೂಮಃ), ರಾತ್ರಿ ಅಭಿಮಾನ ದೇವತೆಯೂ, ಹಾಗೆಯೇ ಕೃಷ್ಣಪಕ್ಷದ ಅಭಿಮಾನ ದೇವತೆಯೂ, ದಕ್ಷಿಣಾಯನ ಆರು ಮಾಸಗಳ ಅಭಿಮಾನ ದೇವತೆಯೂ ಇರುವರು. ಅವರು ಅವನನ್ನು ಎದುರುಗೊಂಡು ಸತ್ಕರಿಸುವರು. ಇಂಥಾ ಉತ್ತಮವಾದ ಮಾರ್ಗದಲ್ಲಿ ಹೋದಂಥಾ ಭಗವಂತನ ಭಕ್ತರಾದ ಐಶ್ವರ್ಯಾರ್ಥಿಗಳು ಚಂದ್ರಲೋಕವನ್ನು ಅಂದರೆ ಬಹಳ ಕಾಲ ದುಃಖವಿಲ್ಲದೆ ಐಶ್ವರ್ಯಾದಿ ಭೋಗಗಳನ್ನುಂಟು ಮಾಡುವ ಪರಲೋಕವನ್ನು ಸೇರುತ್ತಾರೆ. ಆದರೆ ಇವರುಗಳು ಜಿಜ್ಞಾಸು ಮತ್ತು ಜ್ಞಾನಿಯ ಹಾಗೆ ಶಾಶ್ವತವಾದ ಆನಂದವನ್ನು ಪಡೆಯದೆ, ಚಂದ್ರಲೋಕಾನುಭವದ ನಾಶವನ್ನು ಹೊಂದಿ ಹಿಂತಿರುಗುವರು. ಅಂದರೆ ಪುನರ್ಜನ್ಮವನ್ನು ಪಡೆಯುವರು. (೨೫) ಹೀಗೆ ಐಶ್ವರ್ಯಾರ್ಥಿ, ಜಿಜ್ಞಾಸು ಮತ್ತು ಜ್ಞಾನಿ ಎಂಬ

ತ್ರಿವಿಧ ಭಗವಂತನ ಭಕ್ತರಿಗೆ ಅವರು ಕಾಲವಾದ ಮೇಲೆ ಈ ಶುಕ್ಲಗತಿ ಮತ್ತು ಕೃಷ್ಣಗತಿ ಎಂಬ ಎರಡು ಮಾರ್ಗಗಳು ಭಗವಂತನಿಂದ ಸೃಷ್ಟಿಯಲ್ಲಿ ಏರ್ಪಡಿಸಲ್ಪಟ್ಟವೆ ಎಂದು ಶಾಸ್ತ್ರವು ಜಗತ್ತಿನ ಜನರಿಗೆ ಉಪದೇಶಮಾಡಿದೆ. ಮೊದಲನೆಯ ಮಾರ್ಗದಲ್ಲಿ ಹೋಗುವವರಿಗೆ ಪುನರ್ಜನ್ಮವಿಲ್ಲ ; ಅವರು ಶಾಶ್ವತಾನಂದವನ್ನು ಪಡೆಯುತ್ತಾರೆ. ಎರಡನೆಯ ಮಾರ್ಗದಲ್ಲಿ ಹೋಗುವವರಿಗೆ ಪುನರ್ಜನ್ಮವಿದೆ ; ಅವರು ಬಹುಕಾಲ ದುಃಖ ಮಿಶ್ರವಿಲ್ಲದ ಐಶ್ವರ್ಯಾದಿ ಆನಂದಗಳನ್ನು ಪರಲೋಕಗಳಲ್ಲಿ ಅನುಭವಿಸಿ, ಪುನಃ ದುಃಖವೇ ಹೆಚ್ಚಾಗಿ ಸುಖವು ಕಮ್ಮಿಯಾಗಿರುವ ಈ ಲೋಕದಲ್ಲಿ ಹುಟ್ಟುವರು. (೨೬).

ಇಲ್ಲಿ ಒಂದು ಸಂಶಯವನ್ನು ಪರಿಹರಿಸಬೇಕಾಗಿದೆ. ಜಿಜ್ಞಾಸುವು ಮತ್ತು ಜ್ಞಾನಿಯು ಶಾಶ್ವತಾನಂದವನ್ನು ಪಡೆಯುತ್ತಾರೆ ; ಐಶ್ವರ್ಯಾರ್ಥಿಯಾದ ಭಕ್ತನು ಪುಣ್ಯ ಕರ್ಮಗಳನ್ನು ಮಾಡುತ್ತಾ ಉತ್ತಮ ಪರಲೋಕಾನುಭವಗಳನ್ನು ಪಡೆಯುವನು. ಆದರೆ ಭಗವಂತನಲ್ಲಿ ಭಕ್ತಿಯನ್ನೇ ಪಡೆಯದೆ, ಅವನನ್ನು ಉಪಾಸನೆ ಮಾಡದೆ ಪಾಪ ಕರ್ಮಗಳನ್ನು ಮಾಡುತ್ತಿರುವವರು ಕಾಲವಾದ ಮೇಲೆ ಯಾವ ಗತಿಯಲ್ಲಿ ಅಥವ ಮಾರ್ಗದಲ್ಲಿ ಹೋಗುವರು ? ಗೀತೆಯಲ್ಲಿ ಈ ಪ್ರಶ್ನೆಗೆ ಸಾಕ್ಷಾತ್ತಾಗಿ ಉತ್ತರ ಕೊಟ್ಟಿಲ್ಲದಿದ್ದರೂ ಅದರ ಉತ್ತರವನ್ನು ಊಹಿಸಬಹುದು. ಅಂಥಾವರು ಭಗವಂತನನ್ನೂ ಸೇರುವುದಿಲ್ಲ ; ಅಕ್ಷರ ಸ್ವರೂಪವನ್ನು ಹೊಂದುವುದಿಲ್ಲ ; ಮತ್ತು ಉತ್ತಮ ಪರಲೋಕಾನುಭವಗಳನ್ನೂ ಪಡೆಯುವುದಿಲ್ಲ. ಅವರು ಕಾಲವಾದ ಮೇಲೆ ಅಧೋಗತಿಯಲ್ಲಿ ಪ್ರಯಾಣ ಮಾಡಿ ಅಧಮವಾದ ಅಂದರೆ ದುಃಖಗಳಿಂದಲೂ, ಅಜ್ಞಾನದಿಂದಲೂ ಕೂಡಿರುವ ಲೋಕಗಳಲ್ಲಿದ್ದು ಪುನರ್ಜನ್ಮಗಳನ್ನು ಪಡೆಯುವರು (೨೬).

### ಯೋಗಿಯು ಕ್ರಮೇಣ ಮೇಲಾದ ಆದ್ಯಸ್ಥಾನವನ್ನು ಹೊಂದುತ್ತಾನೆ (ಶ್ಲೋಕಗಳು ೨೭, ೨೮)

ಒಟ್ಟನಲ್ಲಿ ತಾತ್ಪರ್ಯವೇನು ? ಮನುಷ್ಯನು ಐಶ್ವರ್ಯಾದಿ ಭೋಗಗಳನ್ನು ಅನುಭವಿಸುವುದಕ್ಕಾಗಿ ಮೊದಲು ಭಗವಂತನನ್ನು ನಂಬಿ, ಅವನ ಭಕ್ತನಾಗಿ ಐಶ್ವರ್ಯಾರ್ಥಿಯಾಗುತ್ತಾನೆ. ಕೆಲವು ಕಾಲವಾದ ಮೇಲೆ ಅವನು ಗತಿಚಿಂತನವೆಂಬ ಯೋಗಾಭ್ಯಾಸಮಾಡುತ್ತಾನೆ. ಅಂದರೇನು. ಅವನು ಕಾಲವಾದ ಮೇಲೆ ಉಂಟಾಗುವ ಶುಕ್ಲಗತಿ ಅಥವ ಅರ್ಚಿರಾದಿ ಮಾರ್ಗ ಮತ್ತು ಕೃಷ್ಣಗತಿ ಅಥವ ಧೂಮಾದಿ ಮಾರ್ಗ ಇವುಗಳ ಸ್ವರೂಪವನ್ನೂ ಮತ್ತು ಫಲಗಳನ್ನೂ ಚೆನ್ನಾಗಿ ಆಲೋಚಿಸುತ್ತಾನೆ ಆಗ ಅವನು ಅಧೋಗತಿಯನ್ನುಂಟುಮಾಡುವ ಅಜ್ಞಾನದಿಂದ ಕೂಡಿದ ಮತ್ತು ಭಕ್ತಿರಹಿತವಾದ ಪಾಪ ಕರ್ಮಗಳನ್ನು ಮಾಡುವುದೇ ಇಲ್ಲ. ಇನ್ನೇನು, ಶುಕ್ಲಗತಿ ಮತ್ತು ಕೃಷ್ಣಗತಿ ಎರಡರಲ್ಲಿ ಶುಕ್ಲಗತಿಯೇ ಅತ್ಯಂತ ಮೇಲಾದುದೆಂದು ತೀರ್ಮಾನಿಸಿ ಐಶ್ವರ್ಯಾರ್ಥಿಯು ಆಶೆಪಡುವ ಕೃಷ್ಣಗತಿಯ ಮೇಲೆ ಇದ್ದ ಮೋಹವನ್ನು ಸಂಪೂರ್ಣವಾಗಿ ತ್ಯಜಿಸುವನು. ತರುವಾಯ ಅವನು ಶುಕ್ಲಗತಿ ಅಥವ ಅರ್ಚಿರಾದಿ ಮಾರ್ಗವನ್ನು ಕಾಲವಾದ ಮೇಲೆ ಹೊಂದಲು ಮೊದಲು ಜಿಜ್ಞಾಸುವೂ ಆಮೇಲೆ ಜ್ಞಾನಿಯೂ ಆಗುವನು. ಅವನು ಮುಂದೆ ಸದಾ ಕಾಲದಲ್ಲೂ ಉತ್ತಮವಾದ ಯೋಗಾಭ್ಯಾಸವನ್ನು ಕೈಗೊಳ್ಳುತ್ತಾ ಯೋಗಿಯೇ ಆಗುತ್ತಾನೆ. (೨೭) ಭಗವದ್ಭಕ್ತನು ಮೊದಲು ಐಹಿಕ ಮತ್ತು ಆಮುಷ್ಮಿಕ ಐಶ್ವರ್ಯಾದಿಗಳನ್ನು ಪಡೆದು ಅನುಭವಿಸುವುದಕ್ಕಾಗಿ ಐಶ್ವರ್ಯಾರ್ಥಿಯಾಗಿ ಅಡಿಗಡಿಗೆ ಶಾಸ್ತ್ರೀಯವಾಗಿ ವೇದವನ್ನು ಸ್ವರದೊಡನೆ ಉಚ್ಚರಿಸುವುದು, ಯಜ್ಞಯಾಗಾದಿಗಳನ್ನು ಮಾಡುವುದು, ತಪಸ್ಸುಗಳನ್ನು ಆಚರಿಸುವುದು, ಸತ್ಪಾತ್ರರಿಗೆ ದಾನವನ್ನು ಕೊಡುವುದು ಇವೇ ಮೊದಲಾದ ಪುಣ್ಯ ಕರ್ಮಗಳನ್ನು ಮಾಡುವನು. ಆಮೇಲೆ ಈ ಅಭ್ಯಾಸಗಳಿಂದ ಉಂಟಾಗುವ ಕೃಷ್ಣಗತಿ ಅಥವ ಧೂಮಾದಿ ಮಾರ್ಗವು ಅಲ್ಪವು ಮತ್ತು ಅಸ್ಥಿರವು ಎಂಬುದನ್ನು ಮನನಮಾಡಿ ತಿಳಿಯುತ್ತಾನೆ. ತದನಂತರ ಅವನು ಜಿಜ್ಞಾಸುಭಕ್ತನಾಗಿ ಅಕ್ಷರ ಸ್ವರೂಪಾನುಭವ ಆನಂದವನ್ನು ಪಡೆಯಲು ಯೋಗಾಭ್ಯಾಸವನ್ನು ಕೈಗೊಳ್ಳುವನು. ಈ ಅಭ್ಯಾಸವನ್ನು ಮಾಡುವ ಸ್ವಲ್ಪ ಕಾಲಾನಂತರ ಈ ಅಕ್ಷರ ಸ್ವರೂಪಾನುಭವ ಆನಂದವು ಐಶ್ವರ್ಯಾದಿಫಲಗಳಿಗಿಂತಲೂ ಉತ್ತಮವಾದದ್ದಾದರೂ ಭಗವತ್ಪ್ರಾಪ್ತಿ ಆನಂದಕ್ಕಿಂತ ಕೀಳು ದರ್ಜೆಯದಾಗಿರುವುದೆಂದು ತಿಳಿಯುವನು ಆದರಿಂದ ಕೊನೆಯಲ್ಲಿ ಅವನು ಜ್ಞಾನಿಯೆಂಬ ಭಕ್ತನಾಗಿ ಬ್ರಹ್ಮನೆಂಬ ಆದಿಕಾರಣವಾದ ಭಗವಂತನ ಪ್ರಾಪ್ತಿಯೆಂಬ ಅತ್ಯಂತ ಮೇಲಾದ ಸ್ಥಾನವನ್ನು ಹೊಂದುತ್ತಾನೆ (೨೮).

## ವಿಜ್ಞಾನ ಸಹಿತ ಜ್ಞಾನವನ್ನು ಪಡೆದು ಆಚರಿಸಿ ಅಶುಭದಿಂದ ಮುಕ್ತರಾಗಿರಿ.

### ವಿಜ್ಞಾನ ಸಹಿತ ಜ್ಞಾನದ ಮಹಾತ್ಮೆ (ಶ್ಲೋಕಗಳು ೧, ೨, ೩)

ಏಳನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಭಗವಂತನಿಗೂ ಜಗತ್ತಿಗೂ ಇರುವ ಸಂಬಂಧವನ್ನು ತಿಳಿಸಿ,

ಆ ಭಗವಂತನಲ್ಲಿ ಭಕ್ತಿ ಮಾಡುವ ಭಕ್ತರು ಐಶ್ವರ್ಯಾರ್ಥಿ (ಆರ್ತ ಮತ್ತು ಅರ್ಥಾರ್ಥಿ) ಗಳೆಂದೂ, ಜಿಜ್ಞಾಸುಗಳೆಂದೂ ಜ್ಞಾನಿಗಳೆಂದೂ ಮೂರು ವಿಧವಾಗಿ ಇದ್ದಾರೆಂದು ತಿಳಿಸಿದನು. ಎಂಟನೆಯ ಅಧ್ಯಾಯದಲ್ಲಿ ಈ ತ್ರಿವಿಧ ಭಕ್ತರೂ ಭಗವಂತನ ಉಪಾಸನೆ ಮಾಡುವ ಕ್ರಮವನ್ನೂ ಮತ್ತು ಅವರುಗಳು ಕಾಲವಾದ ಮೇಲೆ ಪಡೆಯುವ ಗತಿಯನ್ನು ವಿವರಿಸಿದನು. ಈ ಒಂಭತ್ತನೆಯ ಅಧ್ಯಾಯದಲ್ಲಿ " ವಿಜ್ಞಾನ ಸಹಿತ ಜ್ಞಾನವೇ " ಅಂದರೆ ಜ್ಞಾನಿಯಾಗಿ ಭಗವಂತನಲ್ಲಿ ಭಕ್ತಿಯನ್ನು ಆಚರಿಸುವುದೇ ಉತ್ತಮವಾದ ಶ್ರೇಯಸ್ಸಾಧನವೆಂದು ಉಪದೇಶ ಮಾಡುತ್ತಾನೆ.

ಭೂಮಿಯಲ್ಲಿರುವ ಜನರೆಲ್ಲರೂ ಕೊನೆಯಲ್ಲಿ ಜ್ಞಾನಿಗಳಾಗಿ ಭಗವಂತನನ್ನು ಹೊಂದಬೇಕೆಂಬುದೇ ಮಹಾತ್ಮರುಗಳ ಧ್ಯೇಯ. ಆದರೆ ಅವರಲ್ಲಿರುವ ಪಾಪ ಕರ್ಮಗಳೇ ಮೊದಲಾದ ಅನೇಕ ಕಲ್ಮಷಗಳು ಈ ಧ್ಯೇಯವನ್ನು ಸಾಧಿಸಲು ವಿರೋಧಿಗಳಾಗಿವೆ. ಆದುದರಿಂದ ಭಗವಂತನನ್ನು ಹೊಂದಬೇಕೆಂಬ ಆಶೆಯುಳ್ಳ ಮನುಷ್ಯರು "ಜ್ಞಾನ" ಮತ್ತು "ವಿಜ್ಞಾನ" ಇವುಗಳೆರಡನ್ನೂ ತಿಳಿಯಬೇಕು ; ಇವುಗಳಲ್ಲಿ ಒಂದನ್ನು ಮಾತ್ರ ತಿಳಿದರೆ ಹೆಚ್ಚು ಪ್ರಯೋಜನವಿಲ್ಲ; ಎರಡನ್ನೂ ತಿಳಿಯಬೇಕು. ಹಾಗಾದರೆ " ಜ್ಞಾನ " ಎಂದರೇನು ? ವಿಜ್ಞಾನ ಎಂದರೇನು ? ಯಾವನು ತನ್ನ ಶರೀರವಾದ ಎಲ್ಲಾ ಚಿದಚಿತ್ತುಗಳಿಗಿಂತಲೂ ವಿಲಕ್ಷಣನಾಗಿರುವನೋ ಅಂಥಾ ಭಗವಂತನ ಅನಂತ ಪ್ರಕಾರ ಮಾಹಾತ್ಮೆಯನ್ನು ತಿಳಿಯುವುದು, " ಜ್ಞಾನ " ಅವನನ್ನು ಕುರಿತು ನಾವು ನಮ್ಮ ನಿತ್ಯದಿನಚರಿಯಲ್ಲಿ ಆಚರಿಸಬೇಕಾದ ಭಕ್ತಿರೂಪವಾದ ಉಪಾಸನೆಗಳ ಪ್ರಕಾರವನ್ನು ತಿಳಿಯುವುದೇ "ವಿಜ್ಞಾನ". ಆದುದರಿಂದ ನಿತ್ಯದಿನಚರಿಯಲ್ಲಿ ಭಕ್ತಿರೂಪವಾದ ಉಪಾಸನೆಯಿಂದ ಕೂಡಿದ ಭಗವಂತನ ಅನಂತ ಪ್ರಕಾರವಾದ ಮಾಹಾತ್ಮ್ಯೆಯನ್ನು ತಿಳಿಯುವುದೇ " ವಿಜ್ಞಾನ ಸಹಿತ ಜ್ಞಾನವು " ಅಂದರೇನು, ಸತ್ಯವಾದ ಬ್ರಹ್ಮ ಸ್ವರೂಪವನ್ನು ಅಥವ ಭಗವಂತನ ಸ್ವರೂಪವನ್ನು ಯೋಗ ಸಮಾಧಿಯಲ್ಲಿ ಸಾಕ್ಷಾತ್ಕರಿಸುವುದೇ ಜ್ಞಾನವು ; ಆ ಸತ್ಯವನ್ನು ಮನಸ್ಸಿನಲ್ಲಿ ತಿಳಿಯುವ ಪ್ರಕಾರವೂ, ಆ ಸತ್ಯಕ್ಕೂ ಜಗತ್ತಿಗೂ ಇರುವ ಸಂಬಂಧದ ತಿಳುವಳಿಕೆಯೂ. ಆ ಸತ್ಯವನ್ನು ಸಾಕ್ಷಾತ್ಕರಿಸಲು ಮಾಡಬೇಕಾದ ಉಪಾಸನಾದಿಗಳೂ ಇವೆಲ್ಲವೂ ಸೇರಿ "ವಿಜ್ಞಾನ" ಎಂದು ಹೇಳಿಸಿಕ್ಕೊಳ್ಳುತ್ತವೆ. ಹೀಗೆ ಯಾರು "ವಿಜ್ಞಾನ ಸಹಿತ ಜ್ಞಾನವನ್ನು " ತಿಳಿದು ಭಕ್ತಿಯಿಂದ ಅವನ ಉಪಾಸನೆಗಳನ್ನು ಶ್ರದ್ಧೆಯಿಂದ, ಪ್ರೀತಿಯಿಂದ ಕೈಗೊಳ್ಳುತ್ತಾರೆಯೋ ಅವರು ಭಗವಂತನ ಪ್ರಾಪ್ತಿಗೆ ವಿರೋಧಿಗಳಾದ ಸಮಸ್ತ ಅಶುಭಗಳಿಂದ ಬಿಡಲ್ಪಡುತ್ತಾರೆ. ಆದರೆ ಇಂಥಾ ಭಕ್ತರು ಭಗವಂತನು ಸಮಸ್ತವಾದ ಇತರ ವಸ್ತುಗಳಿಗಿಂತ ವಿಲಕ್ಷಣನು ಮತ್ತು ಅಪರಿಮಿತವಾದ ಮಹಾತ್ಮೆಯುಳ್ಳವನು ಎಂದು ದೃಢವಾಗಿ ತಿಳಿದು ಯಾವಾಗಲೂ ಮನನ ಮಾಡುತ್ತಿರುವುದರಿಂದ ಅವರು ವಿಶಾಲ ಮನಸ್ಕರಾಗಿ ತಮ್ಮ ಗುರುಗಳಲ್ಲಿಯೂ ಮತ್ತು ಭಗವಂತನಲ್ಲಿಯೂ ಹೆಚ್ಚಾಗಿ ಗೌರವವನ್ನೂ ವಿಶ್ವಾಸವನ್ನೂ ತೋರಿಸುತ್ತಾರೆ ; ಎಂದಿಗೂ ಅವರು ಅಸೂಯೆ ಎಂಬ ಮಾನಸಿಕ ಕಲ್ಮಷವನ್ನು ಪಡೆದಿರುವುದಿಲ್ಲ. ಅರ್ಜುನನು ತನ್ನ ಗುರುವಾಗಿಯೂ, ಸ್ವಾಮಿಯಾಗಿಯೂ ಇದ್ದ ಶ್ರೀ ಕೃಷ್ಣ ಭಗವಂತನಲ್ಲಿ ಸ್ವಲ್ಪವೂ ಅಸೂಯೆ ಎಂಬ ಮಾನಸಿಕ ಕಲ್ಮಷವನ್ನು ಪಡೆದಿರಲಿಲ್ಲ. ಆದುದರಿಂದಲೇ ಶ್ರೀಕೃಷ್ಣನು ಅವನಿಗೆ " ವಿಜ್ಞಾನ ಸಹಿತ ಜ್ಞಾನದ " ಮಾಹಾತ್ಮ್ಯೆಯನ್ನು ವಿಶದವಾಗಿ ತಿಳಿಸುತ್ತಾನೆ (೧).

" ವಿಜ್ಞಾನ ಸಹಿತವಾದ ಜ್ಞಾನವು " ರಾಜ ವಿದ್ಯೆಯು ರಾಜಗುಹ್ಯವು, ಪರಮಪವಿತ್ರವು, ಪ್ರತ್ಯಕ್ಷಾವಗಮವು, ಧರ್ಮ್ಯವು ಕರ್ತುಂಸುಸುಖವು, ಅವ್ಯವು ಎಂದು ಎರಡನೆಯ ಶ್ಲೋಕದಲ್ಲಿ ಉಪದೇಶಮಾಡಿದೆ. ಇದು ಹೇಗೆ ಎಂಬುದನ್ನು ಒಂದೊಂದಾಗಿ ತಿಳಿಯೋಣ :—

1. " ವಿಜ್ಞಾನ ಸಹಿತ ಜ್ಞಾನವು " ಹೇಗೆ ರಾಜ್ಯ ವಿದ್ಯೆಯು ? ಇದು ವಿದ್ಯೆಗಳಲ್ಲೆಲ್ಲಾ ಅತ್ಯುತ್ತಮವಾದ ವಿದ್ಯೆಯಾಗಿ, ವಿದ್ಯೆಗಳಿಗೆಲ್ಲಾ ರಾಜನಾಗಿರುವುದರಿಂದ ಇದನ್ನು " ರಾಜವಿದ್ಯೆ " ಎಂದು ಹೇಳಿದೆ. ಭಾರತ ದೇಶದ ಪೂರ್ವ ಕಾಲದ ರಾಜರುಗಳು ವಿಶಾಲ ಮನಸ್ಸನ್ನು ಪಡೆದಿದ್ದುದರಿಂದ ಅವರು ಅಧ್ಯಾತ್ಮ ವಿದ್ಯೆಗೆ ಗೌರವ ಕೊಟ್ಟು, ಆದರಲ್ಲಿರುವ ಉಪದೇಶಗಳನ್ನು ನಂಬಿ ಶ್ರದ್ಧೆಯಿಂದ ಅದರಲ್ಲಿರುವ ನೀತಿ ನಿಯಮಗಳನ್ನು ತಮ್ಮ ದೇಶವನ್ನು ಆಳುವ ಕಾರ್ಯಗಳಲ್ಲಿ ಉಪಯೋಗಿಸುತ್ತಿದ್ದರು ಆದುದರಿಂದಲೂ ಈ ವಿದ್ಯೆಗೆ ರಾಜವಿದ್ಯೆ ಎಂಬ ಹೆಸರು ಬಂದಿದೆ.

2. " ವಿಜ್ಞಾನಸಹಿತ ಜ್ಞಾನವು " ಹೇಗೆ ಗುಹ್ಯತಮವು ಮತ್ತು ರಾಜಗುಹ್ಯವು ? ಇದು ರಹಸ್ಯವಾದ ವಿದ್ಯೆಗಳಲೆಲ್ಲಾ ಅತಿ ರಹಸ್ಯವಾದ ವಿದ್ಯೆಯಾಗಿರುವುದರಿಂದ ಈ ವಿದ್ಯೆಯನ್ನು ಗುಹ್ಯತಮವಾದ ವಿದ್ಯೆ ಎಂದು ಹೇಳಿದೆ. ಇಷ್ಟೇ ಅಲ್ಲ, ಮುಖ್ಯವಾದ ರಾಜಕೀಯ ವಿಚಾರಗಳನ್ನು ಅತಿ ರಹಸ್ಯವಾಗಿ ಇಟ್ಟುಕೊಳ್ಳುವುದರಲ್ಲಿ ಮಹಾರಾಜರುಗಳು ಚತುರರಾದುದರಿಂದ ಈ ವಿದ್ಯೆಯನ್ನು " ರಾಜಗುಹ್ಯಂ " ಎಂದು ಕರೆದಿದೆ. ವಿದ್ಯೆಗಳಲ್ಲಿ ಗುಹ್ಯವಿದ್ಯೆ, ಗುಹ್ಯತರವಿದ್ಯೆ ಮತ್ತು ಗುಹ್ಯತಮ ವಿದ್ಯೆ ಎಂದು ಮೂರು ಅಂತಸ್ತುಗಳಿವೆ. ಸಾಧಾರಣವಾಗಿ

ಸಾವೆಲ್ಲರೂ ಎಚ್ಚರದಲ್ಲಿ ಪ್ರಪಂಚದಲ್ಲಿರುವ ವಸ್ತುಗಳನ್ನೂ, ಚಲನವಿಕಾರಗಳೆಲ್ಲವನ್ನೂ ನಮ್ಮ ಮನಸ್ಸು, ಇಂದ್ರಿಯಗಳ ಮೂಲಕ ತಿಳಿಯುತ್ತೇವೆ. ಆದರೆ ವೈಜ್ಞಾನಿಕರು ತಮ್ಮ ಯಾಂತ್ರಿಕ ಪ್ರಯೋಗಗಳಿಂದಲೂ, ಅನುಮಾನ ಪ್ರಮಾಣ ಧಿಂದಲೂ ಮೇಲೆ ತೋರುವ ಪ್ರಪಂಚದ ಅನುಭವಗಳಿಗೆ ಕಾರಣಗಳಾದ ಅಥವಾ ಆಧಾರವಾದ ಅತಿ ಸೂಕ್ಷ್ಮ ಕಟ್ಟಳೆಗಳನ್ನು ತಿಳಿಯುವುದು " ಗುಹ್ಯವು " ಅಥವ ಗುಟ್ಟು ಎಂದು ಹೇಳಬಹುದು ; ಏಕೆಂದರೆ ವಿಜ್ಞಾನಶಾಸ್ತ್ರಗಳಲ್ಲಿ ಶಿಕ್ಷಣವನ್ನು ಪಡೆಯದವರಿಗೆ ಅದು ಗುಟ್ಟಾಗಿಯೇ ಇರುತ್ತದೆ. ಇದರ ಮೇಲೆ ಅನುಮಾನ ಪ್ರಮಾಣ ಶಬ್ದಪ್ರಮಾಣ ಮತ್ತು ಯೋಗಾಭ್ಯಾಸಗಳಿಂದ ಪ್ರತಿಯೊಂದು ಸಜೀವ–ವಸ್ತುವಿನಲ್ಲೂ ಅಚೇತನವಾದ "ನಾನು" ಎಂಬ ಜ್ಞಾನವನ್ನು ಪಡೆದು, ಸತ್ತಮೇಲೆಯೂ ಜೀವಾತ್ಮನು ಇರುವವನು ಎಂದು ತಿಳಿಯುವುದು " ಗುಹ್ಯತರವು " ಎಂದರೆ ಪರಮಗುಟ್ಟು ಎಂದು ಹೇಳಬಹುದು : ಏಕೆಂದರೆ ವಿಜ್ಞಾನಶಾಸ್ತ್ರಜ್ಞರಿಗೂ ಇದು ಗುಟ್ಟಾಗಿದೆ. ಕೊನೆಯದಾಗಿ ಭಕ್ತಿರೂಪವಾದ ಉಪಾಸನೆಯಿಂದ " ವಿಜ್ಞಾನ ಸಹಿತವಾದ ಜ್ಞಾನವನ್ನು " ಪಡೆಯುವುದು "ಗುಹ್ಯತಮವು" ಎಂದರೆ ಅತ್ಯಂತ ಪರಮರಹಸ್ಯವು ; ಏಕೆಂದರೆ ಈ ವಿಚಾರವು ಕೇವಲ ವೈಯುಕ್ತಿಕ ಜೀವಾತ್ಮ ಸಾಕ್ಷಾತ್ಕಾರದಲ್ಲಿ ಮಾತ್ರವೇ ನಿರತರಾಗಿರುವ ಯೋಗಿಗಳಿಗೂ ಕೂಡ ಈ ವಿಶೇಷ ಜ್ಞಾನವು ಗುಟ್ಟಾಗಿಯೇ ಇರುತ್ತವೆ.

3. " ವಿಜ್ಞಾನಸಹಿತ ಜ್ಞಾನವು " ಹೇಗೆ ಉತ್ತಮವಾದ ಪವಿತ್ರವು ? ಭಗವಂತನನ್ನು ಹೊಂದುವುದಕ್ಕೆ ಮಾನವರು ಮಾಡುವ ಪಾಪಗಳು ವಿರೋಧಿಗಳಾಗಿವೆಯೆಂದೂ ಮತ್ತು ಭಗವಂತನಲ್ಲಿ ಭಕ್ತಿಯುತವಾಗಿ ಉಪಾಸನೆ ಮಾಡಿದರೆ ಈ ಪಾಪಾದಿ ಕಲ್ಮಷಗಳೆಲ್ಲವೂ ನಾಶವಾಗುತ್ತವೆಯೆಂದೂ ಮೇಲೆಯೇ ತಿಳಿಸಿದೆ. ಹೀಗೆ ಸಮಸ್ತ ಕಲ್ಮಷಗಳನ್ನೂ ಹೋಗಲಾಡಿಸುವುದರಿಂದ ಈ ಭಕ್ತರೂಪ ಉಪಾಸನೆಯು ಪರಮ ಪವಿತ್ರವಾದ ಅಥವ ಉತ್ತಮವಾದ ಸಾಧನವಾಗಿದೆ.

4. " ವಿಜ್ಞಾನಸಹಿತ ಜ್ಞಾನವು " ಹೇಗೆ ಪ್ರತ್ಯಕ್ಷಾವಗಮವು ? ಈ ವಿಧವಾದ ಭಕ್ತಿರೂಪವಾದ ಉಪಾಸನೆಯಿಂದ ಉಪಾಸ್ಯನಾದ ಪರಮಾತ್ಮನು ಭಕ್ತನಿಗೆ ಉಪಾಸನ ಕಾಲದಲ್ಲೇ ಪ್ರತ್ಯಕ್ಷವಾಗಿ ಸಾಕ್ಷಾತ್ಕಾರವಾಗುವನು.

5. " ವಿಜ್ಞಾನಸಹಿತ ಜ್ಞಾನವು " ಹೇಗೆ " ಧರ್ಮ್ಯವು" ಯಾವುದು ಪರಮಶ್ರೇಯಸ್ಸಿಗೆ ಸಾಧನವೋ ಅದು ಧರ್ಮ ಸ್ವಭಾವವನ್ನು ಪಡೆದಿರುವುದು. ಈ ಭಕ್ತಿರೂಪವಾದ ಉಪಾಸನೆಯು ಅತ್ಯಂತ ಪರಮ ಶ್ರೇಯಸಾದ ಭಗವಂತನ ಪ್ರಾಪ್ತಿಗೆ (ಅವನನ್ನು ಹೊಂದುವುದಕ್ಕೆ) ಸಾಧನವಾಗಿರುವುದರಿಂದ ಇದು ಧರ್ಮಮಯವಾಗಿದೆ. ಇದು ಉಪಾಸನೆಯ ಕಾಲದಲ್ಲೇ ಭಗವಂತನ ದರ್ಶನವನ್ನು ಉಂಟುಮಾಡುತ್ತದೆ ಎಂದು ಮೇಲೆ ಹೇಳಿದೆ. ಇಷ್ಟೇ (ಅಲ್ಲ) ಯಾವನು ತನ್ನ ಹೃದಯದಲ್ಲಿ ದೈವಿಕ ಪ್ರೀತಿಯನ್ನು ಬೆಳೆಸುತ್ತಾನೋ ಅವನು ಇತರ ವಿಚಾರದಲ್ಲಿ ಅಧರ್ಮವಾದ ಕಾರ್ಯಗಳನ್ನು ಮಾಡುವುದೇ ಇಲ್ಲ ; ಯಾವಾಗಲೂ ಇತರರಿಗೆ ಉಪಕಾರವಾಗುವ ಧರ್ಮ ಕೆಲಸಗಳನ್ನೇ ಮಾಡುತ್ತಾನೆ.

6. " ವಿಜ್ಞಾನಸಹಿತ ಜ್ಞಾನವು " ಹೇಗೆ ಆಚರಿಸಲು ಸುಖವು ? ವಿಜ್ಞಾನಸಹಿತ ಜ್ಞಾನವನ್ನು ಪಡೆಯಲು ಭಗವಂತನ ಉಪಾಸನೆಯನ್ನು ಮಾಡುವಾಗ ಉಪಾಸಕನಲ್ಲಿ ಪರಮಾತ್ಮನ ಮೇಲೆ ಪ್ರೀತಿಯು ತುಂಬಿದೆ ಮತ್ತು ಯಾರನ್ನು ಉಪಾಸನೆ ಮಾಡುತ್ತಾನೆಯೋ ಆ ಭಗವಂತನು ಆನಂದ ಸ್ವರೂಪನು. ಆದುದರಿಂದ ಈ ಜ್ಞಾನವನ್ನು ಹೊಂದುವ ಉಪಾಯವು ಸುಖ ರೂಪವಾಗಿಯೇ ಇದೆ. ಒಬ್ಬ ಅಧಿಕಾರಿಗೆ ರತ್ನಗಳನ್ನು ಪರೀಕ್ಷೆ ಮಾಡುವ ಕೆಲಸವಿದ್ದರೆ ಅವನು ರತ್ನಗಳನ್ನು ಎಂಗಡಿಸುವಾಗ ಆ ಕಾರ್ಯದಲ್ಲಿ ಸಂತೋಷವಾಗುತ್ತದೆಯೇ ವಿನಃ ಜಿಗುಪ್ಸೆಯಾಗುವುದಿಲ್ಲ ; ಏಕೆಂದರೆ ರತ್ನಗಳನ್ನೂ, ಅವುಗಳ ವಿವಿಧ ಕಾಂತಿಗಳನ್ನೂ ನೋಡುತ್ತಿರುವುದರಿಂದಲೇ ಆನಂದವಾಗುತ್ತದೆ. ಹಾಗೆಯೇ ನಾವು ನಮ್ಮ ಹೃದಯದಲ್ಲಿ ಪರಮಾತ್ಮನ ಮೇಲೆ ನಿಜವಾಗಿ ಪ್ರೀತಿಯನ್ನುಹೊಂದಿದವರಾಗಿ ಭಗವಂತನ ಸ್ತೋತ್ರ ಮನನ, ಕೀರ್ತನ ಧ್ಯಾನಾದಿಗಳನ್ನು ಐದಾರು ತಿಂಗಳು ಬಿಡದೆ ಮಾಡಿದರೆ ಆ ಮೇಲೆ ನಮಗೆ ಭಗವಂತನ ಉಪಾಸನವು ಬಹಳ ಸುಲಭವಾಗಿಯೂ ಸಂತೋಷವಾಗಿಯೂ ಇರುತ್ತದೆ.

7. " ವಿಜ್ಞಾನ ಸಹಿತ ಜ್ಞಾನವು " ಹೇಗೆ ಅವ್ಯಯವು ? ಕರ್ಮಯೋಗ ಜ್ಞಾನಯೋಗಗಳಲ್ಲಿ ಸಾಧನದ ಸ್ವರೂಪವೇ ಬೇರೆ, ಫಲದ ಸ್ವರೂಪವೇ ಬೇರೆ, ಆದರೆ ಭಕ್ತಿರೂಪವಾದ ಉಪಾಸನೆಯಲ್ಲಿ ಉಪಾಸನಾ ಕಾಲದಲ್ಲೂ ಭಕ್ತಿ ಇದೆ ; ಮತ್ತು ಅದರ ಫಲವೂ ಭಕ್ತಿಯೇ ಕರ್ಮಯೋಗ ಜ್ಞಾನಯೋಗಗಳಲ್ಲಿ ಬ್ರಹ್ಮಜ್ಞಾನವೆಂಬ ಫಲವು ದೊರೆತ ಒಡನೆಯೇ ಸಾಧನ ಕಾಲದಲ್ಲಿ ಮಾಡಿದ ಅಭ್ಯಾಸಗಳೆಲ್ಲವೂ ಮಾಯವಾಗುವುವು ; ಆದರೆ ವಿಜ್ಞಾನ ಸಹಿತ ಜ್ಞಾನವನ್ನು ಪಡೆಯುವ ಪ್ರಯತ್ನದಲ್ಲಾದರೋ ಭಗವಂತನ ಸಾಕ್ಷಾತ್ಕಾರವಾದ ಮೇಲೆಯೂ ಕೂಡ ಭಕ್ತನು ಪ್ರೀತಿಯಿಂದ, ಸಂತೋಷದಿಂದ, ಉತ್ಸಾಹದಿಂದ ಭಗವಂತನಲ್ಲಿ ಇನ್ನೂ ಅಧಿಕವಾಗಿ ಉಪಾಸನೆಯನ್ನೂ, ಕೈಂಕರ್ಯವನ್ನೂ ಮಾಡುತ್ತಾನೆ. ಆದುದರಿಂದ ಸಾಧನ ಕಾಲದಲ್ಲಿ ಮಾಡುತ್ತಿದ್ದ ಭಕ್ತಿಯೇ ಫಲ ದೆಶೆಯಲ್ಲೂ ವೃದ್ಧಿಯಾಗಿ ನಿಲ್ಲುತ್ತದೆ ; ಅದು ನಾಶರಹಿತವಾದುದು, ಕ್ಷಯವನ್ನು ಹೊಂದುವುದಿಲ್ಲ. ಆದುದರಿಂದಲೇ ಇದು ಅವ್ಯಯ. ಇಂತಹ ರೂಪವನ್ನು ಹೊಂದಿರುವ ಉಪಾಸನೆಯನ್ನು ಮಾಡುವವನಲ್ಲಿ ಭಗವಂತನು ಅತ್ಯಂತ ಪ್ರೀತಿಯನ್ನು ಹೊಂದಿದವನಾಗಿ ಅವನಿಗೆ ತನ್ನ ಸಾನ್ನಿಧ್ಯವನ್ನು ಕೊಟ್ಟು ಅದರ ಮೇಲೆಯೂ ಉಪಕಾರವನ್ನು ಮಾಡುತ್ತಲೇ ಇರುವನು (೨). (ಮುಂದುವರೆಯುವುದು)

(Reprited from Mysore Vysya Patrika April 61)

# ಭಗವದ್ಗೀತಾ ಅಧ್ಯಾಯ ಒಂಭತ್ತು

ಮಾನವರೆಲ್ಲರೂ ಇಂಥ ಸುಖಕರವಾಗಿ ಪರಮ ಶ್ರೇಯಸ್ಸನ್ನುಂಟು ಮಾಡುವ, ರಾಜಗುಹ್ಯರಾಜವಿದ್ಯೆ'ಎನಿಸಿಕೊಂಡಿರುವ, ನಾಶರಹಿತವಾದ ಮತ್ತು ಪರಮ ಪವಿತ್ರವಾದ ಧರ್ಮವಾಗಿ ಭಗವಂತನ ಸಾಕ್ಷಾತ್ಕಾರವನ್ನು ಉಂಟುಮಾಡುವ "ವಿಜ್ಞಾನಸಹಿತ ಜ್ಞಾನವನ್ನು" ತಿಳಿದು ಆಚರಿಸಲು ಯೋಗ್ಯರಾಗಿರುತ್ತಾರೆ. ಆದಾಗ್ಯೂ ಕೂಡ ಬಹು ಮಂದಿ ಅದರಲ್ಲಿ ವಿಶ್ವಾಸದಿಂದ ಕೂಡಿದ ಶ್ರದೆಯಿಲ್ಲದವರಾಗಿ ಭಗವಂತನನ್ನು ಹೊಂದದೆ ಮೃತ್ಯು ರೂಪವಾದ ಸಂಸಾರ ಚಕ್ರದಲ್ಲಿ ಸುತ್ತುತ್ತಿರುತ್ತಾರೆ ಇದು ಮಹತ್ತರವಾದ ಆಶ್ಚರ್ಯವಲ್ಲವೆ ?

### ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಲ್ಲಿ ಭಗವಂತನ ಪಾತ್ರವೇನು ?

ಭಗವಂತನ ಮಹಿಮೆಯನ್ನು ನಾವು ಇಷ್ಟು ಎಂದು ಅಳತೆ ಮಾಡಿ ನಮ್ಮ ಬುದ್ಧಿಯಲ್ಲಿ ಆಲೋಚಿಸಿ ತೀರ್ಮಾನಿಸಲು ಆಗುವುದಿಲ್ಲ. ಅವನು ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಯಾವ ರೀತಿ ನಡೆಸುತ್ತಿದ್ದಾನೆ. ಎಂಬದನ್ನು ವಿಚಾರ ಮಾಡಿದರೆ ಆಗ ನಮಗೆ ಅವನ ಮಹಿಮೆಯು ಎಂತಹುದು ಎಂಬುವುದು ಸ್ವಲ್ಪವಾದರೂ ಗೋಚರವಾಗುತ್ತದೆ- ಚಿತ್ ಮತ್ತು ಅಚಿತ್ ವಸ್ತುಗಳಿಂದ ಕೂಡಿರುವ ಈ ಸಮಸ್ತ ಜಗತ್ತೂ ಭಗವಂತನಿಂದ ವ್ಯಾಪಿಸಲ್ಪಟ್ಟಿರುತ್ತದೆ; ಆದರೆ ಹೀಗೆ ವ್ಯಾಪಿಸುವ ಸ್ವರೂಪವು ಸಾಧಾರಣ ಮನುಷ್ಯರಾದ ನಮ್ಮ ಇಂದ್ರಿಯ ಮನಸ್ಸು ಬುದ್ಧಿಗಳಿಗೆ ಗೋಚರವಾಗುವುದಿಲ್ಲ. ಈ ಸ್ವರೂಪವನ್ನೇ ಭಗವಂತನ ಅಂತರ್ಯಾಮಿ ಸ್ವರೂಪವೆಂದು ಋಷಿಗಳು ಕರೆದಿದ್ದಾರೆ. ಅಂದರೇನು, ಭಗವಂತನು ಸಕಲ ವಸ್ತುಗಳೊಳಗೂ ಅಂತರ್ಯಾಮಿಯಾಗಿರುತ್ತಾ ಅವನ್ನು ಧರಿಸಿ ಆಳುವನು ಮತ್ತು ಅವುಗಳಿಗೆ ಸ್ವಾಮಿಯಾಗಿಯೂ ಇರುವನು. ಹೀಗೆ ಅವನು ಚೇತನಾಚೇತನ ವಸ್ತು ಸಮೂಹಗಳೆಲ್ಲವನ್ನೂ ಅಂದರೆ ಜಗತ್ತೆಲ್ಲವನ್ನೂ ಅಂತರ್ಯಾಮಿಯಾಗಿ ವ್ಯಾಪಿಸಿರುವುದರಿಂದ ಸಮಸ್ತ ಜಗತ್ತೂ ಅವನಲ್ಲಿ ಇವೆ, ಅಥವ ಅವನ ಆಧಾರದ ಮೇಲೆ ನಿಂತಿವೆ ಅಥವ ಅವನ ಅಧೀನಕ್ಕೆ ಒಳಪಟ್ಟಿವೆ ಎಂದು ಹೇಳಬಹುದು. ಹಾಗಾದರೆ ಭಗವಂತನು ಸಮಸ್ತ ಚಿದಚಿತ್ಪದಾರ್ಥಗಳ ಸಂಯೋಗದಿಂದ ಅವುಗಳ ಆಶ್ರಯವನ್ನು ಪಡೆದಿರುವನೆ ! ಇಲ್ಲ ; ಭಗವಂತನು ಅವುಗಳಲ್ಲಿ ಇರುವುದಿಲ್ಲ. ಅವುಗಳಿಗೆ ಅಧೀನವಾದ ಸ್ಥಿತಿಯನ್ನು ಪಡೆದಿರುವುದಿಲ್ಲ. ಅಂದರೇನು, ಭಗವಂತನ ಇರುವಿಕೆಗೆ ಜಗತ್ತಿನಲ್ಲಿರುವ ಚಿದಚಿತ್ಪದಾರ್ಥಗಳಿಂದ ಯಾವ ಉಪಕಾರವೂ ಇರುವುದಿಲ್ಲ ಎಂದು ತಿಳಿಯಬೇಕು. (೪)

ಭಗವಂತನು ಸಕಲ ಚಿದಚಿತ್ಪದಾರ್ಥಗಳಲ್ಲಿ ಇರುವುದಿಲ್ಲವೆಂದೂ ಮತ್ತು ಅವೆಲ್ಲವೂ ಅಂತರ್ಯಾಮಿಯಾದ ಭಗವಂತನಲ್ಲಿವೆ ಎಂಬುದನು ತಿಳಿದೆವು. ಆದರೆ ಇನ್ನೊಂದು ವಿಧವಾಗಿ ಆಲೋಚಿಸಿದರೆ ಸಕಲ ಭೂತಗಳೂ ಕೂಡ ಭಗವಂತನಲ್ಲಿ ಇಲ್ಲ ಎಂದು ಹೇಳಬಹುದು. ಮಡಿಕೆಯಲ್ಲಿರುವ ನೀರಿಗೆ ಮಡಿಕೆಯು ಆಧಾರವಾಗಿದೆಯೆಂದು ನಮ್ಮ ಲೋಕದ ಅನುಭವದಲ್ಲಿ ತಿಳಿದಿದ್ದೇವೆ. ಆದರೆ ಭಗವಂತನು ಸಕಲ ಪದಾರ್ಥಗಳನ್ನೂ ಧರಿಸುವ ರೀತಿಯಲ್ಲಿಲ್ಲ; ಅವನ್ನು ಅವನು ಧರಿಸಿ, ಆಳಿ, ಸ್ವಾಮಿಯಾಗಿರುವ ರೀತಿಯು ನಮ್ಮ ಪ್ರತ್ಯಕ್ಷಕ್ಕೆ ಗೋಚರವಾಗುವುದಿಲ್ಲ. ಆದುದರಿಂದಲೇ ಭಗವಂತನು ಜಗತ್ತನ್ನೂ, ಅದರಲ್ಲಿರುವ ಸಕಲ ಪದಾರ್ಥಗಳನ್ನೂ ತನ್ನ "ಈಶ್ವರ ಯೋಗ" ಎಂದು ಕರೆಯಲ್ಪಡುವ ತನ್ನ "ದಿವ್ಯ ಸಂಕಲ್ಪ" ಎಂಬ ಇಚ್ಛೆಯಿಂದ ಧರಿಸಿದ್ದಾನೆಂದು ಹೇಳಿದೆ. ಸರ್ವೇಶ್ವರನಾದ ಭಗವಂತನ ಈ ಯೋಗ ಮಹಿಮೆಯನ್ನು ಎಷ್ಟೆಷ್ಟು ಆಲೋಚಿಸಿ ತಿಳಿಯಲು ಪ್ರಯತ್ನಿಸುತ್ತೇವೆಯೋ ಅದಕ್ಕಿಂತ ಮೇಲೆ ಆ ಮಹಿಮೆಯು ಆಶ್ಚರ್ಯವನ್ನುಂಟು ಮಾಡುತ್ತದೆ; ಏಕೆಂದರೆ ಈ ಆಶ್ಚರ್ಯಕರವಾದ ಅಂತರ್ಯಾಮಿ ಸ್ವರೂಪವೆಂಬ ಈಶ್ವರಯೋಗದ ಮಹಿಮೆಯು ಭಗವಂತನಲ್ಲಿಲ್ಲದೆ ಇನ್ನು ಯಾವ ಚಕ್ರಾಧಿಪತಿಯಾದ ಮನುಷ್ಯನಲ್ಲಾಗಲೀ ಅಥವ ಬ್ರಹ್ಮಾದಿದೇವತೆಯಲ್ಲಾಗಲೀ ಕಂಡುಬರುವುದಿಲ್ಲ. ಈ ಅಸಾಧಾರಣವಾದ ಮತ್ತು ಆಶ್ಚರ್ಯಕರವಾದ ಈಶ್ವರಯೋಗದ ಅಥವ ದಿವ್ಯ ಸಂಕಲ್ಪದ ಮಹಿಮೆಯನ್ನು ಹೀಗೆ ಮನನಮಾಡಬೇಕು. "ಭಗವಂತನು ಸಮಸ್ತ ಚಿದಾತ್ಮಕ ಭೂತಗಳನ್ನೂ ಧರಿಸಿರುವನು ; ಆದಾಗ್ಯೂ ಅವನು ಭೂತಗಳಲ್ಲಿ ನಿಂತಿರುವವನಲ್ಲ. ಸಮಸ್ತ ಭೂತಗಳಿಗೂ

ಸ್ವಾಮಿಯಾದ ಭಗವಂತನಿಗೆ ಸಮಸ್ತ ಚಿದಚಿತ್ಪದಾರ್ಥಗಳಿಂದ ಯಾವ ಉಪಕಾರ ಅಥವಾ ಪ್ರಯೋಜನವೂ ಇಲ್ಲ. ಭಗವಂತ ಮನೋಮಯ ಸಂಕಲ್ಪವೇ ಅವನ ಭೂತಭಾವನವು; ಈ ಭೂತ ಭಾವನವೆಂಬ ಈಶ್ವರ ಸಂಕಲ್ಪವೇ ಭೂತಗಳನ್ನು ಧಾರಣೆ ಮಾಡುವಂತಹುದು ಮತ್ತು ನಿಯಮನ ಮಾಡುವಂತಹುದು. ಈ ಸಂಕಲ್ಪ ಮಾತ್ರದಿಂದಲೇ ಭಗವಂತನು ಸಕಲ ಚಿದಚಿತ್ಪದಾರ್ಥಗಳನ್ನೂ ಧರಿಸಿ, ಆಳಿ, ಕಾಪಾಡುತಾನೆ." (೫) ಹ್ಯಾಗೆ ಎಲ್ಲಾ ಕಡೆಗಳಲ್ಲೂ ಸಂಚರಿಸುವ ಮಹತ್ತಾದ ಅಥವ ದೊಡ್ಡದಾದ ವಾಯುವು ಸದಾ ಆಕಾಶದಲ್ಲಿ ಇರುವುದೋ ಹಾಗೆಯೇ ಸಮಸ್ತ ಭೂತಗಳೂ ಭಗವಂತನಲ್ಲಿ ನಿಂತಿವೆ ಎಂದು ನಾವು ತಿಳಿಯಬೇಕು ; ಆದರೆ ಅವುಗಳು ತಮಗೆ ಆಧಾರವಾಗಿರುವ ಭಗವಂತನನ್ನೂ ತಿಳಿಯುವುದಿಲ್ಲ. ಇಷ್ಟೇ ಅಲ್ಲ, ಗಾಳಿಯು ಬೀಸುವುದು, ಮೇಘಗಳ ಉದಯ, ಸಮುದ್ರದ ಅಲೆಗಳ ಚಲನೆಗಳು, ಚಂದ್ರನ ವೃದ್ಧಿಕ್ಷಯಗಳು, ಸಿಡಿಲಿನ ಹೊಡೆತ, ಸೂರ್ಯನಕ್ಷತ್ರಾದಿಗಳ ಗತಿ ಇವೇ ಮುಂತಾದ ಪ್ರವೃತ್ತಿಗಳೆಲ್ಲವೂ ಭಗವಂತನ ನಿಯಮಕ್ಕೆ ಒಳಪಟ್ಟಿವೆ ಎಂದು ವೇದವು ತಿಳಿಸುತ್ತದೆ. ಒಟ್ಟನಲ್ಲಿ, ಇತರ ಸಹಾಯವನ್ನು ಅಪೇಕ್ಷಿಸದೆ ಭಗವಂತನ ಸಂಕಲ್ಪದಿಂದಲೇ ಸಮಸ್ತ ಚಿದಚಿತ್ ಪದಾರ್ಥಗಳ ಸ್ಥಿತಿ ಪ್ರವೃತ್ತಿಗಳು ಆಗುತ್ತಿವೆ ಎಂದು ಹೇಳಿದ ಹಾಗಾಯಿತು. (೬)

ಇನ್ನು ಭೂತಗಳ ಉತ್ಪತ್ತಿ ವಿನಾಶಗಳು ಹೇಗೆ ಉಂಟಾಗುತ್ತವೆ ಎಂಬುದನ್ನು ತಿಳಿಯೋಣ. ಭಗವಂತನ ಸಂಕಲ್ಪದಿಂದಲೇ ಸಮಸ್ತ ಭೂತಗಳ ಉತ್ಪತ್ತಿ ಪ್ರಳಯಗಳೂ ಕೂಡ ಆಗುತ್ತಲೇ ಇರುವುವು. ಒಂದು ಕಲ್ಪದ ಅಂತ್ಯದಲ್ಲಿ ಅಂದರೆ ಆ ಕಲ್ಪದ ಚತುರ್ಮುಖ ಬ್ರಹ್ಮನ ಅವಸಾನಕಾಲದಲ್ಲಿ ಸ್ಥಾವರವಾಗಿಯೂ ಜಂಗಮವಾಗಿಯೂ ಇರುವ ಸಮಸ್ತ ಭೂತಗಳೂ ಭಗವಂತನ ಶರೀರವಾದ, ತಮಸ್ಸೆಂದು ಕರೆಯಲ್ಪಡುವ ಮತ್ತು ನಾಮರೂಪವಿಭಾಗಗಳಿಗೆ ಅನರ್ಹವಾದ ಮೂಲಪ್ರಕೃತಿಯ ಅವಸ್ಥೆಯನ್ನು ಹೊಂದುವುವು. ಅಂದರೇನು, ಅವು ಭಗವಂತನ ಸಂಕಲ್ಪದಿಂದಲೇ ಪ್ರಕೃತಿಯಲ್ಲಿ ಲಯವನ್ನು ಹೊಂದುತ್ತವೆ. ಪುನಃ ಮುಂದಿನ ಕಲ್ಪದ ಆದಿಯಲ್ಲಿ ಭಗವಂತನು ಆ ಭೂತಗಳನ್ನೇ ವಿಧವಿಧವಾಗಿ ಸೃಷ್ಟಿಸುವನು (೭). ಈ ವಿಚಿತ್ರ ಸೃಷ್ಟಿಯ ಕ್ರಮವೇನು ? ಭಗವಂತನು ತನ್ನ ಶರೀರವಾದ ಜಡಪ್ರಕೃತಿಯಲ್ಲಿ ಅಂತರಾತ್ಮನಾಗಿದ್ದು ಅಂದರೆ ಆ ಮೂಲ ಪ್ರಕೃತಿಯನ್ನು ಅಧಿಷ್ಠಾನ ಮಾಡಿಕೊಂಡು, ಅದನ್ನು ವಿಕಾರ ಮಾಡುತ್ತಾ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ ಎಂಬ ಎಂಟುಬಗೆಯಾದ ತತ್ವಗಳನ್ನು ಉಂಟುಮಾಡುವನು ಇಷ್ಟೇ ಅಲ್ಲ; ಈ ತತ್ವಗಳ ಸಂಯೋಗದಿಂದ ಉಂಟಾಗಿರುವ ವಿಚಿತ್ರಗಳಾದ ಶರೀರಗಳನ್ನು ಪಡೆದಿರುವ ದೇವ, ಮನುಷ್ಯ, ತಿರ್ಯಕ್, ಸ್ಥಾವರ ಎಂಬ ನಾಲ್ಕು ವಿಧವಾಗಿರುವ ಸಮಸ್ತ ಪ್ರಾಣಿವರ್ಗವನ್ನು ಪುನಃಪುನಃ ಆಯಾ ಕಾಲಗಳಲ್ಲಿ ಭಗವಂತನೇ ತನ್ನ ಸತ್ಯಸಂಕಲ್ಪದಿಂದ ಸೃಷ್ಟಿಸುವನು. ಆದರೆ ಆ ಭೂತಗಳೆಲ್ಲವೂ ಸರ್ವವನ್ನೂ ಮೋಹಗೊಳಿಸುವ, ಸತ್ವ ರಜಸ್ತಮೋಗುಣಗಳಿಂದ ಕೂಡಿರುವ, ಭಗವಂತನ ಶರೀರವಾದ ಪ್ರಕೃತಿಯ ವಶಕ್ಕೆ ವಿಧಿಯಿಂದ ಸಿಕ್ಕಿಕೊಂಡು ತಮ್ಮತಮ್ಮ ಸ್ವಾತಂತ್ರ್ಯವನ್ನೇ ಕಳೆದುಕೊಂಡಿರುವುವು (೮).

ಇಲ್ಲಿ ಒಂದು ಸಂದೇಹವನ್ನು ಪರಿಹರಿಸಬೇಕಾಗಿದೆ. ಕೆಲವರು ಸುಖಿಗಳಾಗಿಯೂ, ಕೆಲವರು ದುಃಖಿಗಳಾಗಿಯೂ ಹುಟ್ಟಲು ಅಂದರೆ ಒಬ್ಬನು ರಾಜಕುಮಾರನಾಗಿಯೂ, ಇನ್ನೊಬ್ಬನು ಭಿಕ್ಷುಕನ ಮಗನಾಗಿಯೂ ಹುಟ್ಟಲು ಭಗವಂತನೇ ಕಾರಣನಾಗುವುದಿಲ್ಲವೆ ? ಈ ಜಗತ್ತಿನಲ್ಲಿರುವ ಚಿದಚಿದಾತ್ಮಕ ವಸ್ತುಗಳ ವಿಧವಿಧವಾದ ಸೃಷ್ಟಿಗೆ ಭಗವಂತನೇ ಕಾರಣನಾದರೆ ಅವನು ಪಕ್ಷಪಾತಿ ಎಂಬ ದೋಷವು ಅವನಿಗೆ ಅನ್ವಯಿಸುವುದಿಲ್ಲವೆ ? ಮತ್ತು ಈ ವಿಷಮಸೃಷ್ಟಿರೂಪವಾದ ಕರ್ಮಗಳು ಭಗವಂತನನ್ನು ಕೂಡ ಕರ್ಮಬಂಧನಕ್ಕೆ ಒಳಪಡಿಸುವುದಿಲ್ಲವೆ ? ಈ ದೋಷಗಳು ಭಗವಂತನಲ್ಲಿರುವುದಿಲ್ಲ; ಏಕೆಂದರೆ ಕ್ಷೇತ್ರಜ್ಞರ ಅಥವ ಜೀವರುಗಳು ಪೂರ್ವದಲ್ಲಿ ಮಾಡಿದ ಕರ್ಮಗಳು ಅವರಿಗೆ ದೇವ, ಮನುಷ್ಯ, ತಿರ್ಯಕ್, ಸ್ಥಾವರಾದಿ ವಿಷಯ ಭಾವಗಳನ್ನೊಳಗೊಂಡ ವಿಷಮಸೃಷ್ಟಿಗಳ ಉತ್ಪತ್ತಿಗಳಿಗೆ ಕಾರಣವಾಗಿವೆ. ಭಗವಂತನು ಉದಾಸೀನನಾಗಿ ಅಂದರೆ ಆಸಕ್ತಿ ರಹಿತನಾಗಿ ವಿಷಮ ಸೃಷ್ಟಿಯಿಂದ ಕೂಡಿದ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳನ್ನು ನಡೆಸುತ್ತಾ ಆಯಾ ಪ್ರಾಣಿಗಳನ್ನು ಅವರವರ ಕರ್ಮಾನುಗುಣವಾಗಿ ವಿಚಿತ್ರವಾಗಿ ಸೃಷ್ಟಿಸುವನು, ಅಂದರೆ ಅವರವರಿಗೆ ವಿಧವಿಧಗಳಾದ ಜನ್ಮಗಳನ್ನು ಕೊಡುತ್ತಾನೆ. ಭಗವಂತನು ಪ್ರಾಣಿಗಳ ವಿಚಿತ್ರ ಸೃಷ್ಟಿಗಳನ್ನು ಅವರವರ ಕರ್ಮಾನುಗುಣವಾಗಿ ಮಾಡುವುದರಿಂದ ಅವನಿಗೆ ಪಕ್ಷಪಾತ ದೋಷವು ಅಂಟುವುದಿಲ್ಲ ಮತ್ತು ಜಗತ್ಸೃಷ್ಟಿಯನ್ನು ಉದಾಸೀನನಾಗಿ ಅಂದರೆ ಆಸಕ್ತಿ ರಹಿತನಾಗಿ ನಡೆಸುವುದರಿಂದ ಅವನು ಕರ್ಮಬಂಧನಕ್ಕೆ ಒಳಪಡುವುದಿಲ್ಲ. (೯). ಕೊನೆಯ ತೀರ್ಮಾನವೇನು ? ಸತ್ಯಸಂಕಲ್ಪನಾದ ಭಗವಂತನಿಂದ ಕಟಾಕ್ಷಿಸಲ್ಪಟ್ಟದ್ದಾಗಿ ಅವನ ಪ್ರಕೃತಿಯು ಜೀವರುಗಳ ಕರ್ಮಕ್ಕೆ ತಕ್ಕಹಾಗೆ ಚರಾಚರವಾಗಿರುವಂತೆ ಈ ಜಗತ್ತನ್ನು ಉಂಟುಮಾಡುತ್ತವೆ. ಭಗವಂತನು ಸ್ವಾಮಿ

ಯೋಗಿಯೂ, ಸತ್ಯಸಂಕಲ್ಪನಾಗಿಯೂ, ನಿಷ್ಕರುಣತ್ವವೇ ಮುಂತಾದ ದೋಷವಿಲ್ಲದವನಾಗಿಯೂ, ಕರ್ಮಬಂಧಕ್ಕೆ ಒಳಪಡದವನಾಗಿಯೂ, ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ನಡೆಸುತ್ತಿರುವ ಆಶ್ಚರ್ಯವನ್ನು ಉಂಟುಮಾಡುವ ಈಶ್ವರಯೋಗವನ್ನು ಪಡೆದಿರುವನು. (೧೦)

### ಕೆಲವು ಮಹಾತ್ಮರು ಭಗವಂತನ ಅವತಾರಗಳಲ್ಲಿ ಭಕ್ತಿಮಾಡುತ್ತಾರೆ (ಶ್ಲೋಕಗಳು–೧೧, ೧೨, ೧೩' ೧೪,)

ಸಾಮಾನ್ಯವಾಗಿ ಬಹುಮಂದಿ ಜ್ಞಾನವಿಲ್ಲದವರಾದುದರಿಂದ ಭೂತಗಳಿಗೆಲ್ಲಾ ನಿಯಾಮಕನಾಗಿರ ಭಗವಂತನ ಸ್ವರೂಪ ರೂಪಗುಣಗಳನ್ನು ತಿಳಿಯಲಾರರು ಆದುದರಿಂದಲೇ ಅವರು ಮನುಷ್ಯ ರೂಪದಲ್ಲಿ ಅವತಾರಮಾಡಿರುವ ಭಗವಂತನನ್ನು ಸಾಧಾರಣ ಮನುಷ್ಯಮಾತ್ರನೆಂದು ತಿಳಿದಿರುವರೇ ವಿನಹ ಅವನು ಪರತ್ವದಿಂದ ಕೂಡಿದವನೆಂದು ತಿಳಿಯುವುದಿಲ್ಲ. ತಾವು ಮಾಡಿರುವ ಪಾಪಕಾರ್ಯಗಳಿಂದ ಮೋಹಿತರಾಗಿರುವುದರಿಂದ ಅವರಿಗೆ ಭಗವಂತನ ಅವತಾರಗಳ ಮಹಿಮೆಯೇ ಗೊತ್ತಾಗುವುದಿಲ್ಲ. ಅವರು ಮನುಷ್ಯರೂಪವನ್ನು ತೆಗೆದುಕೊಂಡಿರುವ ಭಗವಂತನನ್ನು ಇತರ ಸಜಾತೀಯ ಸಾಧಾರಣ ಮನುಷ್ಯನನ್ನಾಗಿ ಭಾವಿಸಿ ತಿರಸ್ಕಾರ ಮಾಡುತ್ತಾರೆ. (೧೧) ಇವರುಗಳು ಭಗವಂತನ ಅವತಾರಗಳ ಮಹಾತ್ಮೆಯನ್ನು ತಿಳಿಯದಿರಲು ಕಾರಣವೇನು? ಮತ್ತು ಇವರ ಜೀವನವು ಎಂತಹದು? ಇವರು ರಾಕ್ಷಸ ಸಂಬಂಧವಾದ ಅಂದರೆ ಸ್ವಾರ್ಥಭಾವನೆಯನ್ನುಂಟುಮಾಡುವ, ಆಸುರಸಂಬಂಧವಾದ ಅಂದರೆ ಪರಹಿಂಸೆಯನ್ನುಂಟುಮಾಡುವ ಮತ್ತು ಮೋಹವನ್ನುಂಟುಮಾಡುವ ಪ್ರಕೃತಿಸ್ವಭಾವವನ್ನು ಹೊಂದಿರುವುದರಿಂದಲೇ ರಾಜಸ ಮತ್ತು ತಾಮಸ ಗುಣಗಳಿಂದ ಬಂಧಿಸಲ್ಪಟ್ಟಿರುವರು. ಆದುದರಿಂದಲೇ ಇವರು ನಿರರ್ಥಕಗಳಾದ ಕಾಮಉಳ್ಳವರು ನಿಷ್ಫಲಗಳಾದ ಕರ್ಮಾರಂಭಉಳ್ಳವರು ಪ್ರಯೋಜನವಿಲ್ಲದ ಜ್ಞಾನಉಳ್ಳವರು ಮತ್ತು ನಾಶಹೊಂದಿದ ಚಿತ್ತಉಳ್ಳವರು. ಆಸುರ ಮತ್ತು ತಾಮಸ ಪ್ರಕೃತಿಯು ಇವರಿಗೆ ಭಗವಂತನ ಮನುಷ್ಯತ್ವದಲ್ಲಿ ಪರಮ ಕಾರುಣ್ಯವೇ ಮೊದಲಾದ ಪರತ್ವಸೂಚಕಗಳಾದ ಗುಣಗಳನ್ನು ಮರೆಸುತ್ತದೆ ; ಅಂದರೇನು ಅವರು ಸರ್ವವಿಷಯಗಳಲ್ಲಿಯೂ ಯಥಾರ್ಥ ಜ್ಞಾನವನ್ನು ಪಡೆಯಲಾರರು ಅವರು ಸರ್ವೇಶ್ವರನಾದ ಭಗವಂತನನ್ನು ಇತರರಿಗೆ ಸಮನೆಂದು ಭಾವಿಸಿರುವುದರಿಂದ, ಅವರು ಭಗವಂತನ ವಿಷಯದಲ್ಲಿ ಯಾವುದನ್ನು ಮಾಡಲು ಅಪೇಕ್ಷಿಸುವರೋ ಮತ್ತು ಯಾವುದನ್ನು ಮಾಡುತ್ತಾರೆಯೋ ಅವುಗಳೆಲ್ಲವೂ ವ್ಯರ್ಥವು ಒಟ್ಟಿನಲ್ಲಿ ಹೀಗೆ ಆಸುರ ಮತ್ತು ರಾಕ್ಷಸ ಪ್ರಕೃತಿಯಿಂದ ಮೋಹಿತರಾಗಿ ಭಗವಂತನ ಅವತಾರ ಮಹಿಮೆಯನ್ನು ತಿಳಿಯದ ಮಾನವರ ಆಸೆಗಳೂ, ಕರ್ಮಗಳೂ, ಜ್ಞಾನವೂ ಮತ್ತು ಚಿತ್ತವೃತ್ತಿಗಳೆಲ್ಲವೂ ವ್ಯರ್ಥವಾದುವುಗಳಾಗಿ ಪರಿಣಮಿಸುವುವು. (೧೨)

ಆದರೆ ಕೆಲವರುಮಾತ್ರ ಅನೇಕ ಪುಣ್ಯಕರ್ಮಗಳನ್ನು ಮಾಡಿರುವುದರಿಂದ ಭಗವಂತನನ್ನು ಶರಣು ಹೊಂದಿ, ಸಕಲಪಾಪಗಳನ್ನೂ ಹೋಗಲಾಡಿಸಿಕೊಂಡು, ದೈವಿಕಪ್ರಕೃತಿಯನ್ನು ಆಶ್ರಯಿಸಿ, ದೈವಿಕಸ್ವಭಾವವನ್ನು ಹೊಂದಿರುತ್ತಾರೆ. ಪರಿಶುದ್ಧ ಮನಸುಳ್ಳವರಾದ ಇಂತಹ ಮಹಾತ್ಮರು ಭೂತಗಳಿಗೆಲ್ಲಾ ಒಡೆಯನೂ, ಸರ್ವಜ್ಞನೂ, ಸತ್ಯಸಂಕಲ್ಪನೂ, ಔದಾರ್ಯ ಸೌಶೀಲ್ಯ ವಾತ್ಸಲ್ಯವೇ ಮೊದಲಾದ ಗುಣಗಳಿಂದ ಕೂಡಿದವನೂ ಆದ ಅವತಾರ ಪುರುಷನಾದ ಭಗವಂತನನ್ನು ಭೂತಗಳ ಆದಿಕಾರಣನೆಂದೂ ಮತ್ತು ನಾಶರಹಿತನೆಂದೂ ತಿಳಿದಿರುವರು. ಇಷ್ಟೇಅಲ್ಲ, ಮನೋವಾಕ್ಕುಗಳಿಗೆ ಸಿಕ್ಕಲಾರದ ನಾಮ ಕರ್ಮ ಸ್ವರೂಪಗಳಿಂದ ಕೂಡಿದ ಪರಸ್ವರೂಪನಾದ ಭಗವಂತನೇ ಅತ್ಯಧಿಕ ಕರುಣೆಯಿಂದ ಸಾಧುಗಳನ್ನು ಕಾಪಾಡುವದಕ್ಕೋಸ್ಕರ ಮನುಷ್ಯನಾಗಿ ಅವತರಿಸುತ್ತಾನೆಂದು ಚೆನ್ನಾಗಿ ತಿಳಿದು ನಂಬಿರುವರು. ಈ ಕಾರಣದಿಂದ ಜ್ಞಾನಿಗಳು ಅವತಾರಪುರುಷನಾದ ಭಗವಂತನನ್ನೂಕೂಡ ಅನನ್ಯಮನಸ್ಕರಾಗಿ ಅಂದರೆ ಬೇರೆ ಯಾವುದರಲ್ಲಿಯೂ ಮನಸ್ಸನ್ನುಇಡದೆ ಏಕಾಗ್ರಚಿತ್ತರಾಗಿ ಭಜಿಸುತ್ತಾರೆ. ಅವರು ಭಗವಂತನ ಅವತಾರಗಳಲ್ಲಿ ಹೆಚ್ಚಾದ ಪ್ರೀತಿಯನ್ನು ಹೊಂದಿರುವುದರಿಂದ ಅವನ ಅವತಾರಗಳ ಭಜನೆ ಇಲ್ಲದೆ ಮನಸ್ಸಿನ, ಆತ್ಮದ, ಬಾಹ್ಯೇಂದ್ರಿಯಗಳ ಧಾರಣೆಯನ್ನು ಮಾಡಲು ಅಶಕ್ತರಾಗಿರುವರು. ಅವನ ಭಜನೆ ಒಂದನ್ನೇ ಪ್ರಯೋಜನವಾಗಿ ಹೊಂದಿ ಅವನ ಅವತಾರಗಳನ್ನು ಉಪಾಸಿಸುತ್ತಲೇ ಇರುವರು ಮತ್ತು ಆಯಾ ಅವತಾರಗಳಲ್ಲಿ ಭಗವಂತನು ನಡೆಸಿದ ಅದ್ಭುತ ಕಾರ್ಯಗಳನ್ನು ಸ್ತೋತ್ರಮಾಡುವರು. (೧೩) ಇನ್ನೇನು, ಅಂಥಾ ಮಹಾತ್ಮರಾದ ಭಕ್ತರು ಅಧಿಕವಾಗಿ ಭಗವಂತನನ್ನೇ ಪ್ರೀತಿಸುವುದರಿಂದ ತಾವು ಭಕ್ತಿಯುತಕಾರ್ಯಗಳನ್ನು ಮಾಡದಿದ್ದರೆ ತಮ್ಮ ಆತ್ಮಧಾರಣೆಯನ್ನೇ ಮಾಡಲಾರರು. ಆದುದರಿಂದ ಅವರು ವಿರಾಮಕಾಲಗಳಲ್ಲೆಲ್ಲಾ ಅವನ ಅವತಾರಗಳ ಸ್ವರೂಪ, ರೂಪ, ಗುಣ ಮತ್ತು ಅದ್ಭುತ ಕಾರ್ಯಗಳನ್ನು ಕೀರ್ತನೆಮಾಡುವರು ; ಅವನಪಾದಗಳಲ್ಲಿ ಪ್ರಣಾಮ ಮಾಡುವರು ಮತ್ತು ಅವನನ್ನು ಹೊಂದುವದಕ್ಕೋಸ್ಕರ ಪ್ರಯತ್ನ ಪಡುವರು ಅವರು ಭಗವಂತನ ಗುಣಗಳನ್ನು ಪ್ರಕಾಶಪಡಿಸುವಂಥಾ ಅವನ ನಾಮಾವಳಿಗಳನ್ನು ಸ್ಮರಿಸುತ್ತಾ, ಶರೀರವು ರೋಮಾಂಚಿತವಾಗಿ, ಸಂತೋಷಾತಿಶಯದೊಂದಿಗೆ ಗದ್ಗದಸ್ವರದೊಂದಿಗೆ "ನಾರಾಯಣ ! ಕೃಷ್ಣ ! ವಾಸುದೇವ ! ಎಂದು" ಹೇಳುತ್ತಲೇ ಇರುವರು. ಮಿಕ್ಕ ಕಾಲಗಳಲ್ಲೆಲ್ಲಾ, ದೃಢವಾದ

ಸಂಕಲ್ಪ ಅಥವ ಉದ್ದೇಶದಿಂದ ಭಗವಂತನ ಅರ್ಚನೆ ಮತ್ತು ಆರಾಧನೆಗಳನ್ನು ಮಾಡುವದಲ್ಲದೆ ದೇವಸ್ಥಾನದ ಮತ್ತು ನಂದನವನದ ಕೈಂಕರ್ಯಗಳನ್ನೂ ಮಾಡುವರು. ಭಗವಂತನ ಸ್ಮರಣೆಯನ್ನುಂಟುಮಾಡುವ ಸನ್ನಿವೇಶಗಳಲ್ಲೆಲ್ಲಾ ಅತ್ಯಂತ ಭಕ್ತಿಯುತವಾದ ಮನಸ್ಸು, ಬುದ್ಧಿ, ಅಹಂಕಾರದಿಂದ ಕೂಡಿದ ಅಂತಃಕರಣ, ಶಿರಸ್ಸು, ಎರಡು ಕಾಲುಗಳೂ, ಎರಡು ಕೈಗಳೂ ಮೊದಲಾದ ಅಷ್ಟಾಂಗಗಳನ್ನೂ ಧೂಳು, ಬದಿ, ಮಣಲು ಎಂದು ಒಂದನ್ನೂ ನೋಡದೆ ಭೂಮಿಯಲ್ಲಿ ತಗಲುವಹಾಗೆ ದಂಡದ ಹಾಗೆ ಬಿದ್ದು ಪ್ರಣಾಮ ಮಾಡುವರು. ಇನ್ನೇನು ಯಾವಾಗಲೂ ಭಗವಂತನೊಡನೆ ಸೇರಬೇಕೆಂದು ಇಚ್ಛೆಯುಳ್ಳವರಾಗಿ ನಿರಂತರವಾಗಿ ಮನಸ್ಸನ್ನು ಸ್ವಾಧೀನದಲ್ಲಿ ಇಟ್ಟುಕೊಂಡು ಭಗವಂತನ ಸಾನ್ನಿಧ್ಯವನ್ನು ಅನುಭವಿಸುವ ಕಡೆಗಳಲ್ಲೆಲ್ಲಾ ದಾಸ್ಯವೃತ್ತಿಯನ್ನು ಅಂದರೆ ಕೈಂಕರ್ಯವನ್ನು ಮಾಡುತ್ತಾ ಅವನನ್ನು ಉಪಾಸನೆ ಮಾಡುವರು.

### ಇನ್ನು ಕೆಲವು ಮಹಾತ್ಮರು ಭಗವಂತನನ್ನು ಜ್ಞಾನಯಜ್ಞದಿಂದ ಉಪಾಸನೆ ಮಾಡುತ್ತಾರೆ (ಶ್ಲೋಕಗಳು ೧೫, ೧೬, ೧೭, ೧೮, ೧೯)

ಇನ್ನು ಕೆಲವು ಮಹಾತ್ಮರು ಕೀರ್ತನಾದಿಗಳಲ್ಲಿ ಮಾತ್ರ ತೃಪ್ತರಾಗದೆ ಭಗವಂತನನ್ನು "ಜ್ಞಾನಯಜ್ಞ" ದಿಂದಲೂ ಉಪಾಸನೆ ಮಾಡುತ್ತಾರೆ. "ಜ್ಞಾನಯಜ್ಞ" ಎಂದರೇನು? ಈ ಜಗತ್ತು ಅನೇಕ ಪ್ರಕಾರವಾಗಿ ಬೇರೆಬೇರೆ ವಸ್ತುಗಳಾದ ಬೇರೆಬೇರೆ ರೂಪಗಳಿಂದ ಕೂಡಿದೆ; ಆದಾಗ್ಯೂ ಹೀಗೆ ಜಗತ್ತಿನ ಆಕಾರದಿಂದ ಒಬ್ಬನೇ ಆದ ಭಗವಂತನು ವಿಶ್ವತೋಮುಖವಾಗಿ ಅಂದರೆ ವಿಶ್ವಪ್ರಕಾರವಾಗಿ ನಿಂತಿದ್ದಾನೆ ಎಂಬ ಭಾವನೆಯಿಂದ ವಿಶ್ವರೂಪಿಯಾದ ಭಗವಂತನನ್ನು ಉಪಾಸನೆ ಮಾಡುವುದೇ ಜ್ಞಾನಯಜ್ಞವು. ಒಬ್ಬನೇ ಆದ ಭಗವಂತನು ಹೇಗೆ ವಿಶ್ವರೂಪಿಯಾಗಿರುವನು ಎಂಬುದನ್ನು ತಿಳಿಯಬೇಕು. ಭಗವಾನ್ ವಾಸುದೇವನು ಸೃಷ್ಟಿಗೆ ಮೊದಲು ನಾಮರೂಪ ವಿಭಾಗಕ್ಕೆ ಅನರ್ಹವಾದ, ಅತಿಸೂಕ್ಷ್ಮವಾಗಿರುವ ಚಿದಚಿತ್ತುಗಳನ್ನು ಶರೀರವನ್ನಾಗಿ ಪಡೆದು ಒಬ್ಬನೇ ಆಗಿದ್ದಾನೆ. ಸತ್ಯಸಂಕಲ್ಪನಾದ ವಾಸುದೇವನು ವಿಧವಿಧಗಳಾಗಿ ಬೇರೆಬೇರೆ ನಾಮರೂಪಗಳುಳ್ಳ ಸ್ಥೂಲ ಚಿದಚಿದ್ವಸ್ತುಗಳನ್ನು ಶರೀರವಾಗಿ ಉಳ್ಳವನಾಗಬೇಕೆಂದು ಇಚ್ಛಿಸಿ ಸಂಕಲ್ಪ ಮಾಡುತ್ತಾನೆ. ಆಗ ಸೂಕ್ಷ್ಮಚಿದಚಿದ್ವಿಶಿಷ್ಟನಾಗಿರುವ ಒಬ್ಬನೇ ಆದ ವಾಸುದೇವನೇ ದೇವತೆಗಳೇನು, ಮನುಷ್ಯರೇನು, ಮೃಗಗಳೇನು, ಸ್ಥಾವರಗಳೇನು ಇವೇ ಮೊದಲಾದವುಗಳಿಂದ ಕೂಡಿರುವ ವಿಚಿತ್ರವಾದ ಜಗತ್ತನ್ನು ಶರೀರವಾಗಿ ಹೊಂದಿದವನಾಗಿ, ಸ್ಥೂಲ ಚಿದಚಿದ್ವಿಶಿಷ್ಟನಾದ ಒಬ್ಬನೇ ಭಗವಂತನಾಗಿ ಆಗುತ್ತಾನೆ. ಆದ್ದರಿಂದಲೇ ಭಕ್ತರಾದ ಮಹಾತ್ಮರು ಸಕಲ ವಿಧವಿಧ ಪದಾರ್ಥಗಳೊಂದಿಗೆ ಕೂಡಿರುವ ಈ ಜಗತ್ತನ್ನು ಶರೀರವಾಗಿ ಹೊಂದಿರುವವನು ಒಬ್ಬನೇ ಆದ ಭಗವಂತನೇ ಎಂದು ಭಕ್ತಿಯಿಂದ ಅನುಸಂಧಾನ ಮಾಡುತ್ತಾ ಅವನ ವಿಶ್ವರೂಪ, ವಿಶಿಷ್ಟ ಸ್ವರೂಪವನ್ನು ಜ್ಞಾನಯಜ್ಞದಿಂದ ಉಪಾಸನೆ ಮಾಡುತ್ತಾರೆ. (೧೫). ಹೀಗೆ ಭಗವಂತನೇ ವಿಶ್ವರೂಪ ಶರೀರವನ್ನು ಹೊಂದಿದವನಾಗಿ ವಿಶ್ವತೋಮುಖವಾಗಿ ನಮ್ಮ ಮುಂದೆ ನಿಂತಿದ್ದಾನೆ ಎಂದು ಅನುಸಂಧಾನ ಮಾಡುವ ಪ್ರಕಾರವನ್ನು ಶ್ರೀಕೃಷ್ಣನು ಅರ್ಜುನನಿಗೆ ಈ ರೀತಿ ಹೃದಯಂಗಮವಾಗಿ ವಿವರಿಸಿದ್ದಾನೆ. ಜ್ಯೋತಿಷ್ಟೋಮಾದಿಕ್ರತುವೂ ಭಗವಂತನೇ, ಮಹಾಯಜ್ಞವೂ ಭಗವಂತನೇ! ಪಿತೃಗಣಕ್ಕೆ ತೃಪ್ತಿಯನ್ನುಂಟುಮಾಡುವ ಹವಿಸ್ಸೂ ಭಗವಂತನೇ! ಔಷಧಿ ಸಂಬಂಧವಾದ ದ್ರವೀರೂಪ ಹವಿಸ್ಸೂ ಭಗವಂತನೇ! ಮಂತ್ರವೂ ಭಗವಂತನೇ! ತುಪ್ಪರೂಪವಾದ ಹವಿಸ್ಸೂ ಭಗವಂತನೇ! ಆಹವನೀಯ ಮೊದಲಾದ ಅಗ್ನಿಯೂ ಭಗವಂತನೇ! ಹೋಮ ಮಾಡುವ ವಸ್ತುವೂ ಭಗವಂತನೇ! ಹೀಗೆ ಮಹಾತ್ಮರಾದ ಭಕ್ತರು ಯಜ್ಞ, ಯಜ್ಞಪರಿಕರಣಗಳೂ, ಸಾಧನಗಳೂ ಇವೆಲ್ಲಕ್ಕೂ ಭಗವಂತನೇ ಆತ್ಮವೆಂದೂ, ಇವೆಲ್ಲವೂ ಅವನ ಶರೀರವೆಂದೂ, ಯಜ್ಞಭೋಕ್ತಾ ಅಂದರೆ ಯಜ್ಞದಿಂದ, ತೃಪ್ತನಾಗುವವನೂ ಭಗವಂತನೇ ಎಂದು ತಿಳಿದು ಅವನ ವಿಶ್ವತೋಮುಖ ಅಂದರೆ ವಿಶ್ವಪ್ರಕಾರತ್ವವನ್ನು ಸರ್ವಕಾಲದಲ್ಲೂ ಅನುಸಂಧಾನ ಮಾಡುತ್ತಿರುವರು. (೧೬). ಈ ಜಗತ್ತಿನ ತಂದೆ, ತಾಯಿ, ಧಾತಾ ಮತ್ತು ಪಿತಾಮಹನೂ ಭಗವಂತನೇ ಆಗಿದ್ದಾನೆ! ಅಂದರೇನು, ಸ್ಥಾವರಜಂಗಮಾತ್ಮಕವಾದ ಈ ಜಗತ್ತಿನಲ್ಲಿ ಅಲ್ಲಲ್ಲಿ ಆಯಾ ಸಂದರ್ಭಗಳಲ್ಲಿ ತಂದೆಯಾಗಿಯೂ ತಾಯಿಯಾಗಿಯೂ, ದಾತನಾಗಿಯೂ, ಪಿತಾಮಹನಾಗಿಯೂ ಸಹ ಇರುವವನು ಭಗವಂತನೇ ಆಗಿದ್ದಾನೆ. ಪಿತೃ, ಮಾತಾ, ದಾತಾ ಮತ್ತು ಪಿತಾಮಹಾದಿಗಳಿಗೆಲ್ಲಾ ಭಗವಂತನೇ ಅಂತರಾತ್ಮನಾಗಿ ವಿಶ್ವತೋಮುಖವಾಗಿದ್ದಾನೆ ಎಂದು ಮಹಾತ್ಮರು ಅನುಸಂಧಾನ ಮಾಡುತ್ತಾರೆ. ಇಷ್ಟೇ ಅಲ್ಲ, ವೇದಗಳಿಂದ ಪವಿತ್ರವಾದುದಾಗಿ ಯಾವುದು ತಿಳಿಯಲು ಯೋಗ್ಯವಾಗಿದೆಯೋ ಅದೂ ಭಗವಂತನೆ ಅಂದರೆ ವೇದಗಳು ತಿಳಿಸುವ ಪವಿತ್ರವಾದ ವಸ್ತುವೂ ಭಗವಂತನೇ! ಹೀಗೆ ತಿಳಿಯಲು ಯೋಗ್ಯವಾದುದನ್ನು ತಿಳಿಸತಕ್ಕ ವೇದಕ್ಕೆ ಬೀಜರೂಪವಾದ "ಓಂ ಕಾರವೂ" ಭಗವಂತನೇ! ಋಕ್ ಯಜುಸ್ಸಾಮ ವೇದಗಳೂ ಭಗವಂತನೇ! ಹೀಗೆ ವೇದಗಳೂ, ಅವುಗಳ ಬೀಜವಾದ

(Re-printed from the Mysore Vysya Patrika, May 1961)

ಎಂ. ವಿ. ಪಿ. ಪ್ರೆಸ್, ಮೈಸೂರು.

# ಭಗವದ್ಗೀತಾ ಅಧ್ಯಾಯ ಒಂಭತ್ತು

ಓಂ ಕಾರವೂ, ಅವುಗಳಿಂದ ಪ್ರತಿಪಾದಿತವಾದ ಪವಿತ್ರ ವಸ್ತುವೂ ಎಲ್ಲವೂ ಭಗವಂತನೇ ಎಂದು ತಿಳಿದು ಭಕ್ತರಾದ ಮಹಾತ್ಮರು ಅವನ ವಿಶ್ವತೋಮುಖವನ್ನು ಅನುಸಂಧಾನ ಮಾಡುತ್ತಾರೆ–೧೭ ಜಗತ್ತಿನಲ್ಲಿ ಸರ್ವ್ವರೂ ಅವರವರು ಅಲ್ಲಲ್ಲಿ ಹೊಂದುವ ಗತಿಯು ಅಂದರೆ ಸ್ಥಾನವೂ ಭಗವಂತನೆ! ಸರ್ವರನ್ನೂ ಧರಿಸಿ ಅಭಿವೃದ್ಧಿ ಹೊಂದಿಸುವವನೂ ಭಗವಂತನೆ ! ಆಜೆ ಮಾಡುವವನ್ನೂ ಭಗವಂತನೇ! ಸಾಕ್ಷಿಯಾಗಿ ಸಾಕ್ಷಾತ್ತಾಗಿ ನೋಡುತ್ತಿರುವವನೂ ಭಗವಂತನೇ ! ಅವರವರ ಮನೆ ಮುಂತಾದ ವಾಸ ಸ್ಥಾನವೂ ಭಗವಂತನೇ ! ಇಷ್ಟ ಪ್ರಾಪ್ತಿ ಅನಿಷ್ಟ ನಿವೃತ್ತಿಗಾಗಿ ಆಶ್ರಯಿಸಲು ಯೋಗ್ಯನಾದವನೂ ಭಗವಂತನೇ ! ಹಿತೈಷಿಯೂ ಭಗವಂತನೇ ! ನಾಶರಹಿತವಾದ ಬೀಜವು ಅಂದರೆ ಸಮಸ್ತಕಾರಣಗಳೂ ಭಗವಂತನೇ ! ಹೀಗೆ ತಮಗೆ ಉಂಟಾಗುವ ಸರ್ವ ವಿಧವಾದ ಪ್ರವೃತ್ತಿಗಳಿಗೂ ಭೋಗಾದಿಗಳಿಗೂ ಕಾರಣವಾಗಿರುವ ಸಮಸ್ತ ವಸ್ತುಗಳೂ ಭಗವಂತನೇ ಎಂದು ಭಕ್ತರಾದ ಮಹಾತ್ಮರು ಅವನನ್ನು ಅನುಸಂಧಾನ ಮಾಡುತ್ತಾರೆ. (೧೮) ಅಗ್ನಿ ಸೂರ್ಯರ ರೂಪದಲ್ಲಿ ತಾಪವನ್ನುಂಟು ಮಾಡುವವನು ಭಗವಂತನೇ ! ಗ್ರೀಷ್ಮಾದಿಋತುಗಳಲ್ಲಿ ಮಳೆಯನ್ನು ತಡೆಯುವವನೂ ಮತ್ತು ಹಾಗೆಯೇ ವರ್ಷ ಋತುಗಳಲ್ಲಿ ಮಳೆಯನ್ನು ಉಂಟು ಮಾಡಿಸುರಿಸುವವನೂ ಭಗವಂತನೇ ! ಅಮೃತದ ಹಾಗೆ ಮೃತ್ಯುವೂ ಕೂಡ ಭಗವಂತನೇ ! ಅಂದರೆ ಲೋಕವು ಯಾವುದರಿಂದ ಜೀವಿಸುತ್ತದೆಯೋ ಮತ್ತು ಯಾವುದರಿಂದ ಸಾಯುತ್ತದೆಯೋ ಅವೆರಡೂ ಭಗವಂತನೆ! ಅಂದರೆ ಲೋಕವು ಜೀವಿಸಿರುವುದೂ ಭಗವಂತನಿಂದಲೇ ಮತ್ತು ಸಾಯುವುದೂ ಭಗವಂತನಿಂದಲೇ. ಹೆಚ್ಚಾಗಿ ವಿವರಿಸುವುದೇನು ?— ಒಟ್ಟಿನಲ್ಲಿ ಜಗತ್ತಿನಲ್ಲಿರುವ ಸತ್ ಮತ್ತು ಅಸತ್ ವಸ್ತುಗಳೆಲ್ಲಾ ಭಗವಂತನೇ ಆಗಿವೆ. ಅಂದರೆ ಈಗ ವರ್ತಮಾನ ಕಾಲದಲ್ಲಿ ಯಾವುದು ಯಾವುದು ಇದೆಯೋ, ಯಾವುದು ಯಾವುದು ಈಗ ಇಲ್ಲದೆ ಹಿಂದೆ ಇದ್ದಿತೋ ಮತ್ತು ಮುಂದೆ ಇರುವುದೋ ಈ ಎಲ್ಲಾ ಅವಸ್ಥೆಗಳಲ್ಲಿ ಇರುವ ಸಮಸ್ತ ಚಿದಚಿದ್ವಸ್ತುಗಳನ್ನೂ ಭಗವಂತನು ಶರೀರವಾಗಿ ಹೊಂದಿರುವುದರಿಂದ ಆಯಾ ಪ್ರಕಾರಗಳಲ್ಲಿ ~~ತಾತ್ಪರ್ಯವೇನು~~ ? ಜಗತ್ತು ಬಹು ವಿಧವಾಗಿ ಬೇರೆ
ಅವನೇ ಇರುವನು.
ಬೇರೆಯಾಗಿ ವಿಭಕ್ತಗಳಾದ ನಾಮರೂಪಗಳನ್ನು ಪಡೆದಿರುವ ಪದಾರ್ಥಗಳಿಂದ ಕೂಡಿದ್ದಾಗ್ಯೂ, ಅದು ಮತ್ತು ಅವು ಭಗವಂತನ ಶರೀರವಾಗಿರುವುದರಿಂದ. ಜಗತ್ತನ್ನೂ, ಆಯಾ ಪದಾರ್ಥಗಳನ್ನೂ, "ಭಗವಂತನೇ ನಮ್ಮ ಎದುರಿಗೆ ನಿಂತಿದ್ದಾನೆ" ಎಂಬ ಐಕ್ಯಜ್ಞಾನದಿಂದ ಯಾರು ಯಾವಾಗಲೂ ಅನುಸಂಧಾನ ಮಾಡುತ್ತಲೇ ಇರುವರೋ ಅವರೇ ನಿಜವಾಗಿ "ಜ್ಞಾನಯಜ್ಞ" ವನ್ನು ಅನುಷ್ಠಿಸುತ್ತಿರುವ ಭಕ್ತರಾದ ಮಹಾತ್ಮರು.

## ದೇವತೆಗಳ ಪೂಜೆಗಳಿಗಿಂತ ಭಗವಂತನಲ್ಲಿ ಭಕ್ತಿಯಿಂದ ಮಾಡುವ ಉಪಾಸನೆಯು ಶ್ರೇಷ್ಠವು. (ಶ್ಲೋಕಗಳು ೨೦, ೨೧, ೨೨, ೨೩, ೨೪ ಮತ್ತು ೨೫)

ಇಲ್ಲಿಯವರೆಗೆ ಶ್ರೀಕೃಷ್ಣನು ಅರ್ಜುನನಿಗೆ "ಜ್ಞಾನಯಜ್ಞ" ವನ್ನು ಆಚರಿಸುವ ಭಗವದನುಭವ ಒಂದನ್ನೇ ಪಡೆಯಬೇಕೆಂದು ಆಶಿಪಡುವ ಜ್ಞಾನಿಗಳ ಸ್ವಭಾವ ಮತ್ತು ಸಾಧನೆಗಳನ್ನು ತಿಳಿಸಿದನು. ಇನ್ನು ಈಗ ಈ ಜ್ಞಾನಿಗಳು ಅನ್ಯದೇವತೆಗಳನ್ನು ಉಪಾಸನೆ ಮಾಡುವ ಭಕ್ತರಿಗಿಂತ ಅಧಿಕಶ್ರೇಷ್ಠರು ಎಂಬುದನ್ನು ತೋರಿಸುವುದಕ್ಕಾಗಿ ಇಂಥಾ ಜ್ಞಾನಿಗಳಿಗೂ ಮತ್ತು ದೇವತೋಪಾಸಕರಿಗೂ ಇರುವ ವ್ಯತ್ಯಾಸಗಳನ್ನು ವಿಷದವಾಗಿ ವರ್ಣಿಸುತ್ತಾನೆ. ಋಕ್, ಯಜುಸ್ಸಾಮ ಎಂಬ ಮೂರು ವೇದಗಳಲ್ಲಿ ಮಂತ್ರ, ಬ್ರಾಹ್ಮಣ ಮತ್ತು ಉಪನಿಷತ್ತು ಎಂದು ಮೂರು ಭಾಗಗಳಿವೆ, ಇವುಗಳಲ್ಲಿ ಮಂತ್ರ ಮತ್ತು ಬ್ರಾಹ್ಮಣಗಳನ್ನು ಮಾತ್ರ ಚೆನ್ನಾಗಿ ವ್ಯಾಸಂಗಮಾಡಿ, ಅವುಗಳಲ್ಲಿರುವ ವಿಷಯುಗಳನ್ನು ಕೂಲಂಕಷವಾಗಿ ತಿಳಿದಿರುವವರನ್ನು "ತ್ರೈವಿದ್ಯರುಗಳು" ಎಂದು ಕರೆದಿದ್ದಾರೆ. ಆದರೆ ಉಪನಿಷತ್ತುಗಳನ್ನು ವ್ಯಾಸಂಗ ಮಾಡಿ, ಅವುಗಳಲ್ಲಿರುವ ವಿಷಯುಗಳನ್ನು ಕೂಲಂಕಷವಾಗಿ, ತಿಳಿದಿರುವವರನ್ನು " ವೇದಾಂತ ನಿಷ್ಠರು " ಎಂದು ಕರೆದಿದ್ದಾರೆ. ವೇದಾಂತನಿಷ್ಠರು ಮಹಾತ್ಮರು ; ಏಕೆಂದರೆ ಅವರು ಅಖಿಲ ವೇದವೇದ್ಯನಾದ ಭಗವಂತನ ಸ್ವರೂಪವನ್ನು ತಿಳಿದು, ಅವನಲ್ಲಿ ಅತ್ಯಧಿಕವಾಗಿ ಭಕ್ತಿಯನ್ನು ಹೃದಯದಲ್ಲಿ ಬೆಳೆಸಿ, ಅವನೊಬ್ಬನನ್ನೇ ಪ್ರಾಪ್ಯನನ್ನಾಗಿ ಹೊಂದಿ, ಸದಾಕಾಲದಲ್ಲೂ ಅವನನ್ನು ಕೀರ್ತನಾದಿಗಳಿಂದಲೂ

ಮತ್ತು ಜ್ಞಾನ ಯಜ್ಞದಿಂದಲೂ ಉಪಾಸನೆ ಮಾಡುತ್ತಾರೆ. ಆದರೆ ತ್ರೈವಿದ್ಯರು ಮಾತ್ರ ಮಂತ್ರ ಮತ್ತು ಬ್ರಾಹ್ಮಣಗಳಲ್ಲಿ ಮಾತ್ರ, ಸ್ತೋತ್ರಮಾಡಲ್ಪಟ್ಟ, ಕೇವಲ ಇಂದ್ರಾದಿ ದೇವತೆಗಳನ್ನು ನಂಬಿ, ಸ್ತೋತ್ರಮಾಡಿ, ಅವರ ಪೂಜಾರೂಪವಾದ ಯಾಗಗಳನ್ನು ಮಾಡುತ್ತಾ, ಆ ಯಾಗ ಶೇಷವಾದ "ಸೋಮ" ಎಂಬ ರಸವನ್ನು ಕುಡಿಯುವರು. ಈ ಪುಣ್ಯ ಕರ್ಮಗಳಿಂದಲೂ ಮತ್ತು ಸ್ವರ್ಗವನ್ನು ಪ್ರಾರ್ಥಿಸುವುದರಿಂದಲೂ ಅವರು ಸ್ವರ್ಗಾನುಭವಕ್ಕೆ ವಿರೋಧವಾದ ಸಕಲ ಪಾಪಗಳನ್ನು ತೊಲಗಿಸಿಕೊಂಡು ಸ್ವರ್ಗವನ್ನು ಸೇರಿ ಅಲ್ಲಿ ಸುಖಾನುಭವಗಳನ್ನು ಪಡೆಯುತ್ತಾರೆ ; ಏಕೆಂದರೆ ಅವರು ಕೇವಲ ಇಂದ್ರಿಯ ಸುಖಗಳನ್ನು ಮಾತ್ರನೇ ಉದ್ದೇಶಿಸಿ (ನಿಜವಾಗಿ ಭಗವಂತನ ಆರಾಧನ ರೂಪವಾದ) ಯಜ್ಞಗಳನ್ನು ಮಾಡುತ್ತಾ ಇಂದ್ರಾದಿ ದೇವತೆಗಳನ್ನು ಆರಾಧನೆ ಮಾಡುತ್ತಾರೆ. ಅವರು ಪುಣ್ಯ ರೂಪವಾದ ಸ್ವರ್ಗಲೋಕವನ್ನು ಹೊಂದಿದ ಮೇಲೆ ಬಹಳಕಾಲ ಅಲ್ಲಿ ವಾಸಮಾಡುತ್ತಾ, ದುಃಖಮಿಶ್ರವಿಲ್ಲದಿರುವ, ವಿಲಕ್ಷಣವಾದ, ದಿವ್ಯವಾದ ಅಂದರೆ ದೇವತೆಗಳು ಅನುಭವಿಸುವ ಭೋಗಗಳನ್ನು ಅನುಭವಿಸುತ್ತಾರೆ. ವಾಸ್ತವವಾಗಿ ಯಜ್ಞಗಳಿಂದ ಅವರು ನಿಜವಾಗಿ ಭಗವಂತನನ್ನು ಪೂಜಿಸುತ್ತಿದ್ದಾಗ್ಯೂ, ಈ ಗುಟ್ಟನ್ನು ತಿಳಿಯದೆ ಅವರು ಸ್ವರ್ಗ ಪ್ರಾಪ್ತಿಯನ್ನು ಮಾತ್ರ ಅಪೇಕ್ಷಿಸಿ ಆ ದೇವತೆಗಳನ್ನು ಶ್ರದ್ಧೆಯಿಂದ ಪೂಜಿಸುತ್ತಾರೆ. (೨೦) ಆದರೇನು, ಈ ತ್ರೈವಿದ್ಯರು ಸ್ವರ್ಗದಲ್ಲಿ ಅನುಭವಿಸುವ ಭೋಗವು ಕ್ಷಣಿಕವಾದುದು ; ಏಕೆಂದರೆ ಅವರು ವಿಶಾಲವಾದ ಸ್ವರ್ಗಲೋಕಗಳನ್ನು ಅನುಭವಿಸುವುದಕ್ಕೆ ಕಾರಣಗಳಾದ ಪುಣ್ಯಗಳು ಕ್ಷಯಿಸುವವರೆಗೆ ಅಥವ ನಾಶವಾಗುವವರೆಗೆ ಮಾತ್ರ ಅವರು ಆ ಭೋಗಗಳನ್ನು ಅನುಭವಿಸುವರು. ಆದರೆ ಸ್ವರ್ಗಾನುಭವಕ್ಕೆ ಕಾರಣವಾದ ಪುಣ್ಯಗಳು ತೀರಿಹೋದ ಮೇಲೆ, ಅವರು ಪುನಃ ಈ ಮನುಷ್ಯ ಲೋಕದಲ್ಲಿ ಹುಟ್ಟುತ್ತಾರೆ ; ಹೀಗೆ ಇವರುಗಳು ಉಪನಿಷತ್ತುಗಳ ಅಥವ ವೇದಾಂತದ ಜ್ಞಾನವನ್ನು ಪಡೆಯದೆ ಇರುವುದರಿಂದ ಮತ್ತು ವೇದಗಳ ಕೇವಲ ಮಂತ್ರ ಬ್ರಾಹ್ಮಣಗಳಲ್ಲಿ ಹೇಳಿರುವ ಧರ್ಮಗಳನ್ನು ಮಾತ್ರ ಅನುಷ್ಠಿಸುವುದರಿಂದ ಸ್ವರ್ಗಾದಿಲೋಕಗಳಲ್ಲಿ ಅಲ್ಪ ಫಲಗಳನ್ನು ಅಂದರೆ ಭೋಗಗಳನ್ನು ಅನುಭವಿಸಿ ಪುನಃ ಮನುಷ್ಯ ಲೋಕಕ್ಕೆ ಹಿಂದಿರುಗುವರು. ಆದುದರಿಂದ "ಕಾಮ ಕಾಮಿಗಳು" ಅಂದರೆ ಸ್ವರ್ಗವೇ ಮೊದಲಾದ ಉಪಭೋಗಗಳಲ್ಲಿ ಆಶೆಯುಳ್ಳವರು ಕೆಲವು ಕಾಲ ಸ್ವರ್ಗಲೋಕವನ್ನು ಹೊಂದಿ ದಿವ್ಯ ಭೋಗಗಳನ್ನು ಅನುಭವಿಸುವುದು, ಪುನಃ ಭೂಲೋಕದಲ್ಲಿ ಹುಟ್ಟಿ ಸುಖದುಃಖಗಳನ್ನು ಅನುಭವಿಸುವುದು, ಪುನಃ ಸತ್ತಮೇಲೆ ಸ್ವರ್ಗಲೋಕಕ್ಕೆ ಹೋಗುವುದು, ಪುನಃ ಭೂಲೋಕದಲ್ಲಿ ಹುಟ್ಟುವುದು ಹೀಗೆ ಸಾಯುವಿಕೆ, ಸ್ವರ್ಗಲೋಕಾನುಭವ, ಭೂಲೋಕದಲ್ಲಿ ಹುಟ್ಟುವಿಕೆ ಎಂಬ ಚಕ್ರಾಕಾರಕಾದ ಅಲ್ಪ ಜೀವನವನ್ನು ನಡೆಸುತ್ತಲೇ ಇರುವರು (೨೧).

ಉಪನಿಷತ್ತುಗಳನ್ನು ವ್ಯಾಸಂಗ ಮಾಡಿ ವೇದಾಂತ ಜ್ಞಾನವನ್ನು ಪಡೆದಿರುವ ಮಹಾತ್ಮರ ಜೀವನದ ರೀತಿಯೇ ಬೇರೆ. ಅವರುಗಳು ಮನುಷ್ಯ ಲೋಕದಲ್ಲಿ ಸುಖಗಳನ್ನು ಅನುಭವಿಸುವುದಕ್ಕಾಗಿಯೂ ಮತ್ತು ಕಾಲವಾದ ಮೇಲೆ ಸ್ವರ್ಗದಲ್ಲಿ ಭೋಗಗಳನ್ನು ಅನುಭವಿಸುವುದಕ್ಕಾಗಿಯೂ ದೇವತೆಗಳ ಪೂಜಾರೂಪವಾದ ಯಜ್ಞಯಾಗಾದಿಗಳನ್ನು ಆಚರಿಸುವುದಿಲ್ಲ. ಅದಕ್ಕೆ ಬದಲಾಗಿ ಶಾಶ್ವತಾನಂದವನ್ನು ಪಡೆಯುವುದಕ್ಕಾಗಿ ಅತ್ಯಂತ ಶ್ರೇಷ್ಠವಾದ ಭಗವಂತನ ಧ್ಯಾನವನ್ನು ಮಾಡುತ್ತಾ ಸಂತೋಷದಿಂದ ಕಾಲ ಕಳೆಯುವರು. ಅವರು ಸರ್ವದಾ ಭಗವಂತನ ಚಿಂತನೆಯನ್ನು ಮಾಡುತ್ತಿರುವುದರಿಂದ ಇಲ್ಲಿಯೇ ನಿರತಿಶಯವಾದ ಸಾತ್ವಿಕ ಆನಂದವನ್ನು ಅನುಭವಿಸುವರು ಮತ್ತು ಪುನಃ ಈ ಲೋಕದಲ್ಲಿ ಹುಟ್ಟುವ ಭಯವನ್ನು ಪಡೆದಿರುವುದಿಲ್ಲ. ಇಂಥಾ ಮಹಾತ್ಮರು ಯಾವುದೊಂದು ಅರ್ಥ, ಕಾಮ ಮತ್ತು ಧರ್ಮ ಪುರುಷಾರ್ಥವನ್ನು ಸ್ವಲ್ಪವೂ ಬಯಸದೆ, ಭಗವಂತನನ್ನು ಚಿಂತನೆ ಮಾಡದೆ ಹೋದರೆ ತಮ್ಮ ಆತ್ಮವನ್ನೇ ಧರಿಸಲಾರದವರಾಗಿ, ಎಲ್ಲಾ ಕಾಲಗಳಲ್ಲಿಯೂ ಸಮಸ್ತ ಕಲ್ಯಾಣ ಗುಣ ಸ್ವರೂಪನಾಗಿ, ಸಕಲ ಐಶ್ವರ್ಯ ಸಂಪನ್ನನಾಗಿ ಇರುವಂಥಾ ಭಗವಂತನನ್ನು ಹಲವು ಬಗೆಯಲ್ಲಿ (ಅಂದರೆ ಕೀರ್ತನೆ, ಭಜನೆ, ಸೇವೆಗಳಲ್ಲಿ) ಉಪಾಸನೆ ಮಾಡುತ್ತಾರೆ ಮತ್ತು ಅಡಿಗಡಿಗೆ ಕ್ಲಿಪ್ತ ಕಾಲಗಳಲ್ಲಿ ಅವನನ್ನು ಧ್ಯಾನ ಮಾಡುತ್ತಾರೆ. ಹೀಗೆ ಭಗವಂತನೊಂದಿಗೆ ನಿತ್ಯಯೋಗವು ಅಂದರೆ ನಿತ್ಯವಾಗಿ ಸೇರಿರುವ ನೆಲೆಯು ತಮಗೆ ಬೇಕೆಂದು ಹೆಚ್ಚಾಗಿ ಅಪೇಕ್ಷಿಸುವ ಜ್ಞಾನಿಗಳ ಯೋಗ ಕ್ಷೇಮವನ್ನು ಭಗವಂತನೇ ವಹಿಸುವನು. ಯೋಗವೆಂದರೆ ಭಗವಂತನ ಪ್ರಾಪ್ತಿರೂಪವಾದ ಅವನ ಸಾಕ್ಷಾತ್ಕಾರವು; ಕ್ಷೇಮವೆಂದರೆ ಭಕ್ತನಿಗೆ ಪುನರ್ಜನ್ಮವಿಲ್ಲದ ಹಾಗೆ ನೋಡಿಕ್ಕೊಳ್ಳುವುದು. ಭಗವಂತನು ಜ್ಞಾನಿಗಳಾದ ಮತ್ತು ಮಹಾತ್ಮರಾದ ತನ್ನ ಭಕ್ತರಿಗೆ ಪುನರ್ಜನ್ಮವನ್ನು ಕೊಡುವುದಿಲ್ಲ ಮತ್ತು ಈ ಜನ್ಮದಲ್ಲಿಯೇ ಅವರ ಭಕ್ತಿಯೋಗವು ಅಪಾಯ ರಹಿತವಾಗಿ ಭಗವಂತನ ಸಾಕ್ಷಾತ್ಕಾರ ಪರ್ಯಂತ ವೃದ್ಧಿ ಹೊಂದುವ ಭಾರವನ್ನೂ ವಹಿಸಿಕ್ಕೊಳ್ಳುತ್ತಾನೆ. (೨೨)

ಹಾಗಾದರೆ ಅನ್ಯದೇವತೆಗಳನ್ನು ಯಜ್ಞಯಾಗಾದಿಗಳಿಂದ ಪೂಜಿಸುವವರಿಗೆ ಮೋಕ್ಷವನ್ನು ಪಡೆಯಲು ಅವಕಾಶವೇ ಇಲ್ಲವೆ ? ಅವಕಾಶವುಂಟು ; ಏಕೆಂದರೆ ಕೇವಲ ತ್ರಿವಿದ್ಯಾನಿಷ್ಠರಾದ ಇಂದ್ರಾದಿ ದೇವತಾಭಕ್ತರೂಕೂಡ ಅವಿಧಿಪೂರ್ವಕವಾಗಿ ಅಂದರೆ ಅಡ್ಡದಾರಿಯಲ್ಲಿ ಭಗವಂತನನ್ನೇ ಪೂಜಿಸುತ್ತಾರೆ. ಅವರು ಶ್ರದ್ಧೆಯಿಂದಕೂಡಿದವರಾಗಿ ಇಂದ್ರಾದಿದೇವತೆಗಳನ್ನು

ಪೂಜಿಸುವಾಗ ಸಮಸ್ತವೂ ಭಗವಂತನ ಶರೀರವಾಗಿರುವುದರಿಂದಲೂ, ಭಗವಂತನೇ ಸರ್ವಕ್ಕೂ ಆತ್ಮನಾಗಿರುವುದರಿಂದಲೂ, ಮತ್ತು ಇಂದ್ರಾದಿಶಬ್ದಗಳಿಂದ ಭಗವಂತನೇ ಹೇಳಲ್ಪಡುವುದರಿಂದಲೂ ವಾಸ್ತವವಾಗಿ ಅವರೂಕೂಡ ಭಗವಂತನನ್ನೇ ಅವಿಧಿಪೂರ್ವಕವಾಗಿ ಅಂದರೆ ದಾರಿತಪ್ಪಿ ಪೂಜಿಸುತ್ತಾರೆ. ಇನ್ನು ಅವಿಧಿಪೂರ್ವಕವಾಗಿ ಭಗವಂತನನ್ನು ಪೂಜಿಸುವುದು ಹೇಗೆ ಎಂಬುದನ್ನು ತಿಳಿಯಬೇಕು. ಮನುಷ್ಯರು ಇಂದ್ರಾದಿದೇವತೆಗಳನ್ನು ಪೂಜಿಸುವಾಗ ಅವರುಗಳನ್ನು ಎರಡುಭಾವನೆಗಳಿಂದ ಪೂಜಿಸಬಹುದು. (1) ದೇವತೆಗಳೂ ನಮ್ಮಹಾಗೆ ವೈಯಕ್ತಿಕ ವ್ಯಕ್ತಿಗಳು, ಆದರೆ ಅವರು ದಿವ್ಯಶಕ್ತಿಗಳಿಂದ ಕೂಡಿದವರಾಗಿ ಸ್ವರ್ಗಾದಿಲೌಕಿಕ ಫಲಗಳನ್ನು ನಮಗೆ ಕೊಡುತ್ತಾರೆ ಎಂಬ ಭಾವನೆಯಿಂದ ಅವರನ್ನು ಪೂಜಿಸುವುದು ಮೊದಲನೆಯದು. (2) ದೇವತೆಗಳಲ್ಲಿ ಭಗವಂತನು ಅಂತರ್ಯಾಮಿಯಾಗಿ ಇರುವನೆಂದೂ, ದೇವತೆಗಳು ಅವನಶರೀರವೆಂದೂ, ಆದುದರಿಂದ ದೇವತೆಗಳನ್ನು ಆರಾಧಿಸುವವರು ನಿಜವಾಗಿ ಅಂತರಾತ್ಮನಾದ ಭಗವಂತನನ್ನೇ ಆರಾಧಿಸುತ್ತಾರೆಂದೂ ಭಾವಿಸುವುದು ಎರಡನೆಯದು. ಈ ಎರಡನೆಯ ಭಾವನೆಯಪ್ರಕಾರ ಮನುಷ್ಯರು ದೇವತೆಗಳನ್ನು ಪ್ರೀತಿಯಿಂದ ಭಜಿಸುವವರಾಗಿ, ಶ್ರದ್ಧೆಯುಳ್ಳವರಾಗಿ ಯಜ್ಞಾನುಷ್ಠಾನಗಳನ್ನು ಮಾಡಿದಾಗ್ಯೂಕೂಡ ಅವರು ವೇದದ ಮಂತ್ರ–ಬ್ರಾಹ್ಮಣಗಳಲ್ಲಿ ವಿಧಿಸಿರುವಪ್ರಕಾರ ಕೇವಲ ವೈಯಕ್ತಿಕ ದೇವತೆಗಳನ್ನು ಮಾತ್ರ ಪೂಜಿಸುವುದಿಲ್ಲ; ಆದರೆ ವೇದದ ಉಪನಿಷತ್ತುಗಳಲ್ಲಿರುವ ಉಪದೇಶಗಳಪ್ರಕಾರ ನಿಜವಾಗಿ ದೇವತೆಗಳಲ್ಲೆಲ್ಲಾ ಅಂತರ್ಯಾಮಿಯಾಗಿರುವ ಒಬ್ಬನೇ ಆದ ಭಗವಂತನನ್ನೇ ಪೂಜಿಸುತ್ತಾರೆ. ಹೀಗೆ ತಿಳಿದು ಯಜ್ಞಯಾಗಾದಿಗಳನ್ನು ಆಚರಿಸಿದರೆ, ಈ ಯಜ್ಞಯಾಗಾದಿ ಪೂಜೆಗಳೇ ಕ್ರಮೇಣ ಭಕ್ತರಿಗೆ ಮೋಕ್ಷವನ್ನು ಸಾಧಿಸಿಕೊಡುತ್ತವೆ. (೨೩) ಸಮಸ್ತ ಯಜ್ಞಗಳಿಗೆ ಪ್ರಭುವೂ ಅಂದರೆ ಫಲವನ್ನು ಕೊಡುವವನೂ ಮತ್ತು ಭೋಕ್ತೃವೂ ಅಂದರೆ ಯಜ್ಞಗಳನ್ನು ಭೋಗಿಸುವವನೂ ಅಥವ ಯಜ್ಞಗಳಿಂದ ಆರಾಧಿಸಲ್ಪಡುವವನೂ ಭಗವಂತನೇ ಆಗಿರುವನು. ಆದುದರಿಂದ ವೇದಾಂತಿಗಳು " ಕರ್ಮಗಳೆಲ್ಲವೂ ಇಂದ್ರಾದಿದೇವತೆಗಳಿಗೆ ಅಂತರಾತ್ಮನಾದ ಪರಮಪುರುಷನಿಗೆ ಆರಾಧನಗಳು ಮತ್ತು ಆರಾಧಿಸಲ್ಪಡತಕ್ಕವನೂ ಭಗವಂತನೇ " ಎಂದು ತಿಳಿದು ಯಜ್ಞಯಾಗಾದಿ ಕರ್ಮಗಳನ್ನು ಮಾಡುತ್ತಾ ಶಾಶ್ವತಾನಂದವನ್ನು ಉಂಟುಮಾಡುವ ಶ್ರೇಷ್ಠವಾದ ಮೋಕ್ಷಫಲವನ್ನೇ ಹೊಂದುತ್ತಾರೆ. ಮಿಕ್ಕವರಾದ ಕಾಮ ಕಾಮಿಗಳು ಅಂದರೆ ಅರ್ಥ, ಕಾಮ, ಧರ್ಮ ಫಲಗಳನ್ನು ಅಪೇಕ್ಷಿಸುವವರು " ಕರ್ಮಗಳೆಲ್ಲವೂ ವೈಯಕ್ತಿಕ ದೇವತಾದಿಗಳಿಗೆ ಆರಾಧನೆಗಳು ಮತ್ತು ಆರಾಧಿಸಲ್ಪಡತಕ್ಕವರು ಆ ಬೇರೆ ಬೇರೆ ವ್ಯಕ್ತಿಗಳೇ " ಎಂದು ತಿಳಿದು ಕರ್ಮಗಳನ್ನು ಮಾಡುತ್ತಾ ಮಿತವಾದ ಫಲಗಳನ್ನು ಹೊಂದಿ, ಅವು ನಶ್ವರವಾದುದರಿಂದ ಪುನಃ ಜಾರಿಹೋಗುವ ಅಂದರೆ ಮನುಷ್ಯಲೋಕದಲ್ಲಿ ಹುಟ್ಟುವ ಸ್ವಭಾವವನ್ನು ಪಡೆಯುತ್ತಾರೆ. ಅವರು ದೇವತೆಗಳಲ್ಲಿಯೂ ಭಗವಂತನು ಅಂತರ್ಯಾಮಿಯಾಗಿರುವನು ಮತ್ತು ದೇವತೆಗಳ ಆರಾಧನೆಗಳು ಅವರನ್ನು ಶರೀರವಾಗಿ ಪಡೆದಿರುವ ಪರಮಾತ್ಮನ ಆರಾಧನೆಗಳು ಎಂಬ ಈತತ್ವವನ್ನು ತಿಳಿದು ನಂಬದೆಇರುವುದರಿಂದ ಸ್ವರ್ಗಾನುಭವದಿಂದ ಜಾರಿ ಪುನಃ ಭೂಲೋಕದಲ್ಲಿ ಹುಟ್ಟುತ್ತಾ ತಿರಗಿಯೂ ತಿರಗಿಯೂ ಜನ್ಮಗಳನ್ನು ಹೊಂದುತ್ತಲೇ ಇರುವವರು. (೨೪) ಅಹಾ ! ಇದೇನು ಆಶ್ಚರ್ಯ ! ಎಲ್ಲರೂ ಒಂದೇಕರ್ಮವನ್ನು ಮಾಡುತ್ತಿದ್ದಾಗ್ಯೂ ಅವರವರ ಬರಿಯಸಂಕಲ್ಪಬೇಧದಿಂದ ( ಅಂದರೆ ಅದನ್ನು " ಯಾರನ್ನು ಉದ್ದೇಶಿಸಿ ಮಾಡುತ್ತೇವೆ " ಎಂಬ ವಿಚಾರದಲ್ಲಿ ಅಭಿಪ್ರಾಯಗಳು ಬೇಧದಿಂದ ) ಕೆಲವರು ಅಲ್ಪಫಲಗಳನ್ನು ಹೊಂದಿ ಜಾರಿಹೋಗುವರು ; ಇನ್ನುಕೆಲವರು ಶಾಶ್ವತಾನಂದಫಲವಾದ ಮೋಕ್ಷವನ್ನು ಹೊಂದಿ ಪುನರಾವರ್ತಿ ಇಲ್ಲದೆ ಇರುತ್ತಾರೆ. ಹೇಗೆಂದರೆ, ಯಜ್ಞವೇ ಮುಂತಾದಕರ್ಮಗಳನ್ನು ಇಂದ್ರಾದಿದೇವತೆಗಳನ್ನು ಕುರಿತು ಮಾಡುತ್ತೇವೆ ಎಂಬ ಸಂಕಲ್ಪದೊಂದಿಗೆ ಮಾಡುವವರು ಇಂದ್ರಾದಿಗಳನ್ನ ಹೊಂದುತ್ತಾರೆ ; ಪಿತೃಗಳನ್ನು ಕುರಿತು ಮಾಡುವವರು ಪಿತೃಗಳನ್ನು ಹೊಂದುತ್ತಾರೆ ; ಯಕ್ಷ ರಾಕ್ಷಸ ಪಿಶಾಚಿಗಳನ್ನು ಕುರಿತು ಮಾಡುವವರು ; ಆ ಭೂತಗಳನ್ನು ಹೊಂದುತ್ತಾರೆ. ಯಾರು " ದೇವ, ಪಿತೃ, ಭೂತಗಳಿಗೆ ಅಂತರಾತ್ಮನಾಗಿರುವಂಥಾ ಪರಮಾತ್ಮನನ್ನೇ ಆರಾಧಿಸುತ್ತೇವೆ " ಎಂಬ ದೃಢಸಂಕಲ್ಪದೊಂದಿಗೆ ಭಗವಂತನನ್ನು ಆರಾಧಿಸುತ್ತಾರೆಯೋ ಅವರು ಭಗವಂತನನ್ನೇ ಉದ್ದೇಶಿಸಿ ಪೂಜಿಸುವವರಾಗಿ ಭಗವಂತನನ್ನೇ ಹೊಂದುತ್ತಾರೆ. ಅಂದರೆ ದೇವಾದಿಗಳನ್ನು ಪೂಜಿಸುವವರು ಅವರನ್ನು ಹೊಂದಿ ಅವರ ಸಂಗಡ ಸಂತೋಷವನ್ನು ಅನುಭವಿಸಿ ಅವರು ನಾಶಹೊಂದುವಾಗ ತಾವೂ ನಾಶಹೊಂದುತ್ತಾರೆ ; ಆದರೆ ಭಗವಂತನನ್ನು ಪೂಜಿಸುವವರೋ ಅಂದರೆ ಆದ್ಯಂತವಿಲ್ಲದೆ ಸರ್ವಜ್ಞನಾಗಿ, ಸತ್ಯಸಂಕಲ್ಪನಾಗಿ, ಕೊನೆಯಿಲ್ಲದ ಉತ್ಕೃಷ್ಟವಾದ ಅನಂತ ಕಲ್ಯಾಣಗುಣಗಳಿಗೆ ದೊಡ್ಡ ಸಮುದ್ರಪ್ರಾಯನಾಗಿ ಇರುವ ಮತ್ತು ಎಲ್ಲೆ ಇಲ್ಲದ ಅತಿಶಯ ಆನಂದಸ್ವರೂಪನೂ ಆದ ಭಗವಂತನನ್ನೂ ಹೊಂದಿ ತಿರಗಿಯೂ ಹಿಂತಿರುಗದೇ ಅಂದರೆ ಜನ್ಮವಿಲ್ಲದೆ ಇರುತ್ತಾರೆ. (೨೫)

### ಭಕ್ತನು ಸುಲಭವಾಗಿ ಭಗವಂತನ ಕೈಂಕರ್ಯಗಳನ್ನು ಮಾಡಬಹುದು. (ಶ್ಲೋಕಗಳು—೨೬, ೨೭, ೨೮,)

ಅನೇಕ ಮಂದಿ ಮನುಷ್ಯರಲ್ಲಿ ಯಾವನೋ ಒಬ್ಬನು ತಾನು ಭಗವಂತನನ್ನು ಹೊಂದಬೇಕೆಂದು ಆಶೆಪಡುತ್ತಾನೆ ; ಅವರಲ್ಲಿ

ಯಾವನೋ ಒಬ್ಬನು ಅದಕ್ಕಾಗಿ ಭಕ್ತಿಯೋಗ ಅಭ್ಯಾಸವನ್ನು ಕೈಗೊಂಡು ಪ್ರಯತ್ನಿಸುತ್ತಾನೆ; ಮತ್ತು ಹಾಗೆ ಪ್ರಯತ್ನಿಸುವವರಲ್ಲಿ ಯಾವನೋ ಒಬ್ಬನು ಮಾತ್ರ ಭಗವಂತನ ನಿಜಸ್ವರೂಪವನ್ನು ಸಾಕ್ಷಾತ್ಕರಿಸುತ್ತಾನೆ ಎಂದು ಹಿಂದೆ ಉಪದೇಶವಾಯಿತು. ಹಾಗಾದರೆ ಈ ಭಕ್ತಿಯೋಗದ ಅಭ್ಯಾಸಗಳು ಕಷ್ಟವೆ? ಯಾವ ಮಾನವನಾದರೂ ಸರಿಯೆ ಅವನು ಈ ಸಾಧನೆಯನ್ನು ಕೈಗೊಳ್ಳಲು ಸಾಧ್ಯವಿಲ್ಲವೇ? ಎಂಬ ಸಂದೇಹವನ್ನು ಪರಿಹರಿಸಬೇಕಾಗಿದೆ ಯಾವನಿಗೆ ಭಗವಂತನ ಇರುವಿಕೆಯಲ್ಲಿಯೇ ಸಂದೇಹವಿದೆಯೋ ಯಾವನಿಗೆ ಭಗವಂತನಲ್ಲಿ ನಿಜವಾದ ಪ್ರೇಮ ಅಥವ ಭಕ್ತಿ ಇಲ್ಲವೋ ಮತ್ತು ಯಾವನು ಭಕ್ತಿಯೋಗ ಸಾಧನೆಗಳನ್ನು ಆಚರಿಸುವಾಗ ಭಗವಂತನ ಸಹಾಯವನ್ನು ಕೋರುವುದಿಲ್ಲವೋ, ಅಂಥಾವನು ಭಕ್ತಿಯೋಗ ಸಾಧನೆಗಳನ್ನು ಆಚರಿಸಲಾರನು ಮತ್ತು ಅವನು ಹಾಗೆ ಆಚರಿಸಲು ಪ್ರಯತ್ನಿಸಿದರೂ ಸಿದ್ಧಿಯನ್ನು ಹೊಂದುವ ಪರ್ಯಂತ ಶ್ರದ್ಧೆಯಿಂದ ಅವನು ಮುಂದುವರಿಸಲಾರನು. ಆದರೆ ಒಬ್ಬ ಭಕ್ತನು ಭಗವಂತನ ಸಹಾಯವನ್ನು ಕೋರಿ, ಅವನ ಸಾಕ್ಷಾತ್ಕಾರವನ್ನು ಪಡೆಯಲು ಅವನ ಕೈಂಕರ್ಯವನ್ನು ಮಾಡುವುದೇ ತನ್ನ ಪುರುಷಾರ್ಥವೆಂದು ದೃಢವಾಗಿ ನಂಬಿ. ಪರಿಶುದ್ಧಜ್ಞಾನವನ್ನು ಮತ್ತು ಭಗವಂತನಲ್ಲಿ ಆಸಕ್ತಿ, ಪ್ರೀತಿ ಅಥವ ನಿಜವಾದ ಭಕ್ತಿಯನ್ನು ಪಡೆದಿದ್ದರೆ, ಅಂಥಾ ಭಕ್ತನು ಯಾವನಾದರೂ ಕೂಡ ಕಷ್ಟವಿಲ್ಲದೆ ಈಶ್ವರನನ್ನು ತೃಪ್ತಿಪಡಿಸಬಹುದು. ಏಕೆಂದರೆ ಭಗವಂತನು ಭಕ್ತರ ಅಧೀನನಾಗಿ ಇರುವುದರಿಂದ ಅವರು ಸುಲಭದಲ್ಲಿ ಸಂಪಾದಿಸಲು ಸಾಧ್ಯವಾದ ತುಳಸಿಯೇ ಮೊದಲಾದ ಎಲೆಗಳನ್ನೋ, ಪುಷ್ಪವನ್ನೋ, ಫಲವನ್ನೋ, ನೀರನ್ನೋ ತನಗೆ ಅರ್ಪಿಸಿದರೆ ಅವನ್ನು ಸಂತೋಷದಿಂದ ಮತ್ತು ಆದರದಿಂದ ಸ್ವೀಕರಿಸುತ್ತಾನೆ. ಅಂದರೇನು, ಭಗವಂತನು ತಾನು ಸರ್ವೇಶ್ವರನಾಗಿ ಸಕಲ ಲೋಕಗಳನ್ನೂ ಸೃಷ್ಟಿಸಿ, ಕಾಪಾಡಿ, ನಾಶಮಾಡುವ ಆಟವಾಡುವವನಾಗಿದ್ದರೂ, ಅಪೇಕ್ಷಿಸಿದುದನ್ನೆಲ್ಲಾ ಹೊಂದಿದವನಾಗಿದ್ದರೂ, ನೆನಸಿದ್ದೆಲ್ಲವನ್ನೂ ಕಾರ್ಯದಲ್ಲಿ ಮಾಡಲು ಶಕ್ತನಾಗಿದ್ದರೂ ಅಥವ ಮಾಡುವಂಥಾವನಾದರೂ, ಎಲ್ಲೆ ಇಲ್ಲದ ದೊಡ್ಡತನವನ್ನು ಪಡೆದಿದ್ದರೂ, ಎಣಿಸಲು ಅಸಾಧ್ಯವಾದ ಕಲ್ಯಾಣಗುಣಗಳನ್ನು ಪಡೆದವನಾದರೂ, ತನಗೆ ತಾನೇ ಸದೃಶವಿಲ್ಲದ ಆನಂದ ಸ್ವರೂಪದಲ್ಲಿ ಇರುವವನಾದರೂ ತನ್ನ ಭಕ್ತನು ಮಾತ್ರ ಸಾತ್ವಿಕ ಮನಸ್ಸಿನಿಂದ ಮತ್ತು ಪ್ರೀತಿಯಿಂದ ಯಾವುದಾದರೂ ಒಂದು ಪದಾರ್ಥವನ್ನು ಅಥವ ಪದಾರ್ಥಗಳನ್ನು ಸಮರ್ಪಿಸಿದನೇ ಆದರೆ ತಾನೂ ಕೂಡ ಆ ತನ್ನ ಭಕ್ತನಲ್ಲಿ ಅತ್ಯಂತ ಪ್ರೀತಿಮಾಡಿ "ತನಗೆ ಇಲ್ಲಿಯವರೆಗೆ ಸಿಕ್ಕದ ವಸ್ತುವು ಈಗ ಸಿಕ್ಕಿತು" ಎಂದು ಆ ಪದಾರ್ಥಗಳನ್ನು ಪ್ರೀತಿಸಿ ಸಂತೋಷದಿಂದ ಸ್ವೀಕರಿಸುತ್ತಾನೆ. (೨೬).

ಆದುದರಿಂದ ಎಲ್ಲರೂ "ಜ್ಞಾನಿ" ಎಂದು ಕರೆಯಲ್ಪಡುವ ಭಕ್ತರೇ ಆಗಿ, ಶ್ರೇಷ್ಠವಾದ ಭಕ್ತಿಭಾವವನ್ನು ಹೃದಯದಲ್ಲಿ ಬೆಳೆಸಿಕೊಂಡು, ಅತ್ಯಂತ ಪರಿಶುದ್ಧವಾದ ಮತ್ತು ನಮ್ರವಾದ ಮನಸ್ಸಿನಿಂದ ಕೀರ್ತನೆ. ಅರ್ಚನೆ, ಪ್ರಯತ್ನ, ನಮಸ್ಕಾರಾದಿಗಳನ್ನು ಸರ್ವದಾಮಾಡುತ್ತಲೇ ಇರಬೇಕು ಮತ್ತು ಅವರವರ ಲೌಕಿಕ ವೈದಿಕ ನಿತ್ಯನೈಮಿತ್ತಿಕ ಕರ್ಮಗಳೆಲ್ಲವನ್ನೂ ಭಗವಂತನಿಗೆ ಅರ್ಪಿಸಬೇಕು. ಸರ್ವರೂ ತಮ್ಮ ತಮ್ಮ ದೇಹ ಯಾತ್ರೆಯಾಗಿ ಯಾವ ಯಾವ ಲೌಕಿಕ ಕರ್ಮಗಳನ್ನು ಮಾಡುತ್ತಾರೆಯೋ, ದೇಹಧಾರಣೆಗಾಗಿ ಯಾವ ಯಾವುದನ್ನು ಭಕ್ಷಿಸುವರೋ. ಯಾವ ಯಾವ ವೈದಿಕ ಅಂದರೆ ಹೋಮ, ದಾನ, ತಪಸ್ಸೇ ದೂದಲಾದ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡುತ್ತಾರೆಯೋ, ಅವೆಲ್ಲವನ್ನೂ ಭಗವಂತನಿಗೆ ಸಮರ್ಪಿಸಬೇಕು? ಸಮಸ್ತ ಕರ್ಮಗಳನ್ನು ಭಗವಂತನಿಗೆ ಅರ್ಪಿಸುವುದು ಅಂದರೇನು? ಸಮಸ್ತ ಲೌಕಿಕ ಮತ್ತು ವೈದಿಕ ಕರ್ಮಗಳ ಕರ್ತೃತ್ವ, ಭೋಕ್ತೃತ್ವ ಮತ್ತು ಆರಾಧ್ಯತ್ವ ಇವೆಲ್ಲವನ್ನೂ ಭಗವಂತನಿಗೆ ಸಮರ್ಪಿಸುವ ಭಾವನೆಯಿಂದ ಆ ಕರ್ಮಗಳನ್ನು ಮಾಡಬೇಕು. "ಯಜ್ಞ ದಾನಾದಿಗಳಲ್ಲಿ ಆರಾಧ್ಯರಾದ ದೇವತಾದಿಗಳೂ, ಕರ್ಮಗಳನ್ನು ಮಾಡುವ ಮನುಷ್ಯರೂ ಮತ್ತು ಕರ್ಮಗಳ ಫಲಗಳನ್ನು ಅನುಭವಿಸುವವರು ಎಲ್ಲರೂ ಭಗವಂತನಿಗೆ ಸೇರಿದವರು ಮತ್ತು ಭಗವಂತನ ಸಂಕಲ್ಪದಿಂದಲೇ ಉಂಟಾದ ಸ್ವರೂಪ ಸ್ಥಿತಿ ಉಳ್ಳವರು" ಎಂದು ಮನನ ಮಾಡುತ್ತಲೇ ಕರ್ಮಗಳನ್ನು ಮಾಡುತ್ತಿರಬೇಕು. ಭಗವಂತನೇ ಎಲ್ಲರ ಸ್ವಾಮಿಯಾಗಿ ಎಲ್ಲರನ್ನೂ ನಿಯಮಿಸುತ್ತಾನೆ; ಆದುದರಿಂದ ಮಾನವರೂ ಮತ್ತು ದೇವತೆಗಳೂ ನಿಜವಾಗಿ ಅವನ ದಾಸರು ಎಂಬುದನ್ನೂ ಯಾವಾಗಲೂ ಮರೆಯಕೂಡದು. ಈ ಭಾವನೆಯಿಂದ ಕರ್ಮಗಳನ್ನು ಮಾಡಿದರೆ ಆಗ ಕರ್ಮಗಳ ಕರ್ತರೂ ಭೋಗಿಸುವವರೂ ಮತ್ತು ಆರಾಧಕರೂ ಆದ ನಮ್ಮನ್ನು ಆರಾಧಿಸಲ್ಪಡುವ ಸಮಸ್ತ ದೇವತೆಗಳನ್ನು ಮತ್ತು ಆರಾಧನರೂಪವಾದ ಸಮಸ್ತ ಕರ್ಮಗಳನ್ನು ನಾವು ಪರಮಕರ್ತನೂ ಮತ್ತು ಪರಮಸ್ವಾಮಿಯೂ ಆದ ಪರಮೇಶ್ವರನಲ್ಲಿ ಅರ್ಪಿಸಿದಂತೆಯೇ ಆಗುವುದು. (೨೭). ಮೇಲೆ ವಿವರಿಸಿದ ರೀತಿಯಲ್ಲಿ ಭಕ್ತನು ತಾನು ಮಾಡುತ್ತಿರುವ ಮತ್ತು ಮಾಡಬೇಕಾದ ಸಕಲ ಕರ್ಮಗಳಲ್ಲಿ ಕರ್ತೃತ್ವ ಅಭಿಮಾನವನ್ನು ಇಟ್ಟುಕೊಳ್ಳಕೂಡದು; ಅಂದರೆ "ಈ ಕಾರ್ಯಗಳೆಲ್ಲವನ್ನೂ ನಾನು ಮಾಡುತ್ತೇನೆ" ಎಂಬ ಅಹಂಕಾರವನ್ನು ಪಡೆಯಕೂಡದು;

(Re-printed from the Mysore Vysya Patrika, July 1961)

M. V. P. Press, Mysore.

# ಭಗವದ್ಗೀತಾ ಅಧ್ಯಾಯ ಒಂಭತ್ತು

ಮತ್ತು "ಈ ಕರ್ಮಗಳಿಂದ ಉಂಟಾಗಬಹುದಾದ ಫಲಗಳು ನನ್ನದು ಮತ್ತು ಅವು ನನ್ನ ಭೋಗಕ್ಕಾಗಿಯೇ ಉಪಯೋಗಿಸಲ್ಪಡತಕ್ಕವುಗಳೇ ಹೊರತು ಇತರರು ಅವನ್ನು ಬೋಗಿಸಕೂಡದು" ಎಂಬ ಮಮಕಾರವನ್ನೂ ಪಡೆಯಕೂಡದು. ಹೀಗೆ ಭಕ್ತನ ಕತೃತ್ವ, ಭೋಕ್ತೃತ್ವಾದಿ ಅಭಿಮಾನಗಳನ್ನು ತೊರೆದು ಭಗವಂತನಲ್ಲೇ ನೆಟ್ಟಮನಸ್ಸುಳ್ಳವನಾಗಿರುವ ಸನ್ಯಾಸ ಯೋಗವನ್ನು ಸ್ವೀಕರಿಸಬೇಕು. ಹೀಗೆ ಸನ್ಯಾಸ ಯೋಗವನ್ನು ಅವನು ಸ್ವೀಕರಿಸುವುದರಿಂದ ಅವನಿಗೆ ಉಂಟಾಗುವ ಫಲವೇನು ? ಆಗ ಅವನು ಭಗವಂತನ ದಾಸನಾಗುವನು. ಅವನ ಆಜ್ಞೆಗಳನ್ನು ಪ್ರೀತಿಯಿಂದ ನಡೆಸುವ ಶುದ್ಧಮನಸ್ಸಿನ ಜ್ಞಾನವನ್ನು ಪಡೆಯುವನು ಮತ್ತು ಸಮಸ್ತ ಕರ್ಮಗಳನ್ನೂ ಭಗವಂತನ ಆರಾಧನೆ ಯೆಂದು ಅನುಸಂಧಾನ ಮಾಡುತ್ತಾ ಲೌಕಿಕ ವೈದಿಕ ಕರ್ಮಗಳನ್ನು ಮಾಡುತ್ತಾನೆ. ಆಗ ಚಿತ್ತ ಶುದ್ಧಿಯನ್ನು ಪಡೆದವನಾಗಿ ಶುಭ ಅಥವ ಒಳ್ಳೆಯದು ಮತ್ತು ಅಶುಭ ಎಂದರೆ ಕೆಟ್ಟದ್ದು ಎಂಬ ಫಲಗಳನ್ನು ಕೊಡುವ ಮತ್ತು ಈಶ್ವರನನ್ನು ಹೊಂದುವುದಕ್ಕೆ ವಿರೋಧಗಳಾದ ಅನಂತಗಳಾದ ಪ್ರಾಚೀನ ಕರ್ಮಗಳೆಂಬ ಸಮಸ್ತ ಕರ್ಮಬಂಧನಗಳಿಂದ ಬಿಡಲ್ಪಡುವನಾಗುತ್ತಾನೆ ಸಮಸ್ತ ಕರ್ಮಗಳಿಂದ ಬಿಡಲ್ಪಡುವನಾದರೆ ಬರುವ ಕೊನೆಯ ಫಲವೇನು ? ಅಂಥಾ ಮಹಾತ್ಮನಾದ ಭಗವಂತನನ್ನೇ ಕೊನೆಯಲ್ಲಿ ಸಾಕ್ಷಾತ್ಕರಿಸುವನು ; ಏಕೆ ಅವನನ್ನೇ ಹೊಂದಿಯೇ ಹೊಂದುತ್ತಾನೆ. (೨೮)

### ಸರ್ವರಲ್ಲಿಯೂ ಪಕ್ಷಪಾತವಿಲ್ಲದೆ ಸಮಭಾವನೆಯನ್ನು ಪಡೆದಿರುವ ಭಗವಂತನು ಆಶ್ರಿತರೆಲ್ಲರನ್ನೂ ರಕ್ಷಿಸುತ್ತಾನೆ

(ಶ್ಲೋಕಗಳು ೨೯, ೩೦, ೩೧, ೩೨, ೩೩, ೩೪,)

ಈ ಜಗತ್ತಿನಲ್ಲಿ ದೇವತೆಗಳೂ, ಮನುಷ್ಯರೂ, ಪ್ರಾಣಿಗಳೂ ಮತ್ತು ಗಿಡಗಳು ಎಂಬದಾಗಿ ವಿಧವಿಧವಾದ ಜಾತಿ, ಆಕಾರ ಸ್ವಭಾವ ಮತ್ತು ಜ್ಞಾನಗಳಿಂದ ಕೂಡಿದ ಪಾಣಿಗಳಿವೆ ; ಆದರೆ ಭಗವಂತನು ಮಾತ್ರ ಸಮಸ್ತ ಪ್ರಾಣಿಗಳಲ್ಲೂ ಸಮನಾಗಿದ್ದಾನೆ. ಅಂದರೆ ಅವನು ಸಮಸ್ತ ಪ್ರಾಣಿಗಳಲ್ಲಿಯೂ ಸಮ ಭಾವನೆಯನ್ನು ಹೊಂದಿದ್ದಾನೆ. ಆರ್ಜವದಿಂದ ತನ್ನ ಸಹಾಯವನ್ನು ಅಪೇಕ್ಷಿಸುವ ಸಮಸ್ತ ಭೂತಗಳಲ್ಲಿಯೂ ಅವನು ಸಮಭಾವನೆಯನ್ನು ಹೋಂದಿದ್ದಾನೆ. ಒಂದುಪ್ರಾಣಿಯಜಾತಿಯು ಉತ್ಕೃಷ್ಟವಾಗಿದೆ, ಆದರ ಆಕಾರವು ಸುಂದರವಾಗಿದೆ, ಆದರ ಸ್ವಭಾವವು ಉತ್ತಮವಾಗಿದೆ ಅಥವ ಅದರಜ್ಞಾನವು ಶ್ರೇಷ್ಠವಾಗಿದೆ ಎಂಬ ಕಾರಣದಿಂದ ಮಾತ್ರ ಅವನು ಆ ಪ್ರಾಣಿಯನ್ನು ಹೆಚ್ಚಾಗಿ ಪ್ರೀತಿಸುವುದಿಲ್ಲ. ಹಾಗೆಯೇ ಒಂದುಪ್ರಾಣಿಯ ಜಾತಿಯು ನಿಕೃಷ್ಟವಾಗಿದೆ, ಆದರ ಆಕಾರವು ಸುಂದರವಾಗಿಲ್ಲ, ಅದರ ಸ್ವಭಾವವು ಅಲ್ಪವಾದದ್ದು ಅಥವ ಅದರ ಜ್ಞಾನವು ಕೀಳಾದದ್ದು ಎಂಬ ಕಾರಣದಿಂದ ಮಾತ್ರ ಅವನು ಆ ಪ್ರಾಣಿಯನ್ನು ದ್ವೇಷಿಸುವುದಿಲ್ಲ. ಅವನು ಆಶ್ರಯಿಸುವವರೆಲ್ಲರನ್ನೂ ರಕ್ಷಿಸಲು ಸರ್ವದಾ ಸಿದ್ಧನಾಗಿದ್ದು ಅವರೆಲ್ಲರಲ್ಲಿಯೂ ಸಮ ಭಾವನೆಯನ್ನೂ ಮತ್ತು ಪ್ರೀತಿಯನ್ನೂ ಹೊಂದಿರುವನೇ ಹೊರತು ಯಾರನ್ನೂ ಎಂದಿಗೂ ದ್ವೇಷಿಸುವುದಿಲ್ಲ. ಹಾಗಾದರೆ ಭಗವಂತನನ್ನು ಆಶ್ರಯಿಸದವರ ಗತಿಯೇನು ? ಭಗವಂತನು ಅವರವರ ಕರ್ಮಗಳ ಪ್ರಕಾರ ಅಂದರೆ ಜಾತಿಗಳ ಉತ್ಕೃಷ್ಟತೆ ನಿಕೃಷ್ಟತೆಯ ಪ್ರಕಾರ, ಆಕಾರಗಳ ಪರಿಣಾಮಗಳಿಗೆ ಅನುಗುಣವಾಗಿ, ಸ್ವಭಾವಗಳ ಉತ್ತಮತ್ವ ಅಥವ ಅಧಮತ್ವಗಳನ್ನನುಸರಿಸಿ ಮತ್ತು ಜ್ಞಾನಗಳ ಮೇಲು ಕೀಳುಗಳ ಆಧಾರದಮೇಲೆ ಅವರಿಗೆ ಐಹಿಕ ಆಮುಷ್ಮಿಕ ಫಲಗಳನ್ನು ಕೊಡುವನು. ಈ ವಿಚಾರದಲ್ಲಿಯೂಕೂಡ ಭಗವಂತನು ಕರ್ಮದ ಅಥವ ಪ್ರಕೃತಿಯ ಕಟ್ಟಲೆಗಳಿಗೆ ಅನುಗುಣವಾಗಿ ಫಲಗಳನ್ನು ಕೊಡುತ್ತಾನೆಯೇ ಹೊರತು ಒಬ್ಬರನ್ನು ಮಮತೆಯ ಭಾವನೆಯಿಂದಲೂ, ಇನ್ನೊಬ್ಬರನ್ನು ದ್ವೇಷಭಾವನೆಯಿಂದಲೂ ನೋಡುವುದಿಲ್ಲ. ಆದರೆ ಯಾರು ಭಗವಂತನನ್ನು ಪ್ರೀತಿಸಿ ತಮ್ಮ ಶ್ರೇಯಸ್ಸಿಗಾಗಿ ಅವನ ಸಹಾಯವನ್ನು ಪ್ರಾರ್ಥಿಸಿ ಭಕ್ತಿಯಿಂದ ಅವನ ಉಪಾಸನೆಯನ್ನು ಮಾಡುತ್ತಾರೆಯೋ ಅವರಲ್ಲಿ ಅಂದರೆ ಅವರ ಜ್ಞಾನದಲ್ಲಿ ಅವನು ಸದಾಕಾಲದಲ್ಲಿಯೂ ಇರುವನು. ಆಗ ಭಗವಂತನ ಜ್ಞಾನದಲ್ಲಿಯೂ ಅವರೂ ಕೂಡ

ಇದ್ದೇಇರುವರು ; ಏಕೆಂದರೆ ಭಗವಂತನ ವಿಶೇಷವಾದ ಪ್ರೀತಿಯು ಅವರಮೇಲೆ ಬಿದ್ದೇಬೀಳುವುದು. ಆದುದರಿಂದ ಒಬ್ಬ ಭಕ್ತನು ಜಾತಿ, ಸ್ವಭಾವ, ಆಕಾರ, ಜ್ಞಾನಗಳಲ್ಲಿ ಶ್ರೇಷ್ಠ ನಾಗಿರಲೀ ಅಥವ ನಿಕೃಷ್ಟನಾಗಿರಲಿ ಅವನು ಭಗವಂತನಲ್ಲಿ ಅತ್ಯಂತ ಪ್ರೀತಿಯನ್ನು ಹೊಂದಿದವನಾಗಿ, ಭಗವಂತನನ್ನು ಸಹಾಯ ಮಾಡಬೇಕೆಂದು ಪ್ರಾರ್ಥಿಸುತ್ತಾ, ಭಗವಂತನ ಭಜನೆ ಯಿಲ್ಲದೆ ತನ್ನ ಆತ್ಮಧಾರಣೆಯನ್ನೇ ಹೊಂದಲಾರ ದವನಾಗಿ, ಅವನ ಭಜನೆಯೊಂದನ್ನೇ ಪ್ರಯೋಜನವಾಗಿ ಭಾವಿಸಿ ಅವನನ್ನು ಅವಕಾಶವಾದ ವೇಳೆಗಳಲ್ಲೆಲ್ಲಾ ಭಜಿ ಸುತ್ತಲೇ ಇದ್ದರೆ ಅವನು ಭಗವಂತನಿಗೆ ಸಮಾನವಾದ ಗುಣವನ್ನು ಹೊಂದುತ್ತಾನೆ. ಆಗ ಭಕ್ತನೂ ಭಗವಂತನಲ್ಲೇ ಇರುತ್ತಾನೆ. ಮತ್ತು ಭಗವಂತನೂ ಕೂಡ ತನ್ನ ಶ್ರೇಷ್ಠರಾದ ಭಕ್ತರನ್ನು ಕಾಣುವ ಹಾಗೆಯೇ ಅವನನ್ನೂ ಕಂಡು ಹಾಗೆಯೇ ವರ್ತಿಸುತ್ತಾನೆ. (೨೯)

ಹಾಗಾದರೆ ಒಬ್ಬ ಮನುಷ್ಯನು ತನ್ನ ಜಾತಿ, ಆಕಾರ, ಸ್ವಭಾವ, ಜ್ಞಾನಗಳಿಗೆ ಅನುಗುಣವಾಗಿ ಹುಟ್ಟಿದಂದಿನಿಂದ ಅನೇಕ ವರುಷಗಳಕಾಲ ಮಾಡಬೇಕಾದ ಧರ್ಮಗಳನ್ನು ಬಿಟ್ಟು, ಅಧರ್ಮವಾದ ಪಾಪಕಾರ್ಯಗಳನ್ನು ಮಾಡುತ್ತಿದ್ದು ಭಗವತ್ ಕೃಪೆಯಿಂದ ಅಥವ ಗುರುಗಳ ಉಪದೇಶದಿಂದ ಹಠಾತ್ತಾಗಿ ಉತ್ತಮವಾದ ನಿಶ್ಚಯಜ್ಞಾನವುಳ್ಳವನಾಗಬಹುದು. ಆಗ ಅವನು ಸಾಧುಗಳಂತೆ ಅಥವಾ ಜ್ಞಾನಿಗಳಂತೆ ಬಹುಮಾನಿಸ ಲ್ಪಡತಕ್ಕವನೇ ಆಗುತ್ತಾನೆ. ಏಕೆಂದರೆ ಅವನು ಮೊದಲನೆಯ್ದಾಗಿ ನಿಖಿಲ ಜಗದೇಕ ಕಾರಣನಾದ, ಪರಬ್ರಹ್ಮನಾದ, ಚರಾ ಚರಗಳಿಗೆ ಪತಿಯಾದ ಭಗವಂತನು ತನಗೆ ಸ್ವಾಮಿಯೆಂದೂ, ತನ್ನ ಗುರುವೆಂದೂ, ತನ್ನ ಸ್ನೇಹಿತನೆಂದೂ, ತನಗೆ ಪರಮ ಭೋಗ್ಯನಾದವನೆಂದೂ ನಿಶ್ಚಯಿಸಿರುವನು. ಈ ನಿಶ್ಚಯ ಜ್ಞಾನವು ಸರ್ವರಿಗೂ ಲಭಿಸುವಮ್ತಹಾಯವಲ್ಲ. ಎರಡನೆಯದಾಗಿ ಈ ವಿಧವಾದ ನಿಶ್ಚಯ ಜ್ಞಾನವನ್ನು ಪಡೆದಮೇಲೆ ಅವನು ಖಂಡಿತವಾಗಿ ಭಗವಂತನ ಭಕ್ತನಾಗಿ ಭಗವಂತನ ಭಜನೆ ಯೊಂದನ್ನೇ ಪ್ರಯೋಜನವಾಗಿ ಹೊಂದಿ (ಅಂದರೆ ಬೇರೆ ಯಾವ ಫಲಗಳನ್ನೂ ಅಪೇಕ್ಷಿಸದೆ ಅನನ್ಯ ಭಕ್ತನಾಗಿ ಭಗವಂತ ನನ್ನು ಭಜಿಸುತ್ತಾನೆ. ಬಹಳಕಾಲ ದುರಾಚಾರಿಯಾಗಿದ್ದಾಗ್ಯೂ ಹಠಾತ್ತಾಗಿ ಉತ್ತಮ ವ್ಯವಸಾಯವನ್ನು ಹೊಂದಿ, ತನ್ಮೂಲಕ ವಾಗ್ನಿ ಬೇರೆ ಯಾವ ಪ್ರಯೋಜನವನ್ನೂ ಅಪೇಕ್ಷಿಸದೆ ನಿರಂತರ ವಾಗಿ ಭಕ್ತಿಯಿಂದ ಭಗವಂತನ ಭಜನೆಯನ್ನು ಮಾಡುತ್ತಿದ್ದರೆ ಅವನನ್ನು ಸಾಧುವೆಂದೇ ಅಥವ ಮಹಾತ್ಮನೆಂದೇ ಭಾವಿಸ ಬೇಕು. ಅವನು ಈ ವಿಧವಾದ ನಿಶ್ಚಯ ಜ್ಞಾನವನ್ನು ಹೊಂದಿ ಅನನ್ಯ ಭಕ್ತಿಯಿಂದ ಕೂಡಿದ ಭಜನೆಯನ್ನು ಮಾಡು ವವನಾದರೆ ಅವನು ಹಿಂದೆ ಮಾಡುತ್ತಿದ್ದ ದುರಾಚಾರಗಳು ಅಥವ ವಿಪರೀತ ಆಚರಣೆಗಳು ಅತಿ ಲಘುವಾಗಿ ಅಥವ ಚಿಕ್ಕ ದಾಗಿ ಆಗುತ್ತವೆಯಲ್ಲವೆ. ಆದಕಾರಣ ಅವನು ಭಕ್ತನಾಗು ವುದಕ್ಕೆ ಮುಂಚೆ ಮಾಡಿದ ಆ ಚಿಕ್ಕ ದೋಷಗಳಿಗಾಗಿ ಅವನನ್ನು ಅನಾದರಣೆ ಮಾಡುವುದು ನ್ಯಾಯವಲ್ಲ. ಅದಕ್ಕೆ ಬದಲು ಅವನು ಸಾಧುವಿನಂತೆ ಅಥವ ಜ್ಞಾನಿಯಂತೆ ಸನ್ಮಾನಿಸಲ್ಪಡಲು ಯೋಗ್ಯನೆಂದು ತಿಳಿದು ಅವನನ್ನು ಮಹಾತ್ಮನಂತೆ ಸನ್ಮಾನಿಸಬೇಕು. (೩೦) ಇಲ್ಲಿ ಒಂದು ಸಂದೇಹವನ್ನು ಪರಿಹರಿಸಬೇಕಾಗುತ್ತದೆ. ದುಷ್ಟ ಆಚಾರ ಗಳಿಂದ ಕೂಡಿದವನೂ, ಶಾಂತಿ ಇಲ್ಲದವನೂ ಮತ್ತು ಚಪಲ ಚಿತ್ತವನ್ನು ಪಡೆದಿರುವವನೂ ಎಂದಿಗೂ ಪರಮಾತ್ಮನನ್ನು "ಜ್ಞಾನದಿಂದ" ಹೊಂದಲಾರನು ಎಂದು ಶ್ರುತಿಯಲ್ಲಿ ಉಪ ದೇಶವಿದೆ. ಹೀಗಿರುವಲ್ಲಿ ದುರಾಚಾರಗಳಿಂದ ಕೂಡಿದ ಅಂದರೆ ಪಾಪಕೃತ್ಯಗಳನ್ನು ಮಾಡಿರುವ ಕೀಳುದರ್ಜೆಯ ಮನುಷ್ಯನು ಭಗವಂತನ ಅನನ್ಯ ಭಕ್ತನಾದ ಮಾತ್ರಕ್ಕೆ ಸಾಧುಗಳಹಾಗೆ ಅಥವ ಜ್ಞಾನಿಗಳಹಾಗೆ ಪರಮಾತ್ಮನನ್ನು ಹೇಗೆ ಸಾಕ್ಷಾತ್ಕರಿಸ ಬಲ್ಲನು ? ಅವನೂಕೂಡ ಮಹಾತ್ಮನಹಾಗೆ ಭಗವಂತನನ್ನು ಸಾಕ್ಷಾತ್ಕರಿಸಬಲ್ಲನು ; ಏಕೆಂದರೆ ಅವನು ಭಗವಂತನ ಅನನ್ಯ ಭಕ್ತನಾದಕೂಡಲೇ ಶೀಘ್ರದಲ್ಲಿಯೇ ಧರ್ಮಾತ್ಮನಾಗುವನು ಮತ್ತು ಶಾಶ್ವತವಾದ ಶಾಂತಿಯನ್ನು ಹೊಂದುವನು. ಧರ್ಮವೇ ಅಂದರೆ ಭಗವಂತನೇ ಅವನ ಮನಸ್ಸಿನಲ್ಲಿರುವುದರಿಂದ ಅವನು ಅವನ ಮಿಕ್ಕ ಜೀವಿತಕಾಲದಲ್ಲೆಲ್ಲಾ ತನ್ನ ದುರಾಚಾರ ಗಳನ್ನೆಲ್ಲಾ ಬಿಟ್ಟು ಧರ್ಮಾಚರಣೆಗಳಲ್ಲಿಯೇ ನಿರತನಾಗುವನು. ಯಾವಾಗ ಬೇರೆ ಯಾವಫಲದಲ್ಲಿಯೂ ಆಸೆ ಇಲ್ಲದೆ ಭಗವಂತ ನಲ್ಲಿ ಭಕ್ತಿ ಅಥವ ಪ್ರೀತಿ ಉಂಟಾಗುತ್ತದೆಯೋ ಆಗ ದುರಾ ಚಾರಗಳನ್ನು ಮಾಡುತ್ತಿದ್ದವನು ಭಗವಂತನ ಭಜನೆ ಯೊಂದನ್ನೇ ಯಾವಾಗಲೂ ಮಾಡುವವನಾಗುವನು. ಅದರಿಂದ ಅವನ ರಜೋಗುಣ ಮತ್ತು ತಮೋಗುಣಗಳೆಲ್ಲವೂ ಬೇರು ಸಹಿತ ನಷ್ಟವಾಗಿ, ಅವನ ಪಾಪಗಳೆಲ್ಲಾ ನಿರ್ಮೂಲವಾಗಿ ಅವನು ಧರ್ಮಾತ್ಮನಾಗುವನು. ಶೀಘ್ರದಲ್ಲಿಯೇ ಅವನು ಭಕ್ತಿಗೆ ವಿರೋಧಗಳಾದ ದುರಾಚಾರಗಳಿಂದ ಬಿಡಲ್ಪಟ್ಟ ಮನಸ್ಸುಳ್ಳವನಾಗಿ, ಅನನ್ಯ ಭಕ್ತಿಯಿಂದ ಕೂಡಿದ ಭಗವಂತನ ಭಜನೆಯೊಂದರಲ್ಲೇ ನಿರತನಾಗುವನು. ಶಾಂತಿಯನ್ನೂ ಹೊಂದುವನು ; ಅಂದರೆ ಶಾಶ್ವತವಾದ ಅಥವ ಹಿಂತಿರುಗುವಿಕೆ ಇಲ್ಲದ ಭಗವಂತನ ಸಾಕ್ಷಾತ್ಕಾರಕ್ಕೆ (ಪ್ರಾಪ್ತಿಗೆ) ವಿರೋಧವಾದ ದುಷ್ಟ ಆಚಾರಗಳೇ ಇಲ್ಲದಿರುವ ಸ್ಥಿತಿಯನ್ನು ಹೊಂದುವನು. ಈ ತೀರ್ಮಾನವನ್ನು ಯಾರುಬೇಕಾದರೂ ಸಂಶಯವಿಲ್ಲದೆ

ಪ್ರತಿಷ್ಠೆ ಮಾಡಬಹುದು. "ಭಗವಂತನನ್ನು ಪ್ರೀತಿಸಿ, ಅವನ ಸಹಾಯವನ್ನು ಪ್ರಾರ್ಥಿಸಿ, ಅವನಲ್ಲಿ ಭಕ್ತಿಮಾಡುವವನು. ತಾನು ಹಿಂದೆ ಭಗವಂತನ ಪ್ರಾಪ್ತಿಗೆ ವಿರೋಧಗಳಾದ ದುರಾಚಾರಗಳನ್ನು ಅಥವ ಪಾಪಕಾರ್ಯಗಳನ್ನು ಹೆಚ್ಚಾಗಿ ಮಾಡಿದ್ದಾಗ್ಯೂ ಕೂಡ ಅವನು ಖಂಡಿತವಾಗಿ ನಾಶವನ್ನು ಅಥವ ನಷ್ಟವನ್ನು ಹೊಂದುವುದಿಲ್ಲ—ಮತ್ತೇನಂದರೆ ಅವನು ಭಗವಂತನಲ್ಲಿ ಮೂಡಿದ ಭಕ್ತಿಯ ಮಹಾತ್ಮೆಯಿಂದ ಅವನ ವಿರೋಧಿ ಸಮೂಹಗಳನ್ನು ನಾಶಮಾಡಿ, ಶಾಶ್ವತವಾಗಿ ಮುಂದೆಯೂ ಆ ವಿರೋಧಿಗಳಿಂದ ಬಿಡುಗಡೆಯನ್ನು ಹೊಂದಿದವನಾಗಿ ಶೀಘ್ರದಲ್ಲಿಯೇ ಪರಿಪೂರ್ಣ ಭಕ್ತಿಯುಳ್ಳವನಾಗುವನು." (೩೧)

ಧರ್ಮಶಾಸ್ತ್ರಗಳಲ್ಲಿ ಸ್ತ್ರೀಯರುಗಳಿಗೆ, ವೈಶ್ಯರುಗಳಿಗೆ, ಶೂದ್ರರಿಗೆ ಮತ್ತು ಇತರರಿಗೆ ಸುಲಭವಾಗಿ ಮೋಕ್ಷವು ದೊರಕುವುದಿಲ್ಲವೆಂಬ ಸಾಮಾನ್ಯವಾದ ಅಭಿಪ್ರಾಯವನ್ನು ಸೂಚಿಸಿದೆ. ಆದರೆ ವೇದಾಂತ ಶಾಸ್ತ್ರವು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ, ಏಕೆಂದರೆ, ಯಾರು ಅನನ್ಯ ಭಕ್ತಿಯಿಂದ ಭಗವಂತನನ್ನು ಆಶ್ರಯಿಸುತ್ತಾರೆಯೋ ಅವರು ಸ್ತ್ರೀಯಾಗಿ ಗೃಹಿಣಿಯಾಗಿದ್ದು ಮನೆ ಕೆಲಸಗಳನ್ನು ಮಾಡುತ್ತಿರಲೀ ಅಥವ ಅವರು ದೇಶದ ವ್ಯಾಪಾರ ಕಾರ್ಯಗಳಲ್ಲಿ ನಿರತರಾಗಿರಲಿ ಅಥವ ಅವರು ವ್ಯವಸಾಯ, ಕೈಗಾರಿಕೆ ಕೆಲಸಗಳಲ್ಲಿ ನಿರತರಾಗಿರಲೀ ಅಥವ ಅವರು ಜಿಗುಪ್ಸೆಯನ್ನುಂಟುಮಾಡುವ ಕೆಲಸಗಳನ್ನು ಮಾಡುವವರಾಗಲೀ—ಅವರೆಲ್ಲರೂ ಭಗವಂತನನ್ನು ಚೆನ್ನಾಗಿ ಆಶ್ರಯಿಸಿ ಪರಮಗತಿಯನ್ನು ಖಂಡಿತವಾಗಿ ಹೊಂದುತ್ತಾರೆ (೩೨) ಹೀಗಿರುವಾಗ ವೇದಾದಿ ಶಾಸ್ತ್ರಗಳಲ್ಲಿ ಪ್ರವೀಣರಾಗಿ ಯಜ್ಞ, ದಾನ, ತಪಸ್ಸು, ದೇವರ ಪೂಜೆ, ವ್ರತಗಳು ಮೊದಲಾದ ಕಾರ್ಯಗಳಲ್ಲಿ ನಿರತರಾಗಿರುವ ಬ್ರಾಹ್ಮಣರೂ ಮತ್ತು ದೇಶ ಭಕ್ತರಾಗಿ ಯಜ್ಞ, ದಾನ, ತಪಸ್ಸುಗಳನ್ನು ಮಾಡುತ್ತಾ, ಸ್ವಾರ್ಥತೆಯನ್ನು ತೊರೆದು ದೇಶ ಸೇವಾ ಕಾರ್ಯಗಳಲ್ಲಿ ನಿರತರಾಗಿರುವ ರಾಜಋಷಿಗಳೂ ಭಗವಂತನಲ್ಲಿ ಅನನ್ಯ ಭಕ್ತಿಯನ್ನು ಪಡೆದು, ಅವನ ಸಹಾಯವನ್ನು ಪ್ರಾರ್ಥಿಸಿ, ಅವನನ್ನು ಏಕಭಕ್ತಿಯಿಂದ ಭಜನೆ ಮಾಡಿದರೆ ಅವರು ಖಂಡಿತವಾಗಿಯೂ ಭಗವಂತನ ಪ್ರಾಪ್ತಿಯೆಂಬ ಪರಮಗತಿಯನ್ನು ಹೊಂದಿಯೇ ಹೊಂದುತ್ತಾರೆ. ಪಾಪ ಕರ್ಮಗಳನ್ನು ಮಾಡಿದ್ದವರೂ ಕೂಡ ಭಗವಂತನ ಅನನ್ಯ ಭಕ್ತರಾಗಿ ಪರಮಗತಿಯನ್ನು ಹೊಂದುವುದು ಸಿದ್ಧವಾಗಿರುವಾಗ, ಪುಣ್ಯ ಕರ್ಮಗಳನ್ನು ಮಾಡುತ್ತಿದ್ದವರು ಭಕ್ತರಾಗಿ ಪರಮಗತಿಯನ್ನು ಹೊಂದುತ್ತಾರೆ ಎಂಬುದರಲ್ಲಿ ಸಂದೇಹವೇ ಇಲ್ಲ ; ಅವರು ಪರಮಗತಿಯನ್ನು ಹೊಂದಿಯೇ ಹೊಂದುತ್ತಾರೆ. ಒಟ್ಟಿನಲ್ಲಿ ತಾತ್ಪರ್ಯವೇನು—ಪರಿಶುದ್ಧನಾದ ಪ್ರತ್ಯಗಾತ್ಮನು ಯಾವುದೋ ನಮಗೆ ತಿಳಿಯದ ಕಾರಣದಿಂದ ಈ ಲೋಕದಲ್ಲಿ ದೇವತೆಯಾಗಿ, ಮನುಷ್ಯನಾಗಿ, ಪ್ರಾಣಿಯಾಗಿ ಅಥವ ಗಿಡವಾಗಿ ಹುಟ್ಟು ಸಾವುಗಳಿಂದ ಕೂಡಿರುವ ಜನ್ಮವನ್ನು ಪಡೆಯುವನು. ಇಲ್ಲಿ ಸುಖಗಳನ್ನು ಅನುಭವಿಸುತ್ತಲೇ ಇರಬೇಕೆಂದು ಆಸೆಪಡುವನು. ಆದರೆ ಈ ಆಶೆಯನ್ನು ಬಹಳ ಕಾಲ ತೃಪ್ತಿಪಡಿಸಲು ಆಗುವುದಿಲ್ಲ ; ಏಕೆಂದರೆ ಈ ಲೋಕವೇ ಅಶಾಶ್ವತವಾದದ್ದು ; ಇದರಲ್ಲಿರುವ ಸಜೀವ ನಿರ್ಜೀವ ಪದಾರ್ಥಗಳೆಲ್ಲವೂ ಒಂದು ಕಾಲದಲ್ಲಿ ಹುಟ್ಟಿ, ಕೆಲವು ಕಾಲವಿದ್ದು, ಆಮೇಲೆ ಇನ್ನೊಂದು ಕಾಲದಲ್ಲಿ ನಾಶವಾಗುತ್ತದೆ. ಇಷ್ಟೇ ಅಲ್ಲ ; ಈ ಲೋಕದಲ್ಲಿರುವ ಸುಖಗಳೆಲ್ಲವೂ ದುಃಖ ಮಿಶ್ರವಾದದ್ದು ; ಮತ್ತು ಬಹು ಮಂದಿಗೆ ಕಷ್ಟಗಳೇ ಹೆಚ್ಚಾಗಿ ಇರುವುದರಿಂದ ದುಃಖವೇ ಹೆಚ್ಚಾಗಿದ್ದು ಸುಖವು ಕಮ್ಮಿಯಾಗಿದೆ. ಹೀಗಿರುವುದರಿಂದ ಮಾನವರೆಲ್ಲರೂ ದುಃಖವೇ ಇಲ್ಲದ ಭಗವಂತನ ಪ್ರಾಪ್ತಿಯೆಂಬ ತಮ್ಮ ಆತ್ಮ ಸ್ವರೂಪಾನುಭವ ಮತ್ತು ಈಶ್ವರ ಸಾಕ್ಷಾತ್ಕಾರವೆಂಬ ಶಾಶ್ವತಾನಂದವನ್ನು ಪಡೆಯುವುದಕ್ಕೆ ಪ್ರಯತ್ನಿಸಬೇಕು. ಆತ್ಮಾನುಭವದಿಂದ ಕೂಡಿರುವ ಈಶ್ವರ ಸಾಕ್ಷಾತ್ಕಾರವನ್ನು ಪಡೆಯುವುದಕ್ಕೆ ಇರುವುದು ಒಂದೇ ಉತ್ತಮವಾದ ಉಪಾಯ. ಆ ಉಪಾಯವೇ "ಮಯ್ಯಾಸಕ್ತಮನಾಃ ಯೋಗಂ ಯುಂಜನ್ ಮದಾಶ್ರಯಃ" ಎಂದು ಹೇಳಿರುವ ಹಾಗೆ ಭಗವಂತನಲ್ಲಿ ಅನನ್ಯ ಭಕ್ತಿಯಿಂದ ಕೂಡಿದ್ದು, ಭಗವಂತನ ಸಹಾಯವನ್ನೇ ಪ್ರಾರ್ಥಿಸುವ ಮತ್ತು ಭಗವಂತನ ಉಪಾಸನಾ ರೂಪವಾದ ಭಜನೆಯನ್ನು ಸದಾ ಕಾಲದಲ್ಲಿಯೂ ಮಾಡುತ್ತಿರುವ ಭಕ್ತಿಯೋಗವು. ಆದುದರಿಂದ ಶಾಶ್ವತಾನಂದದಿಂದ ಕೂಡಿದ ಪರಮಗತಿಯನ್ನು ಆಸೆಪಡುವ ಮಾನವರೆಲ್ಲರಿಗೂ ಭಗವಂತನನ್ನು ಅನನ್ಯ ಭಕ್ತಿಯಿಂದ ಭಜನೆ ಮಾಡುವುದಕ್ಕಿಂತ ಬೇರೆ ಉಪಾಯವೇ ಇಲ್ಲ (೩೩).

ಇಲ್ಲಿಯವರೆಗೆ ಭಗವಂತನು ಎಲ್ಲಾ ಭೂತಗಳಲ್ಲಿಯೂ ಸಮಭಾವನೆಯನ್ನು ಇಟ್ಟಿರುವನೆಂದೂ, ಅವನಿಗೆ ಆಶ್ರಿತರಲ್ಲಿ ಒಬ್ಬನಲ್ಲಿ ಪ್ರೀತಿ ಭಾವವೂ ಒಬ್ಬನಲ್ಲಿ ದ್ವೇಷ ಭಾವವೂ ಇಲ್ಲವೆಂದೂ, ಭಕ್ತನು ಅವನಲ್ಲಿರುವನೆಂದೂ, ಅವನು ಭಕ್ತನಲ್ಲಿ ಇರುವನೆಂದೂ, ಒಬ್ಬನು ಮೊದಲು ದುರಾಚಾರಿಯಾಗಿದ್ದರೂ ಅನನ್ಯ ಭಕ್ತನಾದರೆ ಅವನು ಧರ್ಮಾತ್ಮನಾಗಿ ಶಾಂತಿಯನ್ನು ಹೊಂದುವುದರಿಂದ ಅವನನ್ನು ಸಾಧುವಿನಂತೆ ಕಾಣಬೇಕೆಂದೂ, ಭಗವದ್ಭಕ್ತನು ಎಂದಿಗೂ ನಾಶವಾಗುವುದಿಲ್ಲವೆಂದೂ, ಸ್ತ್ರೀಯರೂ ವೈಶ್ಯರೂ ಶೂದ್ರರೂ ಇತರರೂ ಭಗವದ್ಭಕ್ತರಾದರೆ ಪರಮಗತಿಯನ್ನು ಹೊಂದುತ್ತಾರೆಂದೂ, ಆದ್ದರಿಂದ ಪ್ರತಿಯೊಬ್ಬ ಮಾನವನೂ ಈ ಅನಿತ್ಯವಾದ ಸುಖವನ್ನುಂಟುಮಾಡುವ ಈ ಲೋಕದ ಅನುಭವದಿಂದ ಪಾರಾಗಲು ಭಗವಂತನನ್ನು ಅನನ್ಯ ಭಕ್ತಿಯಿಂದ ಭಜಿಸಿ ಅವನನ್ನು ಹೊಂದುವ

ಯೋಗ್ಯತೆಯನ್ನು ಪಡೆಯಬೇಕೆಂದೂ ತಿಳಿದದ್ದಾಯಿತು. ಇನ್ನು ಕೊನೆಯದಾಗಿ ಭಗವಂತನನ್ನು ಅನನ್ಯ ಭಕ್ತಿಯಿಂದ ಭಜಿಸುವ ಅಥವ ಉಪಾಸಿಸುವ ಈ ಭಕ್ತಿಯೋಗವನ್ನು ಮಾನವರು ಯಾವ ಕ್ರಮದಲ್ಲಿ ಮಾಡಬೇಕು ಎಂಬುದನ್ನು ಪುನಃ ಸಂಗ್ರಹವಾಗಿ ಈ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಹೀಗೆ ತಿಳಿಸಿದೆ.

1. "ಮನ್ಮನಾಭವ" ಎಂದರೆ ಮನುಷ್ಯನು ಮೊದಲು ಭಗವಂತನಲ್ಲೇ ನೆಟ್ಟ ಮನಸ್ಸುಳ್ಳವನಾಗಬೇಕು. ಎಂಥಾ ಭಗವಂತನಲ್ಲಿ? ಈ ಭಗವಂತನು ಸರ್ವೇಶ್ವರನು; ಸಮಸ್ತ ಕೆಟ್ಟ ಅಥವ ಅಲ್ಪಗುಣಗಳಿಗೆ ವಿರೋಧಿಯು; ಸಮಸ್ತ ಕಲ್ಯಾಣಗುಣಗಳಿಗೆ ಆಶ್ರಯನು, ಸರ್ವಜ್ಞನು, ಸತ್ಯಸಂಕಲ್ಪ ಉಳ್ಳವನು ಮತ್ತು ಸಮಸ್ತ ಜಗತ್ತಿಗೂ ಏಕ ಕಾರಣನು. ಇಂಥಾ ಭಗವಂತನ ದಿವ್ಯಮಂಗಳ ವಿಗ್ರಹವನ್ನು ಹೇಗೆ ಧ್ಯಾನಿಸಬೇಕು. ಆ ದಿವ್ಯ ಮಂಗಳವಿಗ್ರಹದಲ್ಲಿ ಕಮಲದಳದಂತೆ ನಿರ್ಮಲವೂ, ವಿಶಾಲವೂ ಆದ ಕಣ್ಣುಗಳಿವೆ; ಅವನ ಶರೀರವು ಸ್ವಚ್ಛ ನೀಲಮೇಘ ಶ್ಯಾಮವರ್ಣದಿಂದ ಕೂಡಿದೆ; ಸಹಸ್ರಾರು ಸೂರ್ಯರಿಗೆ ಸಮನಾದ ತೇಜಸ್ಸಿನಿಂದ ಕೂಡಿದೆ; ಸರ್ವಾವಯವಗಳೂ ಮನೋಹರವಾಗಿ ಲಾವಣ್ಯದಿಂದ ಕೂಡಿವೆ; ಆಜಾನುಬಾಹುಗಳಾದ ಚತುರ್ಭುಜಗಳಿವೆ; ವಿಶೇಷವಾದ ಕಾಂತಿಯಿಂದ ಪ್ರಕಾಶಿಸುವ ಪೀತಾಂಬರವನ್ನು ಧರಿಸಿದ್ದಾನೆ; ನಿರ್ಮಲವಾದ ಕಿರೀಟ, ಮೊಸಳೆಯಾಕಾರದ ಕುಂಡಲವೆ; ಮೊದಲಾದ ಅನೇಕ ಆಭರಣಗಳಿಂದ ಅಲಂಕರಿಸಲ್ಪಟ್ಟಿದ್ದಾನೆ, ಇನ್ನು ಈ ಭಗವಂತನ ಗುಣಗಳೇನು? ಅವನು ಅಪಾರ ಕಾರುಣ್ಯ, ವಾತ್ಸಲ್ಯ, ಸೌಶೀಲ್ಯ, ಮಾಧುರ್ಯ, ಗಾಂಭೀರ್ಯ ಔದಾರ್ಯ ಮೊದಲಾದ ಇನ್ನೂ ಅನೇಕ ಒಳ್ಳೆಗುಣಗಳ ಸಾಗರನು. ಅವನು ಕೆಟ್ಟದ್ದು, ಒಳ್ಳೆಯದು ಎಂಬ ಭೇದವಿಲ್ಲದೇ ಸಮಸ್ತ ಲೋಕಕ್ಕೆ ಶರಣ್ಯನು, ಸರ್ವಸ್ವಾಮಿಯು, ಪರಬ್ರಹ್ಮನು, ಮತ್ತು ಪುರುಷೋತ್ತಮನು. ಇಂಥಾ ಸಗುಣ ಬ್ರಹ್ಮನಲ್ಲಿ ಅಡಿಗಡಿಗೆ ತೈಲಧಾರೆಯಂತೆ ವಿಚ್ಛೇದವಿಲ್ಲದೆ ಮನಸ್ಸನ್ನು ಇಟ್ಟು ಅವನನ್ನು ಧ್ಯಾನ ಮಾಡಬೇಕು. 2. "ಮದ್ಭಕ್ತ" ಎಂದರೆ ಇಂತಹ ಸಗುಣ ಬ್ರಹ್ಮನಲ್ಲಿ ಭಕ್ತಿಯನ್ನು ಅಥವ ನಿಜವಾದ ಪ್ರೀತಿಯನ್ನು ಬೆಳಸಬೇಕು. ಅಂದರೆ ಭಗವಂತನಲ್ಲಿ ನಿರತಿಶಯವಾದ ಪ್ರೇಮದಿಂದ ಕೂಡಿರುವ ಮನಸ್ಸುಳ್ಳವನಾಗಬೇಕು. 3. "ಮದ್ಯಾಜಿ" ಎಂದರೆ ಸಗುಣ ಬ್ರಹ್ಮನಲ್ಲಿ ಭಕ್ತಿಯುತ ಮನಸ್ಸಿನಿಂದ ಕೂಡಿದವನಾಗಿ ಅವನ ಪೂಜಾದಿಗಳನ್ನು ನಾನಾರೂಪದಲ್ಲಿ ಮಾಡುತ್ತಲೇ ಇರಬೇಕು. ಸಮಾಜದ ಮತ್ತು ತನ್ನ ಕಲ್ಯಾಣಕ್ಕಾಗಿ ಯಾವಯಾವ ಕಾರ್ಯಗಳನ್ನು "ನಾನು ಭಗವಂತನ ದಾಸನು; ಅವನ ತೃಪ್ತಿಗಾಗಿ ಅವನ ಕೈಂಕರ್ಯವಾಗಿ ಈ ಕಾರ್ಯಗಳನ್ನು ಮಾಡುತ್ತೇನೆ" ಎಂಬ ಭಾವನೆಯಿಂದ ಮಾಡುವನೋ ಅದೇ ಭಗವಂತನ ಪೂಜೆಯು. ಈ ಪೂಜೆಯು ಅರ್ಘ್ಯ, ಪಾದ್ಯ, ಆಚಮನಾದಿಗಳಿಂದ ಕೂಡಿದ ಯಾಗಾದಿಗಳಾಗಿರಬಹುದು. ಈ ಪೂಜೆಯು ಭಗವಂತನ ಅನುಭವವನ್ನುಂಟುಮಾಡುವ ಅತ್ಯಧಿಕವಾದ ಪ್ರೀತಿಯಿಂದ ಕೂಡಿದ್ದಾಗಿರುವುದರಿಂದ ಭಕ್ತನಿಗೆ ಆನಂದವನ್ನು ಉಂಟುಮಾಡುತ್ತದೆ. 4. "ಮಾಂನಮಸ್ಕುರು" ಎಂದರೆ ಭಗವಂತನನ್ನು ಸ್ಮರಿಸುತ್ತಾ ಮತ್ತು ಪೂಜೆ ಮಾಡುತ್ತಾ ಇರುವಾಗ ಅಡಿಗಡಿಗೆ ನಮಸ್ಕಾರ ಮಾಡುತ್ತಲೇ ಇರಬೇಕು. ಯಾವನು ಭಗವಂತನಲ್ಲಿ ಅತ್ಯಧಿಕ ಪ್ರೀತಿಯನ್ನು ಹೊಂದಿ ಅವನ ಪೂಜೆಯನ್ನು ಮಾಡಲು ಉದ್ಯುಕ್ತನಾಗುವನೋ ಅವನು ಖಂಡಿತವಾಗಿ ಭಗವಂತನಿಗೆ ತಾನಾಗಿಯೇ ನಮಸ್ಕಾರ ಮಾಡುತ್ತಾನೆ. ನಮಸ್ಕಾರ ಮಾಡುವುದೆಂದರೆ ಬಾಹ್ಯವಾಗಿ ಭಗವಂತನಿಗೆ ನಮಸ್ಕಾರ ಮಾಡುವುದು ಮಾತ್ರವಲ್ಲ; ಅಂತರಂಗದಲ್ಲಿಯೂ ಕೂಡ ಭಗವಂತನಲ್ಲಿ ಅತ್ಯಂತ ನಮ್ರಭಾವನೆಯ ವ್ಯವಸಾಯವನ್ನು ಮಾಡಿಕೊಳ್ಳಬೇಕು. ಅಂದರೆ ತಾನು ಭಗವಂತನಿಗೆ ಸಂಪೂರ್ಣವಾಗಿ ಅಧೀನನು ಎಂಬ ಭಾವನೆಯನ್ನು ಹೊಂದಿ ತನ್ನ ಅಂತರಾತ್ಮನಾದ ಭಗವಂತನಲ್ಲಿ ಅತ್ಯಂತ ನಮ್ರಭಾವನೆಯುನ್ನು ವೃದ್ಧಿಪಡಿಸಿಕೊಳ್ಳಬೇಕು. 5. ಕೊನೆಯದಾಗಿ "ಮತ್ಪರಾಯಣಃ" ಅಂದರೆ ಅವನು ಭಗವತ್ಪರಾಯಣನಾಗಬೇಕು. ಯಾರಿಗೆ ಭಗವಂತನೇ ಸಂಪೂರ್ಣ ಆಶ್ರಯನೋ ಅವನೇ "ಮತ್ಪರಾಯಣನು". ಅಂದರೇನು, ಅವನು ಭಗವಂತನೊಬ್ಬನೇ ತನಗೆ ಆಶ್ರಯನು, ಇನ್ನು ಯಾರೂ ಅಲ್ಲ ಎಂಬುದನ್ನು ದೃಢವಾಗಿ ತಿಳಿದು, ಅವನಿಲ್ಲದಿದ್ದರೆ ತನ್ನ ಆತ್ಮಧಾರಣೆಯಾಗುವುದಿಲ್ಲವೆಂಬುದನ್ನು ನಂಬಿ, ಅವನನ್ನು ಸರ್ವಪ್ರಕಾರದಲ್ಲಿಯೂ ಆಶ್ರಯಿಸುವನು. ಭಕ್ತನಾದವನು ಮೇಲೆ ವಿವರಿಸಿದ ರೀತಿಯಲ್ಲಿ ಭಕ್ತಿಯಿಂದ ಅಂದರೆ ಅತ್ಯಂತ ಅತಿಶಯ ಪ್ರೀತಿಯಿಂದ ಭಗವಂತನನ್ನು "ಮನ್ಮನಾಭವ, ಮದ್ಭಕ್ತ ಮದ್ಯಾಜಿ, ಮಾಂನಮಸ್ಕುರು, ಮತ್ಪರಾಯಣಃ" ಎಂಬ ಭಕ್ತಿಯೋಗಅಭ್ಯಾಸಗಳಿಂದ ಭಗವಂತನ ಅನುಭವವನ್ನು ಪಡೆಯಲು ಸಮರ್ಥವಾದ ಮನಸ್ಸನ್ನು ಹೊಂದಿದವನಾದರೆ ಅವನು ಖಂಡಿತವಾಗಿ ಭಗವಂತನನ್ನೇ ಸೇರುತ್ತಾನೆ. (28)

ಭಗವಂತನ ಈ ಪವಿತ್ರವಾದ ಸಂದೇಶವನ್ನು ಮಾನವರೆಲ್ಲರೂ ಗಮನಿಸಬೇಕು. "ಮಾನವರೇ! ಮೇಲೆ ವಿವರಿಸಿರುವ ರೀತಿಯಲ್ಲಿ ಭಗವಂತನನ್ನು ಮನಸ್ಸಿನಲ್ಲಿ ಧ್ಯಾನಿಸಿ. ಅವನನ್ನು ಭಕ್ತಿಯಿಂದ ಅಂದರೆ ಪ್ರೀತಿಯಿಂದ ಅನುಭವಿಸಿ. ಅವನನ್ನು ವಿಧವಿಧವಾಗಿ ಪೂಜಿಸಿ.

(Re-printed from the Mysore Vysya Patrika, August 1961)

M. V. P. Press, Mysore.

# ಭಗವದ್ಗೀತಾ

ಅವನನ್ನು ಕುರಿತು ನಮ್ರತೆಯಿಂದ ನಮಸ್ಕಾರ ಮಾಡಿ, ಅವನನ್ನು ಪರಮಗತಿ ಎಂದು ಆಶ್ರಯಿಸಿ ಭಗವತ್ಪರಾಯಣರಾಗಿ. ಹೀಗೆ ನೀವು ಭಕ್ತಿಯಿಂದ ನಿಮ್ಮ ಮನಸ್ಸನ್ನು ಭಗವಂತನಲ್ಲಿ ಐಕ್ಯಮಾಡಿದರೆ ಆಗ ನೀವು ಖಂಡಿತವಾಗಿಯೂ ಭಗವಂತನನ್ನೇ ಸೇರಿ ಶಾಶ್ವತಾನಂದವನ್ನು ಪಡೆಯುತ್ತೀರಿ. ಆದರೆ ನಿಮ್ಮ ನಿಮ್ಮ ಮತ್ತು ನಿಮ್ಮ ಕುಟುಂಬದವರ ಶರೀರ ಧಾರಣೆಗೆ ಬೇಕಾದ ಲೌಕಿಕ ಕರ್ಮಗಳನ್ನೂ ಮತ್ತು ಶಾಸ್ತ್ರದಲ್ಲಿ ವಿಧಿಸಿರುವ ನಿಮ್ಮ ನಿಮ್ಮ ನಿತ್ಯ ನೈಮಿತ್ತಿಕ ಕರ್ಮಗಳನ್ನೂ ಮಾಡುತ್ತಲೇ ಇರಬೇಕೆಂಬುದನ್ನು ಮರೆಯಬೇಡಿ. ಆದರೆ ಅವುಗಳನ್ನು ಭಗವಂತನಲ್ಲಿ ಪ್ರೀತಿಯಿಂದ, ನೀವು ಅವನ ದಾಸರು ಎಂಬ ಭಾವನೆಯಿಂದ, ಅವನೇ ಈ ಕೆಲಸಗಳನ್ನು ನಿಮ್ಮ ಮೂಲಕ ಮಾಡಿಸುತ್ತಾನೆಂದು ಅನುಸಂಧಾನ ಮಾಡುತ್ತಾ ಆಚರಿಸಿ ಮಿಕ್ಕ ಕಾಲಗಳಲ್ಲೆಲ್ಲಾ ಭಗವಂತನ ಕೀರ್ತನೆ, ಭಜನೆ, ಪೂಜೆ, ನಮಸ್ಕಾರಾದಿಗಳನ್ನು ಪ್ರೀತಿಯಿಂದಲೇ ಮಾಡುತ್ತಲೇ ಇರುವರಾಗಿ ಭಗವಂತನಿಂದಲೇ ಉಂಟಾಗಿ, ಅವನಿಂದಲೇ ನಿಯಮಿಸಲ್ಪಟ್ಟಿರುವ ಈ ಜಗತ್ತು ಅವನ ಲೀಲಾ ಭೋಗಕ್ಕೆ ಒಳಪಟ್ಟಿರುವುದರಿಂದ ನೀವು ಅವನ ಕಲ್ಯಾಣ ಗುಣಗಳನ್ನು ಯಾವಾಗಲೂ ಮನನ ಮಾಡುತ್ತಲೇ ಇರಬೇಕು. ಹೀಗೆ ನೀವು ಪ್ರತಿನಿತ್ಯವೂ ಭಕ್ತಿಯೋಗವನ್ನು ಆಚರಿಸುತ್ತಿದ್ದರೆ ಭಗವಂತನ ಕೃಪೆಯಿಂದ ಮತ್ತು ಅವನ ಸಹಾಯದಿಂದ ಅತ್ಯಂತ ಮೇಲಾದ ಶ್ರೇಯಸ್ಸನ್ನು ಪಡೆಯುತ್ತೀರಿ. ಇದೇ ರಾಜ ವಿದ್ಯಾ ರಾಜಗುಹ್ಯ ಯೋಗವು!"

# ಭಗವದ್ಗೀತಾ ಹತ್ತನೆಯ ಅಧ್ಯಾಯ

## ಜ್ಞಾನಿಯು ಜಗತ್ತನ್ನು ಭಗವಂತನ ಶರೀರ, ಐಶ್ವರ್ಯ ಅಥವ ವಿಭೂತಿಯನ್ನಾಗಿ ತಿಳಿದು ಧ್ಯಾನಮಾಡುವನು (ವಿಭೂತಿ ಯೋಗ)

ಹಿಂದಿನ ಏಳು, ಎಂಟು ಮತ್ತು ಒಂಭತ್ತನೆಯ ಅಧ್ಯಾಯಗಳಲ್ಲಿ ಭಗವಂತನಿಗೂ ಮತ್ತು ಪ್ರಕೃತಿ ಪುರುಷರಿಗೂ ಇರುವ ಸಂಬಂಧವೂ, ಇವರುಗಳ ಸ್ವರೂಪವೂ ಮತ್ತು ಭಕ್ತಿಯೋಗದ ಸ್ವರೂಪವೂ ಸಾಂಗವಾಗಿ ವಿವರಿಸಲ್ಪಟ್ಟಿತು. ಈ ಅಧ್ಯಾಯದಲ್ಲಿ ಭಗವಂತನಿಗೆ ಇರುವ ಮತ್ತು ಇನ್ನು ಯಾರಿಗೂ ಇಲ್ಲದಿರುವ ಅವನ ವಿಭೂತಿಗಳನ್ನೂ ಅಂದರೆ ಐಶ್ವರ್ಯಗಳನ್ನೂ ಮತ್ತು ಕಲ್ಯಾಣ ಗುಣಗಳನ್ನೂ ವಿವರಿಸಿದೆ; ಏಕೆಂದರೆ ಮನುಷ್ಯನು ಇವುಗಳನ್ನು ಅಡಿಗಡಿಗೆ ಸ್ಮರಿಸುತ್ತಲೇ ಇದ್ದರೆ ಅವನಿಗೆ ಭಕ್ತಿಯುಂಟಾಗುತ್ತದೆ. ಮತ್ತು ಇರುವ ಭಕ್ತಿಯು ವೃದ್ಧಿಯಾಗುತ್ತದೆ. ಒಬ್ಬ ಮಹಾಪುರುಷನ ಮಹಾತ್ಮೆಯು ತಿಳಿದ ಮೇಲೆ ತಾನೇ ಮಿಕ್ಕವರಿಗೆ ಅವನಲ್ಲಿ ಗೌರವ ಭಕ್ತಿಗಳು ಉಂಟಾಗುತ್ತವೆ. ಭಗವಂತನ ವಿಭೂತಿಯ ಸಮೂಹಕ್ಕೂ ಅಥವ ಐಶ್ವರ್ಯ ಮತ್ತು ಕಲ್ಯಾಣ ಗುಣಗಳ ಸಮೂಹಕ್ಕೂ ಕೊನೆಯೇ ಇರುವುದಿಲ್ಲವೆಂದೂ. ಜಗತ್ತೆಲ್ಲಾ ಭಗವಂತನ ಶರೀರವಾಗಿ ಅವನ ರೂಪವಾಗಿರುವುದೆಂದೂ ಮತ್ತು ಅದರಲ್ಲಿ ನಡೆಯುತ್ತಿರುವ ವ್ಯಾಪಾರಗಳೆಲ್ಲವೂ ಅವನ ಪ್ರೇರೇಪಣೆಯ ಪ್ರಕಾರ ನಡೆಯುತ್ತದೆಂದೂ ಮುಂದೆ ವಿವರಿಸಿದೆ.

### ಭಕ್ತನಾದ ಜ್ಞಾನಿಯು ಮಾತ್ರ ಭಗವಂತನ ಮಹಾತ್ಮೆಯನ್ನು ತಿಳಿಯುತ್ತಾನೆ. (ಶ್ಲೋಕಗಳು ೧ ರಿಂದ ೧೧)

ಅರ್ಜುನನು ಭಗವಂತನ ಮಹಿಮೆಯನ್ನು ಕೇಳಿ ಸಂತೋಷಪಡುವುದಕ್ಕೂ, ಅವನಲ್ಲಿ ಭಕ್ತಿಯು ಹುಟ್ಟಿ ವೃದ್ಧಿ ಹೊಂದುವುದಕ್ಕೂ ಮತ್ತು ಅವನಿಗೆ ಶಾಶ್ವತವಾದ ಕಲ್ಯಾಣವನ್ನು ಉಂಟು

ಮಾಡುವುದಕ್ಕೂ ಶ್ರೀ ಕೃಷ್ಣನು ತನ್ನನ್ನು ತಂಬಾ ಪ್ರೀತಿಸುವ ಅರ್ಜುನನಿಗೆ ಭಗವಂತನಾದ ತನ್ನ ಮಹಿಮೆಯನ್ನು ಪ್ರಕಾಶ ಪಡಿಸುವಂಥಾ ಉತ್ತಮವಾದ ಉಪದೇಶವನ್ನು ಮಾಡುತ್ತಾನೆ. ಅದನ್ನು ಈಗ ನಾವೆಲ್ಲರೂ ಚಂಚಲ ಮನಸ್ಸಿಲ್ಲದೇ ಕೇಳಬೇಕು. (೧) ದೇವತೆಗಳ ಮತ್ತು ಮಹಋಷಿಗಳ ಸ್ವರೂಪ ಜ್ಞಾನ ಶಕ್ತಿಗಳಿಗೆ ಭಗವಂತನೇ ಕಾರಣನಾಗಿರುವುದರಿಂದ ಅವರುಗಳೂ ಕೂಡ ಭಗವಂತನ ಮಹಿಮೆಯನ್ನು ಸಾಕ್ಷಾತ್ತಾಗಿ ಮತ್ತು ಸಂಪೂರ್ಣವಾಗಿ ತಿಳಿಯಲಾರರು; ಏಕೆಂದರೆ ಒಬ್ಬನು ತನ್ನಿಂದ ಉಂಟಾದ ಕಾರ್ಯಗಳನ್ನು ತಿಳಿಯಬಲ್ಲನೇ ಹೊರತು ತನ್ನ ಇರುವಿಕೆ ಸ್ಥಿತಿಗಳಿಗೆ ಮಾತ್ರ ಕಾರಣವನ್ನು ತಿಳಿಯಲಾರನು. ಸಾಮಾನ್ಯ ಮನುಷ್ಯರುಗಳಿಗಿಂತ ಹೆಚ್ಚು ಶಕ್ತಿಗಳನ್ನು ಪಡೆದು ಇಂದ್ರಿಯಗಳಿಗೆ ಗೋಚರವಾಗದ ವಿಷಯಗಳನ್ನು ತಿಳಿದು ಕೊಳ್ಳಬಲ್ಲ ದೇವತೆಗಳೂ ಮತ್ತು ಋಷಿಗಳೂ ಭಗವಂತನ ಮಹಿಮೆಗಳನ್ನು ತಿಳಿಯಲು ಸಾಮರ್ಥ್ಯವನ್ನು ಪಡೆಯದೆ ಇರುವಾಗ ಬಹುಮಂದಿ ಮನುಷ್ಯರು ಹೇಗೆ ತಾನೇ ಭಗವಂತನ ಅಪರಿಮಿತವಾದ ಸ್ವರೂಪ, ರೂಪ, ನಾಮ, ಕರ್ಮಗಳನ್ನು ಯಥಾವತ್ತಾಗಿ ತಿಳಿಯಬಲ್ಲರು? (೨) ಹಾಗಾದರೆ ಮನುಷ್ಯರಲ್ಲಿ ಯಾರೂ ಭಗವಂತನ ಸ್ವರೂಪ, ರೂಪ, ವಿಭೂತಿ ಮತ್ತು ಐಶ್ವರ್ಯಗಳನ್ನು ಯಥಾವತ್ತಾಗಿ ತಿಳಿಯಲಾರರೆ? ಮೋಹ ವಿಲ್ಲದ ಜ್ಞಾನಿಯಾದ ಮನುಷ್ಯನು ಮಾತ್ರ ಭಗವಂತನ ಸ್ವರೂಪ, ರೂಪ, ವಿಭೂತಿ ಮತ್ತು ಐಶ್ವರ್ಯಗಳನ್ನು ಯಥಾ ವತ್ತಾಗಿ ತಿಳಿಯಬಲ್ಲನು; ಏಕೆಂದರೆ ಭಗವಂತನು ಆದಿ ಇಲ್ಲ ದವನು, ಜನ್ಮ ಇಲ್ಲದವನು ಮತ್ತು ಲೋಕಗಳಿಗೆಲ್ಲಾ ದೊಡ್ಡ ನಿಯಾಮಕನು ಎಂಬುದನ್ನು ಅವನು ತಿಳಿದಿರುವುದರಿಂದ ಎಲ್ಲಾ ಪಾಪಗಳಿಂದ ಬಿಡಲ್ಪಡುತ್ತಾನೆ. ತನ್ಮೂಲಕ ಅವನಲ್ಲಿ ಭಕ್ತಿಯು ತಾನಾಗಿಯೇ ವೃದ್ಧಿಯಾಗುತ್ತದೆ ಮತ್ತು ಅವನು ಭಗವಂತನ ಸ್ವರೂಪಾದಿಗಳನ್ನು ಯಥಾವತ್ತಾಗಿ ತಿಳಿಯುತ್ತಾನೆ. ಹೇಗೆ ತಿಳಿಯುತ್ತಾನೆ? ಭಗವಂತನಿಗೆ ಆದಿಯೇ ಇಲ್ಲದಿರುವುದರಿಂದ ಅವನು ಚೇತನಗಳ ಹಾಗೆ ಒಂದು ಕಾಲದಲ್ಲಿ ಹುಟ್ಟಿ ಮುಂದೆ ವಿಕಾರಗಳನ್ನು ಪಡೆಯುವುದಿಲ್ಲ. ಭಗವಂತನು ಅಜನಾದುದ ರಿಂದ ಅವನು ಅಚಿತ್ತಿನ ಭಾಗವಾದ ಶರೀರಗಳನ್ನು ಪಡೆದಿರುವ ಸಂಸಾರಿ ಚೇತನರುಗಳ ಹಾಗೆ ಜನ್ಮಗಳನ್ನು ಪಡೆಯುವುದಿಲ್ಲ. ಮತ್ತು ಒಂದು ಕಾಲದಲ್ಲಿ ಸಂಸಾರಿಗಳಾಗಿದ್ದು ಆ ಮೇಲೆ ಮುಕ್ತಿಯನ್ನು ಪಡೆದ ಮುಕ್ತಾತ್ಮರ ಹಾಗೆ ಯಾವುದೊಂದು ಕಾಲದಲ್ಲಿಯೂ ಪ್ರಕೃತಿ ಸಂಬಂಧವನ್ನು ಪಡೆದವನಲ್ಲ. ಇನ್ನೇನು, ಭಗವಂತನು ಲೋಕ ಮಹೇಶ್ವರನಾದುದರಿಂದ ಸಾಧಾರಣ ಲೋಕೇಶ್ವರರಾದ ಬ್ರಹ್ಮಾದಿ ದೇವತೆಗಳಿಗೂ ಈಶ್ವರನಾಗಿರುತ್ತಾನೆ. ಹೀಗೆ ಯಾವ ಮನುಷ್ಯನು ಭಗವಂತನು ಅಚೇತನಗಳಿಗಿಂತಲೂ, ಪ್ರಾಣಿಗಳಿಗಿಂತಲೂ, ಮನುಷ್ಯರಿ ಗಿಂತಲೂ, ಅಣಿಮಾದಿ ಐಶ್ವರ್ಯಗಳನ್ನು ಪಡೆದಿರುವ ಬ್ರಹ್ಮಾದಿ ದೇವತೆಗಳಿಗಿಂತಲೂ ಮತ್ತು ಮುಕ್ತಾತ್ಮರುಗಳಿಗಿಂತಲೂ ಬೇರೆ ಯಾದವನೆಂದೂ, ಅವರಿಗಿಂತ ಮೇಲಾದವನೆಂದೂ, ಅವರ ನ್ನೆಲ್ಲಾ ನಿಯಮಿಸುವ ಶಕ್ತಿಯನ್ನು ಪಡೆದಿರುವನೆಂತಲೂ, ಹೇಯಗುಣ ರಹಿತನೆಂದೂ ಮತ್ತು ಎಲ್ಲೆ ಇಲ್ಲದ ಕಲ್ಯಾಣ ಗುಣಗಳಿಂದ ಕೂಡಿರುವನೆಂದೂ ತಿಳಿಯುತ್ತಾನೆಯೋ ಅವನು ಮೋಹವಿಲ್ಲದ ಜ್ಞಾನಿಯಾಗುತ್ತಾನೆ. ಇಂಥಾ ಮೋಹವಿಲ್ಲದ ಜ್ಞಾನಿಯು ಭಗವಂತನನ್ನು ನಿರತಿಶಯ ಮಹಾತ್ಮನೆಂದು ತಿಳಿದು, ನಂಬಿ, ಅವನಲ್ಲಿ ಅತ್ಯಧಿಕವಾದ ಭಕ್ತಿಯನ್ನು ಪಡೆದು ಅವನನ್ನು ಸದಾ ಸ್ಮರಿಸುತ್ತಿರುವುದರಿಂದ ಅವನ ಹಿಂದಿನ ಪಾಪ ಗಳೆಲ್ಲವೂ ನಾಶವಾಗತ್ತವೆ ಮತ್ತು ಅವನು ಮುಂದೆ ಪಾಪ ಕಾರ್ಯಗಳನ್ನು ಮಾಡುವುದಿಲ್ಲ. ಆದುದರಿಂದ ಇಂಥಾ ಜ್ಞಾನಿಯು ಮುಕ್ತನಾಗುತ್ತಾನೆ. (೩)

ಮೋಹದಿಂದ ಬಿಡಲ್ಪಡುವ ಜ್ಞಾನಿಯಾದ ಭಕ್ತನು ಭಗ ವಂತನ ಐಶ್ವರ್ಯ, ವಿಭೂತಿ ಮತ್ತು ಕಲ್ಯಾಣ ಗುಣಗಳನು ವಿಧ ವಿಧವಾಗಿ ಈ ರೀತಿಯಲ್ಲಿ ಅನುಸಂಧಾನ ಮಾಡುತ್ತಲೇ ಇರುವನು. ಜಗತ್ತಿನಲ್ಲಿರುವ ಪ್ರಾಣಿಗಳ ಬುದ್ಧಿ, ಜ್ಞಾನ, ಅಸಂಮೋಹ, ಕ್ಷಮೆ, ಸತ್ಯ, ದಮವು, ಶಮವು, ಸುಖ ದುಃಖ ಗಳು, ಭಾವ ಅಭಾವಗಳು ಭಯಾಭಯಗಳು, ಅಹಿಂಸೆಯು, ಸಮತ್ವವು ತುಷ್ಟಿಯು, ತಪವು, ದಾನವು, ಯಶಸ್ಸು ಅಪ ಯಶಸ್ಸು ಇವೇ ಮೊದಲಾದ ಮನೋವೃತ್ತಿಗಳೆಲ್ಲವೂ ಭಗ ವಂತನ ಸಂಕಲ್ಪದಿಂದಲೇ ಹುಟ್ಟುತ್ತವೆ ಮತ್ತು ಅವನ ನಿಯಮಕ್ಕೆ ಒಳಪಟ್ಟಿವೆ. ಎಂದು ಜ್ಞಾನಿಯು ಅನುಸಂಧಾನ ಮಾಡುತ್ತಾನೆ. ಈ ಮನೋವೃತ್ತಿಗಳ ಸ್ವರೂಪಗಳನ್ನು ಹೇಗೆ ತಿಳಿಯುವನು? ವಿಷಯಗಳನ್ನು ನಿರೂಪಿಸಿ ತೀರ್ಮಾನಿಸುವ ಹಾಗೆ ಮನಸ್ಸಿನಲ್ಲಿರುವ ಸಾಮರ್ಥ್ಯವೇ ಬುದ್ಧಿಯು; ಚೇತನಾ ಚೇತನ ವಸ್ತುಗಳ ಭೇದವನ್ನು ಯಥಾರ್ಥವಾಗಿ ತಿಳಿಯುವದು ಜ್ಞಾನವು; ಚಿಪ್ಪಿಯನ್ನು ನೋಡಿದವನು ಮೊದಲು ಇದೇ ಬೆಳ್ಳಿ ಎಂದು ತಿಳಿದು ಭ್ರಮಿಸಿ ಆಮೇಲೆ ಇದು ಬೆಳ್ಳಿಯಲ್ಲ ಎಂದು ತಿಳಿದು ಭ್ರಾಂತಿಯನ್ನು ಬಿಟ್ಟು ಬಿಡುವಿಕೆಯು ಎಂಬ ಜ್ಞಾನವೇ ಅಸಮ್ಮೋಹವು; ಮನಸ್ಸಿನಲ್ಲಿ ಕಾಮ ಕ್ರೋಧಾದಿ ವಿಕಾರಗಳು ಉಂಟಾಗುವಂಥಾ ವೇಳೆಗಳಲ್ಲಿ ವಿಕಾರವನು ಹೊಂದದಿರುವಿಕೆಯೇ ಕ್ಷಮೆಯು; ತಾನು ಪ್ರತ್ಯಕ್ಷಾದಿ ಪ್ರಮಾಣ ಗಳಿಂದ ಕಂಡದ್ದನ್ನು ಕಂಡ ಹಾಗೆಯೇ ಮತ್ತು ಪ್ರಾಣಿಗಳಿಗೆ ಹಿತವಾಗುವ ಹಾಗೆ ಮಾತನಾಡುವುದೇ ಸತ್ಯವು; ಬಹಿರಿಂದ್ರಿಯ ಗಳನ್ನು ಅನರ್ಥವನ್ನು ಉಂಟುಮಾಡುವ ಶಬ್ದಾದಿ ವಿಷಯ

ಗಳಿಂದ ತಡೆಯುವದೇ ದಮವು ; ಅಂತಃಕರಣವನ್ನು ಅಂದರೆ
ಅಂತರಿಂದ್ರಿಯಗಳನ್ನು ಕೆಟ್ಟ ವಿಷಯಗಳಲ್ಲಿ ಹೋಗಗೊಡಿಸದೆ
ತಡೆಯುವುದೇ ಶಮವು ; ಮನುಷ್ಯನು ತನಗೆ ಇಷ್ಟವಾದವು
ಗಳನ್ನು ಅನುಭವಿಸುವುದೇ ಸುಖವು ; ಅವನು ತನಗೆ ಅನಿಷ್ಟ
ವಾದವುಗಳನ್ನು ಅನುಭವಿಸುವುದೇ ದುಃಖವು ; ಇಷ್ಟವಾದವು
ಗಳನ್ನು ಅನುಭವಿಸುವುದರಿಂದ ಮನಸ್ಸಿನಲ್ಲಿ ಉಂಟಾಗುವ
ಉತ್ಸಾಹ ಪ್ರವೃತ್ತಿಯೇ ಭಾವವು ; ಹಾಗೆಯೇ ಅನುಭವಿಸುವುದ
ರಿಂದ ಮನಸ್ಸಿನಲ್ಲಿ ಉಂಟಾಗುವ ದೈನ್ಯ ಸ್ಥಿತಿಯೇ ಅಭಾವವು ;
ಮುಂದೆ ದುಃಖವುಂಟಾಗುವುದಕ್ಕೆ ಕಾರಣವನ್ನು ಈಗ ನೋಡು
ವುದರಿಂದ ಉಂಟಾಗುವ ಒಂದು ವಿಧವಾದ ಮನಸ್ಸಿನ
ವೇದನೆಯೇ ಭಯವು ; ಇಂಥಾ ಭಯವಿಲ್ಲದಿರುವಿಕೆಯೇ
ಅಭಯವು; ಪರರ ದುಃಖಕ್ಕೆ ತಾನು ಕಾರಣವಾಗಿಲ್ಲದೆ ಇತರರಿಗೆ
ಯಾವ ವಿಧವಾದ ದುಃಖವನ್ನೂ ಉಂಟುಮಾಡದೇ ಇರುವಿ
ಕೆಯೇ ಅಹಿಂಸೆಯು ; ತನಗಾಗಲೀ, ತನ್ನ ಮಿತ್ರರಿಗಾಗಲೀ,
ತನ್ನ ಶತ್ರುಗಳಿಗಾಗಲೀ ಲಾಭ ಹಾನಿಗಳು ಪ್ರಾಪ್ತವಾದರೆ
ಒಂದೇ ವಿಧವಾದ ಮನಸ್ಸನ್ನು ಅಥವ ಬುದ್ಧಿಯನ್ನು ಹೊಂದಿರು
ವುದೇ ಸಮತ್ವವು ; ನಮ್ಮ ದೃಷ್ಟಿಗೆ ಗೋಚರವಾಗುವ ಪ್ರಾಣಿ
ಗಳೆಲ್ಲವೂ ನಿಜಸ್ವರೂಪದಲ್ಲಿ ಆತ್ಮವೆಂದು ತಿಳಿದು ನಂಬಿ
ಯಾರಲ್ಲಿಯೂ ದ್ವೇಶವನ್ನಾಗಲೀ, ಪ್ರೀತಿಯನ್ನಾಗಲೀ ಹೊಂದದೆ
ಸಂತೋಷದಿಂದ ಇರುವುದೇ ತುಷ್ಟಿಯು ; ಶಾಸ್ತ್ರಗಳ ವಿಧಿಗಳನ್ನು
ಅನುಸರಿಸಿ ಭೋಗಗಳನ್ನು ತ್ಯಜಿಸುವುದರಿಂದ ಶರೀರದಲ್ಲಿಯೂ
ಮನಸ್ಸಿನಲ್ಲಿಯೂ ಉಂಟಾಗುವ ಕ್ಲೇಶವೇ ತಪಸ್ಸು ; ತನಗೆ
ಭೋಗ್ಯವಾದ ವಸ್ತುವನ್ನು ಇತರರಿಗೆ ಅವರ ಸ್ವತ್ತಾಗಿ ಕೊಡುವು
ದಕ್ಕೆ ಅನುಗುಣವಾದ ಮನಸ್ಸಿನ ಪ್ರವೃತ್ತಿಯೇ ದಾನವು
ಗುಣವುಳ್ಳವನೆಂಬ ಪ್ರಸಿದ್ಧಿಯನ್ನು ಅಥವ ಕೀರ್ತಿಯನ್ನು ಪಡೆ
ಯಬೇಕೆಂಬ ಮನಸ್ಸಿನ ಪ್ರವೃತ್ತಿಯೇ ಯಶಸ್ಸು ; ಹಾಗೆಯೇ
ಒಳ್ಳೇಗುಣವನ್ನು ಹೊಂದದಿರುವ ಅಪಯಶಸ್ಸಿಗೆ ಅನುಗುಣವಾದ
ಮನಸ್ಸಿನ ವೃತ್ತಿಯೇ ಅಯಶಸ್ಸು ( ೪–೫ ) ಇಷ್ಟೇ ಅಲ್ಲ ;
ಸಮಸ್ತ ಪ್ರಾಣಿಗಳ ಸೃಷ್ಟಿ ಸ್ಥಿತಿಗಳನ್ನು ಉಂಟುಮಾಡುವುದೂ
ಕೂಡ ಭಗವಂತನ ಸಂಕಲ್ಪಕ್ಕೆ ಒಳಪಟ್ಟು ಅವನ ಆಧಾರ
ದಿಂದಲೇ ದೇವತಾದಿಗಳು ಎಲ್ಲಾ ಕಾರ್ಯಗಳನ್ನು ಮಾಡುತ್ತಾರೆ
ಎಂಬುದನ್ನು ಭಕ್ತನು ಹೀಗೆ ಅನುಸಂಧಾನ ಮಾಡುತ್ತಾನೆ.
“ ಕಳೆದ ಮನ್ವಂತರದಲ್ಲಿ ಪ್ರವಾಹ ರೂಪವಾಗಿ ನಿತ್ಯವಾಗಿರುವ
ಈ ಜಗತ್ತಿನ ಸೃಷ್ಟಿಗಾಗಿ ಬ್ರಹ್ಮನ ಮನಸ್ಸಿನಿಂದ ಭೃಗುವೇ
ಮೊದಲಾದ ಸಪ್ತಋಷಿಗಳೂ ಮತ್ತು ಈ ಜಗತ್ತನ್ನು ನಿತ್ಯವಾಗಿ
ಪಾಲನೆ ಮಾಡುವುದಕ್ಕಾಗಿ ಸಾವರ್ಣಿ ಕರೆಂಬ ನಾಲ್ಕು ಮನುಗಳೂ
ಉತ್ಪನ್ನರಾಗಿದ್ದಾರೆಂದು ಶಾಸ್ತ್ರಗಳು ಹೇಳುತ್ತವೆ. ಇವರ
ಸಂತಾನಗಳಿಂದ ತುಂಬಿದ ಈ ಲೋಕದ ಪ್ರಜೆಗಳು ಪ್ರಳಯ
ಕಾಲದಿಂದ ಹಿಡಿದು ಇಲ್ಲಿಯವರೆಗೆ ಪ್ರತಿಕ್ಷಣದಲ್ಲಿಯೂ ಸರ್ವದಾ
ತಮ್ಮ ಸಂತಾನಗಳನ್ನು ಅಂದರೆ ಮಕ್ಕಳುಗಳನ್ನು ಹುಟ್ಟಿಸು
ವವರೂ ಮತ್ತು ಪಾಲಿಸುವವರೂಸಹ ಆಗಿದ್ದಾರೆ. ಹೀಗೆ ಈ
ಜಗತ್ತಿನ ಸೃಷ್ಟಿ, ಸ್ಥಿತಿಗಳಿಗೆ ಮೂಲ ಕಾರಣರಾದ ಭೃಗುವೇ
ಮೊದಲಾದ ಸಪ್ತ ಋಷಿಗಳೂ ಮತ್ತು ಮನುಗಳೂಕೂಡ
ಭಗವಂತನ ಸಂಕಲ್ಪವನ್ನು ಅನುಸರಿಸಿ ನಡೆಯುವವ
ರಾಗಿದ್ದಾರೆ. (೬)

ಲೋಕದಲ್ಲಿರುವವರ ಉತ್ಪತ್ತಿಯೂ, ಸ್ಥಿತಿಯೂ,
ಪ್ರವೃತ್ತಿಯೂ ಭಗವಂತನ ಸಂಕಲ್ಪಕ್ಕೆ ಅಧೀನವಾಗಿರು
ವುದರಿಂದ ಇವೆಲ್ಲವೂ ಅವನ ಐಶ್ವರ್ಯವನ್ನೂ, ವಿಭೂತಿಯನ್ನೂ
ಮತ್ತು ಸಮಸ್ತ ಕಲ್ಯಾಣ ಗುಣಗಳಿಂದ ಕೂಡಿರುವಿಕೆಯನ್ನೂ
ತೋರಿಸುತ್ತವೆ. ಆದುದರಿಂದ ಯಾರು ಭಗವಂತನ ಈ ವಿಧ
ವಾದ ಐಶ್ವರ್ಯಗಳನ್ನೂ, ವಿಭೂತಿಯನ್ನೂ ಮತ್ತು ಕಲ್ಯಾಣ
ಗುಣಗಳನ್ನೂ ತಿಳಿಯುತ್ತಾರೆಯೋ ಅವರು ಎಷ್ಟು ವಿಘ್ನಗಳು
ಬಂದರೂ ಭಗವಂತನಲ್ಲಿ ಕದಲಿಸಲಾಗದಂತಹ ನಿಶ್ಚಲವಾದ
ಭಕ್ತಿಯನ್ನು ಹೊಂದಿದವರಾಗಿ ಬಾಳುತ್ತಾರೆ; ಇದರಲ್ಲಿ ಸಂಶಯ
ವಿಲ್ಲ. ಅಂದರೇನು, ಭಗವಂತನ ಐಶ್ವರ್ಯ, ವಿಭೂತಿ, ಕಲ್ಯಾಣ
ಗುಣಗಳನ್ನು ಯಾವನಾದರೂ ಅರಿತರೆ ಅದು ಅವನಲ್ಲಿ ಭಕ್ತಿ
ಯೋಗವನ್ನು ವೃದ್ಧಿಪಡಿಸುತ್ತದೆ. (೭) ಇಂಥಾ ಭಕ್ತಿಯೋಗ
ನಿಷ್ಠನು ಈ ರೀತಿಯಲ್ಲಿ ಸದಾ ಅನುಸಂಧಾನ ಮಾಡುತ್ತಲೇ
ಇರುವನು. “ ಚಿತ್ತು ಮತ್ತು ಅಚಿತ್ತುಗಳ ಸಮೂಹಗಳನ್ನು
ಒಳಗೊಂಡು ವಿಚಿತ್ರವಾಗಿರುವ ಈ ಲೋಕಗಳೆಲ್ಲಕ್ಕೂ
ಭಗವಂತನೇ ಉತ್ಪತ್ತಿ ಕಾರಣನು ; ಇವುಗಳೆಲ್ಲವೂ
ಅವನಿಂದಲೇ ಪ್ರವರ್ತಿಸುತ್ತವೆ. ಇವುಗಳೆಲ್ಲವೂ ಅವನ ಐಶ್ವರ್ಯ
ಗಳಾಗಿರುವುದರಿಂದ ಮತ್ತು ಅವನು ಸೌಂದರ್ಯವೇ ಮೊದಲಾದ
ಎಣಿಸಲಾರದಷ್ಟು ಕಲ್ಯಾಣ ಗುಣಗಳನ್ನು ಪಡೆದಿರು
ವುದರಿಂದಲೂ ಭಗವಂತನಿಗೆ ಸಮನಾದವರು ಯಾರೂ ಇಲ್ಲ. ”
ಹೀಗೆ ಕಲ್ಯಾಣ ಗುಣಗಳಿಗೆ ನಿಧಿಯಾಗಿರುವ ಭಗವಂತನನ್ನು
ಅನುಸಂಧಾನ ಮಾಡುವುದರಿಂದ ಅವರು ಭಗವಂತನಲ್ಲಿ
ಆಶೆಯುಳ್ಳವರಾಗಿ ಅವನಲ್ಲೇ ತನ್ಮಯರಾಗಿ ಅವನನ್ನು ಸದಾ
ಭಕ್ತಿಯಿಂದ ಭಜಿಸುತ್ತಾರೆ. (೮) ಈ ಭಕ್ತರು ಭಗವಂತ
ನನ್ನು ಹೇಗೆ ಭಜಿಸುತ್ತಾರೆ ? ಅವರು ತಮ್ಮ ಮನಸ್ಸನ್ನು
ಭಗವಂತನಲ್ಲೇ ಇಟ್ಟವರಾಗಿ, ಅವನನ್ನು ಅಗಲಿಸಿದರೆ
ಧರಿಸಲಾರದ ಮನಸ್ಸುಳ್ಳವರಾಗಿ ತಮ್ಮ ಪ್ರಾಣವನ್ನೂಕೂಡ
ಅವನ ಅಧೀನ ಮಾಡುತ್ತಾರೆ. ಇಂತಹ ಜ್ಞಾನಿಗಳಾದ
ಭಕ್ತರು ತಮ್ಮ ತಮ್ಮ ಅನುಭವಕ್ಕೆ ಬಂದಿರುವ ಭಗವಂತನ
ಗುಣಗಳನ್ನು ಪರಸ್ಪರವಾಗಿ ಅಂದರೆ ಒಬ್ಬರಿಗೊಬ್ಬರು ಹೇಳಿ

ಕೊಳ್ಳುತ್ತಲೇ ಇರುವರು. ಭಗವಂತನ ದಿವ್ಯವೂ, ರಮಣೀಯವೂ ಆದ ಕರ್ಮಗಳನ್ನೂಕೂಡ 'ಪರಸ್ಪರ ವರ್ಣಿಸಿಕೊಳ್ಳುತ್ತಾ ಸಂತೋಷಗೊಳ್ಳುತ್ತಾರೆ ಮತ್ತು ಅದರಲ್ಲೇ ರಮಿಸುತ್ತಾರೆ. ಅವರಿಗೆ ಭಗವಂತನಿಗೆ ಸಂಬಂಧಪಡದ ಬೇರೆ ಯಾವ ವಿಷಯದಲ್ಲಿ ಮಾತನಾಡುವುದಕ್ಕೂ, ಬೇರೆ ಯಾವ ವಿಷಯವನ್ನು ಕೇಳುವುದಕ್ಕೂ ಮನಸ್ಸಿಲ್ಲ. ಹೀಗೆ ಭಗವಂತನ ವಿಷಯವಾಗಿ ಮಾತನಾಡುತ್ತಿರುವುದೇ ಅವರಿಗೆ ಇಂಪಾಗಿಯೂ, ಸ್ವಯಂ ಪ್ರಯೋಜನವಾಗಿಯೂ ಇರುವುದು ; ಹಾಗೆಯೇ ಇವುಗಳನ್ನು ಕೇಳುವವರಿಗೂ ಅದು ಇಂಪಾಗಿದ್ದು ಅತ್ಯಂತ ಆನಂದವನ್ನು ಉಂಟುಮಾಡುತ್ತದೆ. (೯) ಈ ವಿಧವಾಗಿ ಜ್ಞಾನಿಗಳಾದ ಭಕ್ತರು ಭಗವಂತನ ಸಂಬಂಧವನ್ನು ಆಶಿಸುತ್ತಾ, ಅವನ ಸಂಬಂಧವನ್ನು ಹೊಂದಿ, ಅವನನ್ನು ಭಕ್ತಿಯಿಂದ ಭಜನೆ ಮಾಡುತ್ತಲೇ ಇರುವುದರಿಂದ ಅವರುಗಳಿಗೆ ಭಗವಂತನು ಪ್ರೀತಿಯಿಂದ "ಬುದ್ಧಿಯೋಗ" ವನ್ನು ಕೊಡುತ್ತಾನೆ ಈ ಬುದ್ಧಿಯೋಗದ ಸ್ವರೂಪವೇನು ? ಅದು ಭಕ್ತಿ ರೂಪವಾಗಿ ಇರುವ ಪಕ್ವವಾದ ಜ್ಞಾನ ವಿಶೇಷವು. ಭಗವಂತನ ಕೃಪೆಯಿಂದ ಬುದ್ಧಿಯೋಗವನ್ನು ಪಡೆದ ಜ್ಞಾನಿಗಳು ಭಗವಂತನನ್ನೇ ಹೊಂದುತ್ತಾರೆ, ಅಂದರೆ ಭಗವಂತನನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸುತ್ತಾರೆ. (೧೦) ಹೀಗೆ ಬುದ್ಧಿಯೋಗವನ್ನು ಕೊಡುವುದೂ ಅಲ್ಲದೆ ಭಗವಂತನು ಅವರ ಅಜ್ಞಾನಗಳೆಲ್ಲವನ್ನೂ ನಾಶಮಾಡುತ್ತಾನೆ. ಅದು ಹೇಗೆ ? ಭಗವಂತನು ತನ್ನ ಅನುಗ್ರಹದಿಂದಲೇ ಅವರ ಮನಸ್ಸಿನಲ್ಲಿ ಇದ್ದು ತನ್ನ ಅನುಭವವನ್ನು ಅಂದರೆ ಕಲ್ಯಾಣ ಗುಣಗಳನ್ನೆಲ್ಲಾ ಅವರಿಗೆ ಪ್ರಕಾಶಪಡಿಸುತ್ತಾನೆ. ಆಗ ಅವರು ಭಗವಂತನನ್ನು ತಿಳಿಯುವುದು ಎಂಬ ಪ್ರಕಾಶವಾದ ದೀಪದಿಂದ ಕೂಡಿದವರಾಗುತ್ತಾರೆ. ಇಂಥಾ ಜ್ಞಾನದೀಪ ಉಂಟಾದಮೇಲೆಯೂಕೂಡ ಅವರಿಗೆ ಬೇರೆ ವಿಷಯಗಳನ್ನು ಕಂಡರೆ ಪ್ರಾಚೀನ ಕರ್ಮದಿಂದ ಉಂಟಾದ ಅಂದರೆ ಹಿಂದಿನ ಅಭ್ಯಾಸಗಳ ಬಲದಿಂದ ಪುನಃ ಮನಸ್ಸಿನಲ್ಲಿ ಕಳವಳ ಉಂಟಾಗುತ್ತದೆ. ಆಗ ಭಗವಂತನು ತಾನೇ ಅವರ ಮನಸ್ಸಿನ ಕಳವಳವೆಂಬ ಕತ್ತಲೆಯನ್ನು ಹೋಗಲಾಡಿಸುತ್ತಾನೆ. (೧೧)

### ಅರ್ಜುನನ ಪ್ರಾರ್ಥನೆ (ಶ್ಲೋಕಗಳು ೧೨ ರಿಂದ ೧೮)

ಇಲ್ಲಿಯವರೆಗೆ ಅರ್ಜುನನು ಭಗವಂತನು ಸಕಲ ವಸ್ತುಗಳಿಗಿಂತಲೂ ಬೇರೆಯವನಾಗಿ ಶ್ರೇಷ್ಠನಾಗಿರುವುದನ್ನೂ, ಅವನ ಐಶ್ವರ್ಯದ ಮೇಲ್ಮೆಯನ್ನೂ, ಅವನ ವಿಭೂತಿಯ ವಿವಿಧತ್ವವನ್ನೂ ಅವನ ಅನಂತ ಕಲ್ಯಾಣ ಗುಣಗಳನ್ನೂ ಕಿವಿಗೆ ಇಂಪಾಗಿರುವ ಹಾಗೆ ಸಂಗ್ರಹವಾಗಿ ಕೇಳಿದನು. ಪುನಃ ಅದನ್ನೇ ಇನ್ನೂ ವಿಸ್ತಾರವಾಗಿ ಕೇಳಿ ಸಂತೋಷಪಡಬೇಕೆಂದು ಆಶೆಪಟ್ಟು ಶ್ರೀ ಕೃಷ್ಣನನ್ನು ಸಂಬೋಧಿಸಿ ಪ್ರಾರ್ಥಿಸುತ್ತಾನೆ. "ಅಹೋ ಸ್ವಾಮಿಯೇ ! ಪರಬ್ರಹ್ಮ ಅಥವ ಜಗತ್ಕಾರಣನಾದ ಬ್ರಹ್ಮ ಎಂದೂ, ಪರಂಧಾಮ ಅಥವ ಪರಮ ತೇಜಸ್ಸು ಎಂದೂ ಪರಮಂ ಪವಿತ್ರಂ ಅಥವ ಅತ್ಯಂತ ಪವಿತ್ರವಾದ ವಸ್ತುವು ಎಂದೂ ಶ್ರುತಿಗಳು ಯಾರನ್ನು ಸ್ತುತಿ ಮಾಡುತ್ತವೆಯೋ ಆ ಭಗವಂತನು ನೀನೇ ಅಲ್ಲವೆ ? ನೀನು ಶಾಶ್ವತನಾದ ದಿವ್ಯ ಪುರುಷನು, ಆಧಿ ದೇವನು, ಜನನ ಅಥವ ಹುಟ್ಟುವಿಕೆ ಇಲ್ಲದವನು, ವಿಭುವಾಗಿ ವ್ಯಾಪಿಸಿರುವವನು ಮತ್ತು ಎಲ್ಲರಿಗೂ ಸ್ವಾಮಿಯಾದ ಭಗವಂತನು ! ಏಕೆಂದರೆ ದೇವಋಷಿಯಾದ ನಾರದರೂ, ಅಸಿತರೂ, ದೇವಲರೂ, ವ್ಯಾಸರೂ ಇವರೇ ಮೊದಲಾದ ಋಷಿಗಳೆಲ್ಲರೂ ನಿನ್ನನ್ನು "ಶಾಶ್ವತಂ ಪುರುಷಂ, ದಿವ್ಯಂ, ಆಧಿ ದೇವಂ, ಅಜಂ, ವಿಭುಂ" ಎಂದು ಸ್ತೋತ್ರಮಾಡಿದ್ದಾರೆ. ಇಷ್ಟೇ ಅಲ್ಲ ; ನೀನೂ ಕೂಡ ನನಗೆ ನಿನ್ನ ಸ್ವರೂಪವು ಹೀಗೆಯೇ ಇದೆ ಎಂದು ಉಪದೇಶ ಮಾಡಿದ್ದೀಯೆ. (೧೨-೧೩) ಮೇಲೆ ವಿವರಿಸಿರುವ ಭಗವಂತನ ಕಲ್ಯಾಣ ಗುಣಗಳೂ ಮತು ಐಶ್ವರ್ಯಗಳು ಇವೆಲ್ಲವೂ ಉತ್ಪ್ರೇಕ್ಷೆಯಲ್ಲ ; ಅವುಗಳೆಲ್ಲವೂ ನಿಶ್ಚಯವಾದವುಗಳೇ ಆಗಿವೆ. ಜ್ಞಾನ, ಶಕ್ತಿ, ಬಲ, ಐಶ್ವರ್ಯ ವೀರ್ಯ ತೇಜಸ್ಸು ಇವುಗಳಿಗೆಲ್ಲಾ ನಿಧಿಯಾದ ಭಗವಂತನೇ ! ನಿನ್ನ ವ್ಯಕ್ತಿಯನ್ನು ಅಂದರೆ ವೈಭವದ ಪ್ರಕಾರವನ್ನೂ ದೇವತೆಗಳಾಗಲೀ, ರಾಕ್ಷಸರಾಗಲೀ ಒಬ್ಬರೂ ಅರಿಯಲಾರರು ; ಏಕೆಂದರೆ ಅವರುಗಳ ಜ್ಞಾನವು ಇಷ್ಟೇ ಎಂಬ ಅಳತೆಗೆ ಒಳಪಟ್ಟಿರುವುದರಿಂದ ಅವರು ವಿಭುವಾದ ಅಂದರೆ ಎಲ್ಲೆಲ್ಲಿಯೂ ಅನಂತವಾಗಿರುವ ನಿನ್ನ ಸ್ವರೂಪವನ್ನು ಅರಿಯಲಾರರು. (೧೪) ಪುರುಷೋತ್ತಮನೇ ! ನೀನು ಸಕಲ ಪ್ರಾಣಿಗಳನ್ನು ಉಂಟುಮಾಡುವ ಕಾರಣವಸ್ತುವು ; ಸಕಲ ಭೂತಗಳನ್ನೂ ಆಳುವಂಥಾವನು ; ನೀನು ಸೌಂದರ್ಯವೇ ಮೊದಲಾದ ಕಲ್ಯಾಣ ಗುಣಗಳನ್ನು ಪಡೆದಿರುವುದರಿಂದ ದೇವತೆಗಳು, ಮನುಷ್ಯರು, ಮೃಗಗಳು, ಪಕ್ಷಿಗಳು ಎಲ್ಲರನ್ನೂ ನಿನ್ನ ದಿವ್ಯ ಗುಣಗಳಿಂದ ಮೀರಿಸುವವನಾಗಿ ಅವರೆಲ್ಲರಿಗೂ ದೇವನಾಗಿದ್ದೀಯೆ. ಓ ಜಗದೀಶ ! ನಿನ್ನ ದೊಡ್ಡಸ್ತಿಕೆಯನ್ನು ಮತ್ತು ಸತ್ಯಸ್ವರೂಪವನ್ನೂ ನೀನೇ ತಿಳಿದಿದ್ದೀಯೆ ಹೊರತು, ಬಾಕಿಯವರಿಂದ ಅದು ತಿಳಿಯಲಾಗುವುದಿಲ್ಲ. (೧೫) ಆದುದರಿಂದ ಭಗವಂತನಾದ ನಿನಗೆ ಸ್ವಂತವಾದ ವಿಭೂತಿಗಳನ್ನೂ ಅಂದರೆ ಐಶ್ವರ್ಯಗಳನ್ನೂ ಸಲ್ಪವೂ ಉಳಿಯದಹಾಗೆ ನೀನೇ ನಿನ್ನ ಬಾಯಿಂದ ನನಗೆ ಹೇಳಲೇಬೇಕು. ನೀನು

(Re-printed from the Mysore Vysya Patrika, November 1961)

M. V. P. Press Mysore

# ಭಗವದ್ಗೀತಾ ಹತ್ತನೆಯ ಅಧ್ಯಾಯ

ನೀನು ಈ ಲೋಕಗಳನ್ನು ಯಾವ ಐಶ್ವರ್ಯಗಳಿಂದ ಕೂಡಿದವನಾಗಿ, ಇವುಗಳೆಲ್ಲವನ್ನು ವ್ಯಾಪಿಸಿಕೊಂಡು ಆಳುತ್ತೀಯೋ ಅವುಗಳೆಲ್ಲವನ್ನೂ ನನಗೆ ಹೇಳಬೇಕೆಂದು ಪ್ರಾರ್ಥಿಸುತ್ತೇನೆ. (೧೬) ನಾನು ಈಗ ಭಕ್ತಿಯೋಗ ನಿಷ್ಠನಾಗಿದ್ದೇನೆ. ; ಆದುದರಿಂದ ನಾನು ಯಾವಾಗಲು ನಿನ್ನನ್ನು ಚಿಂತಿಸಿ ಧ್ಯಾನಮಾಡಿ ಹೇಗೆ ತಿಳಿದುಕೊಳ್ಳಬಲ್ಲೆನು ? ನನ್ನಿಂದ ನೀನು ಯಾವ ಯಾವ ಪದಾರ್ಥಗಳಲ್ಲಿ ಯೋಚಿಸಲ್ಪಡತಕ್ಕವನು ಆಗಿದ್ದೀಯೆ ? ಅಂದರೆ ಹಿಂದೆಹೇಳಿದ ಬುದ್ಧಿ, ಜ್ಞಾನ ಮುಂತಾದ ಭಾವಗಳಿಂದಲೂ ಅಧಿಕವಾಗಿ ಸಕಲಗುಣ ಪರಿಪೂರ್ಣ ನನ್ನಾಗಿ ಇನ್ನೂ ಯಾವ ಯಾವ ಭಾಗಗಳಲ್ಲಿರುವವನಾಗಿ ಚಿಂತಿಸಬೇಕು ? ಅದನ್ನೂ ದಯವಿಟ್ಟು ವಿವರಿಸು. (೧೭) ಇಲ್ಲಿಯವರೆಗೆ ನೀನು ಸಂಗ್ರಹವಾಗಿ ನಿನ್ನಮಹಿಮೆಯನ್ನು ನನಗೆ ತಿಳಿಸಿದ್ದೀಯೋ ; ಆದಾಗ್ಯೂ ನನಗೆ ಇನ್ನೂ ತೃಪ್ತಿಯುಂಟಾಗಿಲ್ಲ. ನಾನು ಇನ್ನೂ ಹೆಚ್ಚಾಗಿ ಕೇಳಿ ಸಂತೋಷಪಡಬೇಕು. ನಿನ್ನಮಾತು ನನಗೆ ಅಮೃತಕ್ಕೆ ಸದೃಶವಾಗಿದೆ. ಆದುದರಿಂದ ಹಿಂದೆಹೇಳಿದ ನಿನ್ನ ಸೃಷ್ಟಿಸುವ ಸಾಮರ್ಥ್ಯ ಮುಂತಾದ ಯೋಗವನ್ನೂ, ಐಶ್ವರ್ಯವನ್ನೂ, ಆಳುವಿಕೆಯನ್ನೂ ತಿರುಗಿ ವಿಸ್ತಾರವಾಗಿ ನನಗೆ ಹೇಳಲೇಬೇಕು. (೧೮).

### ಕೆಲವು ಶುಭವಾದ ಮತ್ತು ಪ್ರಸಿದ್ಧವಾದ ವಿಭೂತಿಗಳು ಭಗವಂತನೇ ಎಂಬವರ್ಣನೆ
### ( ಶ್ಲೋಕಗಳು ೧೯ ರಿಂದ ೩೮ )

ಭಗವಂತನ ವಿಭೂತಿಗಳು ಅಂದರೆ 'ಅವನ ಆಳ್ವಿಕೆಗೆ ಒಳಪಟ್ಟ ಐಶ್ವರ್ಯಗಳು ಅಸಂಖ್ಯಾತಗಳಾಗಿದ್ದುದರಿಂದ ಅವುಗಳನ್ನು ವಿಸ್ತಾರವಾಗಿ ಹೇಳುವುದೂ ಮತ್ತು ಕೇಳುವುದೂ ಸಾಧ್ಯವಲ್ಲ ; ಎಷ್ಟೆಷ್ಟು ಹೇಳಿದರೂ ಆಶ್ಚರ್ಯವನ್ನುಂಟುಮಾಡುತ್ತಲೇ ಇರುತ್ತದೆ ಆದ್ದರಿಂದ ಶ್ರೀ ಕೃಷ್ಣನು ಅರ್ಜುನನ ಮೇಲಿನಪ್ರಶ್ನೆಗಳಿಗೆ ಉತ್ತರವಾಗಿ ಭಗವಂತನಾದ ತನ್ನ ಅನಂತ ವಿಭೂತಿಗಳಲ್ಲಿ ಶುಭವಾಗಿಯೂ ಮತ್ತು ಪ್ರಸಿದ್ಧವಾಗಿಯೂ ಇರುವವುಗಳನು ಮಾತ್ರ ಮುಂದೆ ಹೀಗೆ ತಾನೇ ವಿವರಿಸುತ್ತಾನೆ. " ಅರ್ಜುನನೇ ! ಸಂತೋಷವನ್ನುಂಟುಮಾಡುವ ಮತ್ತು ಆಶ್ಚರ್ಯಕರವಾದ, ಮುಖ್ಯವಾಗಿರುವ, ಮಂಗಳಕರವಾದ, ಭಗವಂತನ ನಿಯಮಕ್ಕೆ ಒಳಪಟ್ಟಿರುವ ಐಶ್ವರ್ಯಗಳಿಗೂ ನನಗೂ ಇರುವ ನಿಕಟ ಸಂಬಂಧವನ್ನು ನಿನಗೆ ಈಗ ಹೇಳುತ್ತೇನೆ ; ಈ ನನ್ನ ಗುಣ ವಿಭೂತಿಯ ವಿಸ್ತಾರಕ್ಕೆಕೊನೆಯಿಲ್ಲವು.(೧೯) ಭಗವಂತನು ಆತ್ಮನಾಗಿ ಎಲ್ಲಾ ಪ್ರಾಣಿಗಳ ಹೃದಯದಲ್ಲಿ ಇರುವನು. ಮತ್ತು ಅವನು ಪ್ರಾಣಿಗಳಿಗೆ ಉತ್ಪತ್ತಿಕಾರಣನು ; ಸ್ಥಿತಿಕಾರಣನು ; ಮತ್ತು ನಾಶಕಾರಣನು. ಅಂದರೇನು. ಅವನ ಯೋಗದಿಂದ ಸಕಲ ಪ್ರಾಣಿಗಳನ್ನೂ ನಿಯಮಿಸುವುದು ಮತ್ತು ಆಳುವುದು ಮಾತ್ರವಲ್ಲದೆ, ಅವನು ಪ್ರಾಣಿಗಳಲ್ಲೆಲ್ಲಾ ನಿಂತು ಸೃಷ್ಟಿಸುವ ಸ್ವಭಾವ ಕಾಪಾಡುವ ಸ್ವಭಾವ, ನಾಶಮಾಡುವ ಸ್ವಭಾವ ಈ ಮೂರು ವಿಧವಾದ ಸ್ವಭಾವಗಳಿಂದ ಕೂಡಿದವನಾಗಿ ಈ ಕಾರ್ಯಗಳನ್ನು ನಡೆಸುತ್ತಾ ತನಗೆ ಶರೀರವಾಗಿರುವ ಸಕಲ ಪ್ರಾಣಿಗಳ ಹೃದಯದಲ್ಲಿಯೂ ಅಂತರಾತ್ಮನಾಗಿರುತ್ತಾನೆ ; ಆದುದರಿಂದಲೇ ಅವನು ಪ್ರಾಣಿಗಳ ಆದಿಯೂ, ಮಧ್ಯವೂ, ಅಂತ್ಯವೂ ಆಗಿರುತ್ತಾನೆ. (೨೦) ಹೀಗೆ ಭಗವಂತನು ಚೇತನಾ ಚೇತನ ಪದಾರ್ಥಗಳಲ್ಲಿ ಆತ್ಮನಾಗಿರುವುದರಿಂದ ಮತ್ತು ಅವು ಅವನ ಆಳ್ವಿಕೆಗೆ ಒಳಪಟ್ಟಿರುವುದರಿಂದ ಆಯಾವಸ್ತುಗಳ ಹೆಸರುಗಳನ್ನು ಹೇಳಿದ ಮಾತ್ರಕ್ಕೆ ನಿಜವಾಗಿ ಅವನ್ನನ್ನೇ ಹೇಳಿದಹಾಗೆ ಆಗುತ್ತದೆ. ಅದು ಹೇಗೆಂದರೆ—ದೇವತೆಗಳು, ಮನುಷ್ಯರು, ಪಕ್ಷಿಗಳು, ವೃಕ್ಷಗಳು, ಇತ್ಯಾದಿ ಶಬ್ದಗಳು ಆಯಾ ಶರೀರಗಳನ್ನು ಭೋದಿಸುತ್ತಾ ಆಯಾ ಶರೀಗಗಳಲ್ಲಿರುವ ಆತ್ಮರುಗಳನ್ನು ಬೋಧಿಸುವುದರಲ್ಲಿ ಪರ್ಯವಸಾನಗೊಳ್ಳುತ್ತವೆ. ಹಾಗೆಯೆ ಭಗವಂತನು ಅವನ ಎಲ್ಲಾ ವಿಭೂತಿಗಳಿಗೂ ಆತ್ಮನಾಗಿರುವುದರಿಂದ ಸರ್ವಭೂತಗಳನ್ನು ಭೋದಿಸುವ ಶಬ್ದಗಳು ಅವುಗಳಿಗೆ ಅನ್ವಯಿಸುತ್ತವೆ). ಅವುಗಳಲ್ಲಿ ಕೆಲವು ಮುಖ್ಯವಾದವುಗಳನ್ನು ಈಗ ನಿನಗೆ ವಿವರಿಸುತ್ತೇನೆ ಕೇಳು. ಹನ್ನೆರಡು ಮಂದಿ ಆದಿತ್ಯರಲ್ಲಿ ಹನ್ನೆರಡನೆಯವನಾಗಿ ಎಲ್ಲರಿಗಿಂತಲೂ ಶ್ರೇಷ್ಠನಾದ ವಿಷ್ಣುವೆಂದು ಹೆಸರುಳ್ಳ ಆದಿತ್ಯನು ಭಗವಂತನು (ನಾನು) ಮರುತ್ತುಗಳಲ್ಲಿ ಶ್ರೇಷ್ಠನಾದ ಮರೀಚಿಯು ಭಗವಂತನು (ನಾನು) ! ಪ್ರಕಾಶವನ್ನುಂಟುಮಾಡತಕ್ಕ ವಸ್ತುಗಳೊಳಗೆ ಹೆಚ್ಚಾದ ಕಿರಣಗಳುಳ್ಳ ಸೂರ್ಯನು ಭಗವಂತನು (ನಾನು) ! ನಕ್ಷತ್ರಗಳ ಪತಿಯಾದ ಚಂದ್ರನು ಭಗವಂತನು (ನಾನು) (೨೧) ಋಕ್, ಯಜು, ಸಾಮ, ಅಥರ್ವಣ ಎಂಬ ವೇದಗಳಲ್ಲಿ ಉತ್ತಮವಾದ ಸಾಮವೇದವು ಭಗವಂತನೇ (ನಾನೇ) ! ಹನ್ನೊಂದು ಇಂದ್ರಿಯಗಳೊಳಗೆ ಉತ್ತಮವಾದ ಮನ ಇಂದ್ರಿಯವು ಭಗವಂತನು (ನಾನು) ! ಪ್ರಾಣಿಗಳೆಲ್ಲದರಲ್ಲಿಯೂ ಇರುವ ಬುದ್ಧಿ ಅಥವ ಅರಿವಿಕೆಯು ಭಗವಂತನು (ನಾನು) ಆಗಿದ್ದಾನೆ. (೨೨) ರುದ್ರರುಗಳು ಹನ್ನೊಂದು ಮಂದಿಯಲ್ಲಿ

ಶಂಕರನು ಭಗವಂತನು (ನಾನು) ! ಯಕ್ಷರಾಕ್ಷಸರುಗಳಲ್ಲಿ ಕುಬೇರನು ಭಗವಂತನು (ನಾನು) ! ಅಷ್ಟವಸುಗಳಲ್ಲಿ ಪಾವಕನು ಭಗವಂತನು (ನಾನು) ! ಶಿಖರಗಳಿಂದ ಶೋಭಿಸುತ್ತಿರುವ ಪರ್ವತಗಳಲ್ಲಿ ಮೇರು-ಪರ್ವತವು ಭಗವಂತನು (ನಾನು) ! (೨೩) ಪುರೋಹಿತರರೊಳಗೆ ಮುಖ್ಯನಾದ ಬೃಹಸ್ಪತಿಯು ಭಗವಂತನು (ನಾನು) ! ಸೇನಾಪತಿಗಳೊಳಗೆ ಸ್ಕಂಧನು ಭಗವಂತನು (ನಾನು) ಮರೀಚಿ ಮುಂತಾದ ಋಷಿಗಳೊಳಗೆ ಭೃಗುಋಷಿಯು ಭಗವಂತನು (ನಾನು) ! ವಸ್ತುಗಳನ್ನು ನಿರ್ದೇಶಿಸಿ ಹೇಳುವ ಮಾತು! ಗಳಲ್ಲಿ ಪ್ರಣವವೆಂಬ ಒಂದು ಅಕ್ಷರವು ಭಗವಂತನು (ನಾನು) ! ಯಜ್ಞಗಳಲ್ಲಿ ಶ್ರೇಷ್ಠವಾದ ಜಪ ಯಜ್ಞವು ಭಗವಂತನು (ನಾನು) ! ಸಮಸ್ತ ಪರ್ವತಗಳಲ್ಲಿ ಹಿಮಾಲಯಾಪರ್ವತವು ಭಗವಂತನು (ನಾನು) ! ಸಮಸ್ತ ವೃಕ್ಷಗಳಲ್ಲಿ ಪೂಜ್ಯವಾದ ಅಶ್ವತ್ಥವೃಕ್ಷವು ಭಗವಂತನು (ನಾನು) ! ದೇವಋಷಿಗಳೊಳಗೆ ಪರಮ ವಿಷ್ಣುಭಕ್ತನಾದ ನಾರದನು ಭಗವಂತನು (ನಾನು) ! ದೇವಗಾಯಕರಾದ ಗಂಧರ್ವರಲ್ಲಿ ಚಿತ್ರರಥನು ಭಗವಂತನು (ನಾನು) ! ಯೋಗನಿಷ್ಠರಾದ ಸಿದ್ಧಪುರುಷರುಗಳಲ್ಲಿ ಕಪಿಲ ಮುನಿಯು ಭಗವಂತನು (ನಾನು—೨೬) ! ಕುದುರೆಗಳೊಳಗೆ, ಕ್ಷೀರಸಮುದ್ರದಲ್ಲಿ ಹುಟ್ಟಿದ ಉಚ್ಚೈಶ್ರವ ಎಂಬ ಇಂದ್ರನ ಕುದುರೆಯು ಭಗವಂತನು (ನಾನು) ! ದಿಗ್ಗಜ ಅಥವ ಆನೆ ಗಳೊಳಗೆ ಐರಾವತವು ಭಗವಂತನು (ನಾನು) ! ಮನುಷ್ಯ ರೊಳಗೆ ರಾಜನು ಭಗವಂತನು (ನಾನು) ! ಸಾಧಾರಣವಾದ ಆಯುಧಗಳೊಳಗೆ ವಜ್ರಾಯುಧವು ಭಗವಂತನು (ನಾನು) ಪ್ರಜೆಯನ್ನು ಹುಟ್ಟಿಸುವುದಕ್ಕೆ ಕಾರಣನಾದ ಮನ್ಮಥನು ಭಗವಂತನು (ನಾನು) ! ಒಂದುತಲೆ ಹಾವುಗಳೊಳಗೆ ವಾಸುಕಿಯು ಭಗವಂತನು (ನಾನು) ! (೨೮) ಅನೇಕ ತಲೆಗಳುಳ್ಳ ಹಾವುಗಳಲ್ಲಿ ಆದಿಶೇಷನು ಭಗವಂತನು (ನಾನು) ! ಜಲದಲ್ಲಿರುವ ಜಂತುಗಳಲ್ಲಿ ರಾಜನಾದ ವರುಣನು ಭಗವಂತನ (ನಾನು) ! ಪಿತೃಗಳೊಳಗೆ ಅರ್ಯಮಾ ಎಂಬುವನು ಭಗವಂತನು (ನಾನು) ! ದಂಡಿಸುವವರೊಳಗೆ ವೈವಸ್ವತನೆಂಬ ಯಮನು ಭಗವಂತನು (ನಾನು) ! (೨೯) ದೈತ್ಯರುಗಳಲ್ಲಿ ಪ್ರಹ್ಲಾದನು ಭಗವಂತನು (ನಾನು) ! ಇತರರಿಗೆ ಕೇಡು ಎಣಿಸುವವರಲ್ಲಿ ಮೃತ್ಯುವು ಭಗವಂತನು (ನಾನು) ! ಮೃಗಗಳೊಳಗೆ ಸಿಂಹವು, ಭಗವಂತನು (ನಾನು) ! ಪಕ್ಷಿಗಳೊಳಗೆ ಗರುಡನು ಭಗವಂತನು (ನಾನು) ! (೩೦) ಸಂಚರಿಸುವುದೇ ಸ್ವಭಾವವುಳ್ಳವುಗಳಲ್ಲಿ ವಾಯುವು ಭಗವಂತನು (ನಾನು) ! ಅಸ್ತ್ರಶಸ್ತ್ರಗಳಲ್ಲಿ ಸಮರ್ಥ ರಾದವರಲ್ಲಿ ರಾಮನು ಭಗವಂತನು (ನಾನು) ! ಮೀನುಗಳೊಳಗೆ ತಿಮಿಂಗಿಲ ಅಥವ ಮೊಸಳೆಯು ಭಗವಂತನು (ನಾನು) ! ನದಿಗಳೊಳಗೆ ಗಂಗಾನದಿಯು ಭಗವಂತನು (ನಾನು) ! (೩೧) ಸೃಷ್ಟಿಸಲ್ಪಡುವ ಪದಾರ್ಥಗಳ ಆದಿಯೂ, ಮಧ್ಯವೂ, ಅಂತವೂ ಭಗವಂತನೇ (ನಾನು) ! ಅಂದರೇನು, ಸಕಲ ಪ್ರಾಣಿಗಳನ್ನೂ ಅಲ್ಲಲ್ಲಿ ಸೃಷ್ಟಿಸುವವನೂ, ಹಾಗೆಯೇ ಅಲ್ಲಲ್ಲಿ ಪರಿಪಾಲಿಸು ವವನೂ ಮತ್ತು ನಾಶಮಾಡುವವನೂ ಭಗವಂತನೇ (ನಾನೇ) ಆಗಿದ್ದಾನೆ. ಶ್ರೇಯಸ್ಸಾಧನವಾದ ವಿದ್ಯೆಗಳೊಳಗೆ ಪರಮ ಶ್ರೇಯಸ್ಸಾಧನ ಭೂತವಾದ ಆಧ್ಯಾತ್ಮವಿದ್ಯೆಯು ಭಗವಂತನು (ನಾನು) ! ಜಲ್ಪ, ವಿತಂಡ ಮುಂತಾದ ವಾದ ಮಾಡುವವರಲ್ಲಿ ತತ್ವ ನಿರ್ಣಯವನ್ನು ಮಾಡಲು ಪ್ರಾರಂಭಿಸಿದ ವಾದವು ಭಗವಂತನು (ನಾನು) ! (೩೨) ಅನೇಕ ಅಕ್ಷರಗಳಲ್ಲಿ ಎಲ್ಲಾ ಅಕ್ಷರಗಳಿಗೂ ಆದಿಕಾರಣವಾದ “ ಅಕಾರವು ” ಭಗವಂತನು (ನಾನು) ! ಸಮಾಸಗಳೊಳಗೆ ದ್ವಂದ್ವಸಮಾಸವು ಭಗವಂತನು (ನಾನು) ! ಕಲಾಮುಹೂರ್ತವೇ ಮುಂತಾದ ನಾಶವಿಲ್ಲದ ಕಾಲವೂ ಭಗವಂತನೇ (ನಾನೇ) ! ಸಕಲ ಪ್ರಾಣಿಗಳನ್ನೂ ಸೃಷ್ಟಿಸುವಂತಹ ನಾಲ್ಕು ಮುಖವುಳ್ಳ ಬ್ರಹ್ಮನೂ ಭಗವಂತನೇ (ನಾನೇ) ! (೩೩) ಸಕಲಪ್ರಾಣಿಗಳನ್ನೂ ಸಂಹರಿಸುವ ಮೃತ್ಯುವೂ ಭಗವಂತನೇ (ನಾನೇ)! ಇನ್ನೂ ಉಂಟಾಗುತ್ತಿರುವ ಪದಾರ್ಥಗಳಿಗೆಲ್ಲಾ ಉತ್ಪತ್ತಿಕರ್ಮವೂ ಭಗವಂತನೇ (ನಾನೇ) ! ಹೆಂಗಸರುಗಳೊಳಗೆ ಲಕ್ಷ್ಮಿಯು ಭಗವಂತನೇ (ನಾನೇ) ! ಕೀರ್ತಿಯು ಭಗವಂತನೇ (ನಾನೇ) ! ವಾಕ್ಕೂ ಭಗವಂತನೇ (ನಾನೇ) ! ಸ್ಮೃತಿಯೂ ಭಗವಂತನೇ (ನಾನೇ) ! ಬುದ್ಧಿಯೂ ಭಗವಂತನೇ (ನಾನೇ) ! ಧೈರ್ಯವೂ ಭಗವಂತನೇ (ನಾನೇ) ! ಕ್ಷಮೆಯೂ ಭಗವಂತನೇ (ನಾನೇ) (೩೪) ಸಾಮಗಳೊಳಗೆ ಭಗವಂತನು (ನಾನು) ದೊಡ್ಡ ಸಾಮವು ! ಛಂದಸ್ಸುಗಳೊಳಗೆ ಗಾಯತ್ರಿಯು ಭಗವಂತನು (ನಾನು) ! ತಿಂಗಳುಗಳಲ್ಲಿ ಮಾರ್ಗ ಶೀರ್ಷವು ಭಗವಂತನು (ನಾನು) ! ಋತುಗಳಲ್ಲಿ ಹೂವುಗಳನ್ನು ಬಿಡುವ ವಸಂತಋತುವು ಭಗವಂತನು (ನಾನು) ! (೩೫) ವಂಚನೆಮಾಡುವವರೊಳಗೆ ಜೂಜಾಡತಕ್ಕ ವ್ಯಾಪಾರವು ಭಗವಂತನು (ನಾನು) ! ತೇಜಸ್ವಿಗಳಲ್ಲಿರುವ ತೇಜಸ್ಸು ಭಗವಂತನು (ನಾನು) ! ಜಯಶೀಲರ ಜಯವು ಭಗವಂತನು (ನಾನು) ! ಕೆಲಸಮಾಡುವವರಲ್ಲಿ ಕೆಲಸವು ಭಗವಂತನು (ನಾನು) ! ಮಹಾಮನಸ್ಸುಳ್ಳವರಲ್ಲಿ ಸಾತ್ವಿಕ ಮನಸ್ಸು ಭಗವಂತನು (ನಾನು) ! (೩೬) ವೃಷ್ಣಿವಂಶದವರಲ್ಲಿ ವಾಸುದೇವನ ಮಗನು ಭಗವಂತನು (ನಾನು) ! ಪಾಂಡವರು ಗಳಲ್ಲಿ ಅರ್ಜುನನು ಭಗವಂತನು (ನಾನು) ! ಸತ್ಯಸ್ವರೂಪವನ್ನು ಮನನಮಾಡುವರಲ್ಲಿ ವ್ಯಾಸಮುನಿಯು ಭಗವಂತನು (ನಾನು) ! ಕವಿಗಳಲ್ಲಿ ಉಶನಾ ಎಂಬ ಕವಿಯು ಭಗವಂತನು (ನಾನು) ! (೩೭) ಆಜ್ಞೆಯನ್ನು ಉಲ್ಲಂಘಿಸಿದವರಿಗೆ ದಂಡಿಸುವ ವಿಷಯ ದಲ್ಲಿ ದಂಡನೆಯು ಭಗವಂತನು (ನಾನು) ! ಜಯವನ್ನು

ಅಪೇಕ್ಷಿಸುವವರಲ್ಲಿ ಜಯಿಸುವುದಕ್ಕೆ ಉಪಾಯವಾದ ನೀತಿಯು ಭಗವಂತನು (ನಾನು) ! ಮುಚ್ಚಲ್ಪಡಬೇಕಾದ ವಿಷಯಗಳಲ್ಲಿ ಮೌನವು ಭಗವಂತನು (ನಾನು) ! ಹಾಗೆಯೇ ಜ್ಞಾನವಂತರೊಳಗಿರುವ ತತ್ವಜ್ಞಾನವು ಭಗವಂತನು (ನಾನು) (೩೮).

**ಇವೆಲ್ಲವೂ ಭಗವಂತನು (ನಾನು) ಎಂಬುದರ ತತ್ವಾರ್ಥವೇನು ? (ಶ್ಲೋಕಗಳು ೩೯ ರಿಂದ ೪೨)**

ಶ್ರೀ ಕೃಷ್ಣನು ಭಗವಂತನ (ತನ್ನ) ವಿಭೂತಿಯೋಗದ ಉಪದೇಶವನ್ನು ಮುಂದುವರಿಸುತ್ತಾನೆ. ಅರ್ಜುನಾ ! ಸಕಲ ಭೂತಗಳಿಗೆ ಬೀಜವು ಭಗವತಂನು (ನಾನು) ! ಅಂದರೇನು, ಭಗವಂತನು ಕಾಣಲ್ಪಡುವ ಮತ್ತು ಕಾಣಲ್ಪಡದಿರುವ ಎರಡು ವಿಧವಾದ ಪದಾರ್ಥಗಳನ್ನು ಉತ್ಪತ್ತಿಮಾಡುತ್ತಾನೆ. ಸ್ಥಾವರ ಜಂಗಮಗಳಾದ ಭೂತಗಳೊಳಗೆ ಅವನು ಆತ್ಮನಾಗಿ ಇಲ್ಲದೆ ಇರುವ ವಸ್ತುವು ಒಂದೂ ಇಲ್ಲ. ಎಲ್ಲಾ ಪದಾರ್ಥಗಳೂ ಎಲ್ಲಾ ನೆಲೆಗಳಲ್ಲೂ ಅಂತರಾತ್ಮನೊಂದಿಗೆ ಕೂಡಿರುತ್ತವೆ. ಎಲ್ಲಾ ವಸ್ತುಗಳೂ, ಮುಖ್ಯವಾಗಿ ಅವುಗಳಲ್ಲಿ ಶ್ರೇಷ್ಠವಾದವುಗಳು ಭಗವತ್ ಸ್ವರೂಪವೆಂದೂ ಅಥವ ಭಗವಂತನೇ ಎಂದು ಇಲ್ಲಿಯವರೆಗೆ ಹೇಳಿದ್ದಕ್ಕೆ ಕಾರಣವು ಅವುಗಳಿಗೆಲ್ಲಾ ಅವನು ಅಂತರಾತ್ಮನಾಗಿರುವಿಕೆಯೇ ಎಂದು ತಿಳಿ (೩೯) ಭಗವಂತನ ದಿವ್ಯಗಳಾದ, ಕಲ್ಯಾಣಮಯಗಳಾದ ಈ ವಿಭೂತಿಗಳಿಗೆ ಅಥವ ಅವನ ನಿಯಾಮ್ಯ ವಸ್ತುಗಳಿಗೆ ಅಂದರೆ ಐಶ್ವರ್ಯಗಳಿಗೆ ಕೊನೆಯು ಇಲ್ಲವು ! ಹೀಗೆ ಇರುವಾಗ ಈಗ ಕೆಲವು ಉದ್ದೇಶಗಳನ್ನು ಮಾತ್ರ ಪ್ರಾಧಾನ್ಯವಾಗಿ ಇಟ್ಟು ಆ ವಿಸ್ತಾರವಾದ ವಿಭೂತಿಯು ಸಂಕ್ಷೇಪವಾಗಿ ನನ್ನಿಂದ ವಿವರಿಸಲ್ಪಟ್ಟಿತು (೪೦) ಒಟ್ಟಿನಲ್ಲಿ ತಾತ್ಪರ್ಯವೇನು ? ನಿಯಾಮ್ಯವಾಗಿರುವ ಅಥವ ಆಳಲ್ಪಡುವ ಸ್ವಭಾವದಿಂದ ಕೂಡಿದ್ದಾಗಿರುವ, ಕಾಂತಿಯಿಂದ ಕೂಡಿರುವ, ಧನ ಧಾನ್ಯದಿಂದ ಕೂಡಿರುವ, ಅಭಿವೃದ್ಧಿ ಹೊಂದುತ್ತಿರುವ ಮತ್ತು ಒಳ್ಳೆಯ ಕಾರ್ಯಕ್ಕೆ ಸ್ಥಾನವಾಗಿರುವ ಯಾವ ಯಾವುದುಂಟೋ ಆ ಭೂತಗಳೆಲ್ಲವೂ ಭಗವಂತನ ಚಿಂತಿಸಲು ಅಸಾಧ್ಯವಾದ ನಿಯಮನ ,ಸಾಮರ್ಥ್ಯ ಅಥವ ಆಳುವಿಕೆ ಎಂಬ ಶಕ್ತಿ ವಿಶೇಷದ ಅಲ್ಪಭಾಗದಿಂದ ಉಂಟಾದುದನ್ನಾಗಿ ತಿಳಿದುಕೋ. (೪೧) ಇಷ್ಟುದೂರ ಹೇಳಬೇಕಾದದ್ದೇನು ? ಒಂದೇಮಾತಿನಲ್ಲಿ ಹೇಳಬಹುದು. ಕಾರಣ ಸ್ಥಿತಿಯಲ್ಲಿಯೂ, ಕಾರ್ಯಸ್ಥಿತಿಯಲ್ಲಿಯೂ ಇರುವ ಅಥವ ಸೂಕ್ಷ್ಮವಾಗಿಯೂ, ಸ್ಥೂಲವಾಗಿಯೂ ಇರುವ ಪದಾರ್ಥಗಳಿಂದ ಕೂಡಿದ ಈ ಒಟ್ಟು ಜಗತ್ತೂ, ಅದರ ಕಟ್ಟಳೆಗಳೂ ಮತ್ತು ಪ್ರವೃತ್ತಿಗಳೂ ಎಲ್ಲವೂ ಭಗವಂತನ ಸಂಕಲ್ಪವನ್ನು ಸ್ವಲ್ಪವೂ ಮೀರಲಾರವು ಮತ್ತು ಆ ಮಹಾಪುರುಷನ ಮಹಿಮೆಯ ಸ್ವಲ್ಪ ಅಂಶದಿಂದ ಮಾತ್ರ ವ್ಯಾಪಿಸಲ್ಪಟ್ಟಿವೆ ಅಥವ ಧರಿಸಲ್ಪಟ್ಟಿವೆ ಎಂದು ತಿಳಿ. (೪೨)

# ಭಗವದ್ಗೀತಾ ಹನ್ನೊಂದನೆಯ ಅಧ್ಯಾಯ

## ಭಗವಂತನ ವಿಶ್ವರೂಪ ದರ್ಶನ

ಹತ್ತನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಮುಖ್ಯವಾಗಿ ಈ ವಿಷಯಗಳನ್ನು ಉಪದೇಶಮಾಡಿದನು :— (1) ಭಗವಂತನು ತನ್ನ ಅಸಾಧಾರಣವಾದ ಕಲ್ಯಾಣಗುಣಗಳಿಂದ ಕೂಡಿರುವುದರಿಂದಲೂ ಮತ್ತು ಅವನು ಸಕಲ ವಸ್ತುಗಳಿಗೂ ಆತ್ಮನಾಗಿರುವ ಸ್ವಭಾವವನ್ನು ಪಡೆದಿರುವುದರಿಂದಲೂ ಅವನು ಎಡೆಬಿಡದೆ ಸಕಲ ವಸ್ತುಗಳ ಸಂಬಂಧವನ್ನು ಹೊಂದಿದಾಗ್ಯೂ ಅವುಗಳಿಂದ ಬೇರೆಯಾಗಿರುವನು. (2) ಆದುದರಿಂದ ಅವನನ್ನು ಬಿಟ್ಟು ಅವನ ನಿಯಮನಕ್ಕೆ ಒಳಪಟ್ಟ ಸ್ವಭಾವವನ್ನು ಪಡೆದಿರುವ ಬಾಕಿಯಾದ ಜಗತ್ತು ಮತ್ತು ಅದರಲ್ಲಿರುವ ವಸ್ತುಗಳೆಲ್ಲವೂ ಭಗವಂತನ ಶರೀರವಾಗಿವೆ. (3) ಹೀಗೆ ಮನುಷ್ಯನು ತಿಳಿದರೆ ಅವನಲ್ಲಿ ಭಕ್ತಿಯೋಗವು ನೆಲೆಗೊಳ್ಳುತ್ತದೆ ಮತ್ತು ಅವನ ಹೃದಯದಲ್ಲಿ ಭಕ್ತಿಯು ಬೆಳೆಯುತ್ತದೆ. (4) ಹೀಗೆ ತನ್ನ ಶರೀರವಾದ ವಿವಿಧ ಅನಂತ ವಿಚಿತ್ರ ವಸ್ತುಗಳಿಂದ ಕೂಡಿದ ಜಗತ್ತಿಗೆ ಅಂತರ್ಯಾಮಿಯಾಗಿ ಇರುವಂಥಾ ಒಟ್ಟು ವಿಶಿಷ್ಟ ಸ್ವರೂಪವೇ ಅಂದರೆ ಅವನೂ ಮತ್ತು ಅವನ ಶರೀರವೂ ಒಟ್ಟಿಗೆ ಸೇರಿರುವ ಅವನ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಸ್ವರೂಪವೇ ಭಗವಂತನ ವಿಶ್ವರೂಪವು. ಈ ರೀತಿಯಲ್ಲಿ ಅರ್ಜುನನು ಒಂದು ವಿಧವಾಗಿ ಶ್ರೀಕೃಷ್ಣನಿಂದ ಭಗವಂತನ ವಿಶ್ವರೂಪದ ವರ್ಣನೆಯನ್ನು ಕಿವಿಯಿಂದ ಕೇಳಿದನು. ಆದರೆ ಅದನ್ನು ಕೇಳಿದ ಮಾತ್ರಕ್ಕೆ ಅವನಿಗೆ ತೃಪ್ತಿಯುಂಟಾಗಲಿಲ್ಲ. ಆದುದರಿಂದ ಈಗ ಅವನು ಭಗವಂತನ ವಿಶ್ವರೂಪದ ದರ್ಶನವನ್ನೇ ಆಶೆಪಟ್ಟವನಾಗಿ ಆ ವಿಶ್ವರೂಪದ ಅನುಭವವನ್ನೇ ಅಥವ ದರ್ಶನವನ್ನೇ ತನಗೆ ಉಂಟುಮಾಡಬೇಕೆಂದು ಶ್ರೀ ಕೃಷ್ಣನನ್ನು ಪ್ರಾರ್ಥಿಸುತ್ತಾನೆ.

### ಅರ್ಜುನನು ಶ್ರೀ ಕೃಷ್ಣನನ್ನು ವಿಶ್ವರೂಪವನ್ನು ತೋರಿಸೆಂದು ಪ್ರಾರ್ಥಿಸುತ್ತಾನೆ (ಶ್ಲೋಕಗಳು ೧ ರಿಂದ ೪)

ಅರ್ಜುನನು ಶ್ರೀಕೃಷ್ಣನನ್ನ ಕುರಿತು ಹೀಗೆ ಪ್ರಾರ್ಥಿಸುತ್ತಾನೆ. "ಕೃಷ್ಣಾ ! ನಿನ್ನ ಉಪದೇಶಕ್ಕೆ ಮೊದಲು ಅನೇಕ ಮನುಷ್ಯರ ಹಾಗೆ ನಾನುಕೂಡ "ದೆಹವೇ ಆತ್ಮನು" ಎಂಬ ಭ್ರಮೆಯನ್ನು ಪಡೆದಿದ್ದೆನು. ಆದರೆ ನೀನು ನನ್ನಲ್ಲಿ ಕೃಪೆಮಾಡಿ ಆತ್ಮಸ್ವರೂಪದ ಅನೇಕ ಗುಟ್ಟಾದ ತತ್ವಾರ್ಥಗಳನ್ನು ಆರಂಭದಲ್ಲಿಯೇ ನನಗೆ ಉಪದೇಶಮಾಡಿದ್ದೀಯೇ, ಈ ಉಪದೇಶಗಳನ್ನು ಕೇಳಿದ್ದರಿಂದ ಈಗ ಆತ್ಮವಿಷಯದಲ್ಲಿ ನನಗೆ ಉಂಟಾಗಿದ್ದ ಸಂದೇಹಗಳೆಲ್ಲವೂ ತೊಲಗಿರುವುದು (೧) ಸ್ವಾಮಿ, ಕಮಲದಹಾಗೆ ಕಣ್ಣುಳ್ಳವನೆ ! ನೀನು ತರುವಾಯ (ಅಂದರೆ ಏಳನೆಯ ಅಧ್ಯಾಯದಿಂದ ಆರಂಭಿಸಿ ಹತ್ತನೆಯ ಅಧ್ಯಾಯದ ಕೊನೆಯವರೆವಿಗೆ) ಭಗವಂತನನ್ನುಬಿಟ್ಟು ಬಾಕಿ ಪದಾರ್ಥಗಳೂ ಪ್ರಾಣಿಗಳೂ ಎಲ್ಲವೂ ಅವನಿಂದಲೇ ಉಂಟಾಗಿ, ಅವನಿಂದಲೇ ಪಾಲಿಸಲ್ಪಟ್ಟು ಅವನಲ್ಲಿಯೇ ಲಯಿಸುತ್ತವೆ ಎಂಬ ವಿಷಯವನ್ನು ವಿಸ್ತಾರವಾಗಿ ಉಪದೇಶ ಮಾಡಿದ್ದೀಯೇ ಇಷ್ಟೇ ಅಲ್ಲ ; ಭಗವಂತನು ಸರ್ವಕಾಲದಲ್ಲೂ ಚೇತನಾಚೇತನರೂಪವಾದ ಸಕಲ ವಸ್ತುಗಳಿಗೂ ಆಧಾರವಾಗಿರುವ ಸ್ವಭಾವವನ್ನು , ಅವನು ಸರ್ವೋತ್ಕೃಷ್ಟನಾಗಿರುವನೆಂಬುದನ್ನು ಮತ್ತು ಚಿಂತಿಸಿ ಮಾಡುವ ಅಥವ ಚಿಂತಿಸದೆ ನಡೆಯುವ ಕಣ್ಣುರೆಪ್ಪೆಗಳಾಡುವುದೇ ಮೊದಲಾದ ಪ್ರವೃತ್ತಿಗಳೂಕೂಡ ಅವನ ಅಧೀನವಾಗಿರುವ ವಿಷಯವನ್ನು ನನಗೆ ತಿಳಿಸಿದ್ದೀಯೆ. ಈರೀತಿಯಲ್ಲಿ ಭಗವಂತನ ಸರ್ವವಿಧವಾದ ಮಹಿಮೆಯನ್ನು ಕಿವಿಯಲ್ಲಿಕೇಳಿ, ಮನಸ್ಸಿನಲ್ಲಿ ಅನುಮಾನಿಸಿ ತಿಳಿದಿರುವೆನು (೨) ಹೇ ಪರಮೇಶ್ವರನೇ ! ಆಶ್ರಿತರುಗಳಲ್ಲಿ ಹೆಚ್ಚಾದ ಪ್ರೀತಿಯನ್ನು ತೋರಿಸುವ ಪುರುಷೋತ್ತಮನೇ ನೀನು ನಿನ್ನ ವಿಭೂತಿಯನ್ನೂ, ಐಶ್ವರ್ಯಗಳನ್ನೂ ಮತ್ತು ಕಲ್ಯಾಣ ಗುಣಗಳನ್ನೂ ವರ್ಣಿಸಿರುವುದೆಲ್ಲವೂ ಸತ್ಯವೆಂದು ದೃಢವಾಗಿ ನಂಬಿದ್ದೇನೆ. ಆದಾಗ್ಯೂ ನನಗೆ ತೃಪ್ತಿಯಿಲ್ಲ ; ಏಕೆಂದರೆ ನಿನ್ನ ವಿಭೂತಿ ಐಶ್ವರ್ಯಾದಿಗಳಿಂದ ಕೂಡಿದ ವಿಶ್ವರೂಪವನ್ನೇ ನಾನು ಸಾಕ್ಷಾತ್ಕರಿಸಬೇಕು. ಆದುದರಿಂದ ಜಗತ್ತಿನಲ್ಲಿರುವ ಎಲ್ಲಾ ಚಿದಚಿತ್ಪದಾರ್ಥಗಳನ್ನು ಸೃಷ್ಟಿಸುವ, ಪರಿಪಾಲಿಸುವ, ಆಳುವ, ಧರಿಸುವ ಮತ್ತು ನಾಶಮಾಡುವ ನಿನ್ನ ವಿಶಿಷ್ಟವಾದ ವಿಶ್ವರೂಪವನ್ನೂ, ಆ ದಿವ್ಯರೂಪದಲ್ಲಿ ನೀನು ಹೇಗೆ ಅನಂತ ಕಲ್ಯಾಣ ಗುಣಗಳಿಗೆ ವಾಸಸ್ಥಾನವಾಗಿರುವೆ ಎಂಬುದನ್ನೂ ಮತ್ತು ಎಲ್ಲವುಗಳಿಗಿಂತಲೂ ಉತ್ತಮನಾಗಿದ್ದು ಅವುಗಳಿಗಿಂತ ಬೇರೆಯಾಗಿರುವಿಕೆಯನ್ನೂ ನಾನು ಎಚ್ಚರದಲ್ಲಿ ಅನುಭವಿಸುವಹಾಗೆ ಸಾಕ್ಷಾತ್ಕಾರವನ್ನೇ ಮಾಡಬೇಕೆಂದು ಆಶೆಪಡುತ್ತೇನೆ. (೩) ಓ ಜಗದೀಶ್ವರನೇ ! ಮತ್ತೊಬ್ಬರಿಗೂ ಲಭಿಸಲಾರದಷ್ಟು ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸು ಮೊದಲಾದವುಗಳಿಗೆ ನಿಧಿಯಾದವನೇ ! ಎಲ್ಲರಿಗೂ ಸ್ವಾಮಿಯಾದವನೇ ! ಸಕಲವನ್ನೂ ಸೃಷ್ಟಿಸುವ, ಆಳುವ, ಧರಿಸುವ, ನಾಶಮಾಡುವ, ನಿನ್ನ ವಿಶಿಷ್ಟ ಸ್ವರೂಪ ಅಥವ ವಿಶ್ವರೂಪವನ್ನೂ ದರ್ಶನ ಮಾಡುವುದು ನನ್ನಿಂದ ಸಾಧ್ಯವೆಂದು ನಿನಗೆ ಅಭಿಪ್ರಾಯವಿದ್ದರೆ ಹೀಗೆ ಗುಣವಿಭೂತಿ ಐಶ್ವರ್ಯಗಳಿಂದ ಕೂಡಿರುವ ಮತ್ತು ನಾಶವಿಲ್ಲದ ನಿನ್ನದಿವ್ಯಸ್ವರೂಪವನ್ನು ನಿನ್ನದಿವ್ಯಸಂಕಲ್ಪದಿಂದ ನನಗೆತೋರಿಸು. ಅಂದರೆ ನಿನ್ನನ್ನೂ ಸಂಪೂರ್ಣವಾಗಿ ನಾನು ಕಂಡು ಅನುಭವಿಸುವಹಾಗೆ ಕೃಪೆಯನ್ನು ದಯಪಾಲಿಸಬೇಕೆಂದು ಪಾರ್ಥಿಸುತ್ತೇನೆ. (೪)

### ಶ್ರೀ ಕೃಷ್ಣನು ಅರ್ಜುನನಿಗೆ ತನ್ನ ವಿಶ್ವರೂಪವನ್ನು ತೋರಿಸುತ್ತಾನೆ (ಶ್ಲೋಕಗಳು ೫ ರಿಂದ ೮)

ಹೀಗೆ ಅರ್ಜುನನು ಕುತೂಹಲದಿಂದ ಕೂಡಿದವನಾಗಿ, ಹರ್ಷದಿಂದ ಗದ್ಗದವಾದ ಸ್ವರದಿಂದ ಕೂಡಿದವನಾಗಿ ವಿಶ್ವರೂಪವನ್ನು ತೋರಿಸೆಂದು ಶ್ರೀಕೃಷ್ಣನನ್ನು ಪ್ರಾರ್ಥಿಸಲು ಭಗವಂತನು (ತನ್ನ) ವಿಶ್ವರೂಪವನ್ನು ತೋರಿಸುತ್ತಾ ಈರೀತಿ ಹೇಳಿದನು :– "ಅಹೋ ಪ್ರಾರ್ಥನೇ ! ಎಲ್ಲಾದಕ್ಕೂ ಆಧಾರವಾದ ನನ್ನ ವಿಶ್ವರೂಪವನ್ನು ತೋರಿಸುತ್ತೇನೆ ! ನೀನು ಚೆನ್ನಾಗಿ ನೋಡು. ನೂರು, ಸಾವಿರ ಸಂಖ್ಯೆಗಳಾಗಿ ಹಲವು ಬಗೆಯ ವರ್ಣಗಳಿಂದಲೂ, ಹಲವುಬಗೆಯ ಆಕಾರಗಳಿಂದಲೂ ಇರುವಂಥಾ ಅಪ್ರಾಕೃತವಾದ ಅಂದರೆ ದಿವ್ಯಗಳಾದ ನನ್ನ ರೂಪಗಳನ್ನು ಚೆನ್ನಾಗಿ ನೋಡು ! (೫) ನನ್ನ ವಿಭುವಾದ ಒಂದೇರೂಪದಲ್ಲಿ ಹನ್ನೆರಡು ಆದಿತ್ಯರುಗಳನ್ನು , ಅಷ್ಟವಸುಗಳನ್ನು , ಹನ್ನೊಂದು ರುದ್ರರುಗಳನ್ನು, ಎರಡು ಅಶ್ವಿನೀದೇವತೆಗಳನ್ನೂ , ನಲವತ್ತೊಂಭತ್ತು ಮರುತ್ತುಗಳನ್ನು, ಹೇಗೆಯೇ ಈ ಜಗತ್ತಿನಲ್ಲಿ ಪ್ರತ್ಯಕ್ಷವಾಗಿಕಾಣುವ ಮತ್ತು ಶಾಸ್ತ್ರಗಳಿಂದ ತಿಳಿಯಲ್ಪಡುವ ಯಾವ ಯಾವ ವಸ್ತುಗಳುಂಟೋ ಅವೆಲ್ಲವನ್ನು ಮತ್ತು ಸಕಲ ಲೋಕಗಳಲ್ಲಿಯು ಮತ್ತು ಸಮಸ್ತ ಶಾಸ್ತ್ರಗಳಲ್ಲಿಯೂ ಹಿಂದೆ ಕಾಣಲ್ಪಡದಿರುವ ಅನೇಕ ಇತರ ಆಶ್ಚರ್ಯಗಳನ್ನು ನೋಡು. (೬) ಈ ನನ್ನ ಒಂದುಶರೀರದಲ್ಲಿ, ಅದರಲ್ಲೂ ಅದರ ಭಾಗದಲ್ಲಿ ಚೇತನಾಚೇತನರೂಪವಾದ ಲೋಕವನ್ನೆಲ್ಲಾ ಚೆನ್ನಾಗಿ ನೋಡು! ಇನ್ನೂ ಏನನ್ನಾದರೂ ನೋಡಬೇಕೆಂದು ಆಶೆಪಟ್ಟರೂ ಅದನ್ನೂ ನೋಡು !

(Re–printed from the Mysore Vysya Patrika, December 1961)

# ಭಗವದ್ಗೀತಾ ಹನ್ನೊಂದನೆಯ ಅಧ್ಯಾಯ

ಆದರೆ ಈಗ ನೀನು ಹೊಂದಿರುವ ಮಾಂಸದ ಕಣ್ಣುಗಳಿಂದ ನೀನು ಆಸೆಪಡುವ ಭಗವಂತನ ಸೂಕ್ಷ್ಮವಾದ, ಅಪರಿಮಿತವಾದ ವಿಶ್ವರೂಪದ ಅನಂತ ಪ್ರಕಾರಗಳನ್ನು ನೋಡಲಾರೆ ; ಏಕೆಂದರೆ ಅವನ ವಿಶ್ವರೂಪ ಶರೀರದಲ್ಲಿ ಕಾಣುವ ಲೋಕವು ಸಕಲ ವಸ್ತುಗಳಿಗಿಂತಲೂ ಬೇರೆಯಾದುದಾಗಿಯೂ, ಅಳತೆ ಇಲ್ಲದಿರುವುದಾಗಿಯೂ ಇರುವುದು. ಮಾಂಸದಿಂದ ಮಾಡಲ್ಪಟ್ಟಿರುವ ಈ ನಿನ್ನ ಕಣ್ಣುಗಳು ಚಿಕ್ಕ ಪರಿಣಾಮ ಉಳ್ಳದಾಗಿರುವುದರಿಂದ ಅವುಗಳ ಶಕ್ತಿಗೆ ಒಳಪಟ್ಟ ಚಿಕ್ಕ ವಸ್ತುಗಳನ್ನು ನೋಡಬಲ್ಲವೇ ವಿನಹ ನಾನು ನನ್ನ ವಿಶ್ವರೂಪ ಶರೀರದಲ್ಲಿ ತೋರಿಸುವ ಲೋಕಗಳೆಲ್ಲವನ್ನೂ ನೋಡಿ ನಿನಗೆ ತಿಳುವಳಿಕೆಯನ್ನು ಉಂಟುಮಾಡಲಾರವು. ಆದ್ದರಿಂದ ಈಗ ನಿನಗೆ ನಾನು ದಿವ್ಯವಾದ ಅಂದರೆ ಅಪ್ರಾಕೃತವಾದ ಕಣ್ಣುಗಳನ್ನು ಕೊಡುತ್ತೇನೆ. ನಾನು ಕೃಪೆಯಿಂದ ಈಗ ದಯಪಾಲಿಸಿರುವ ದಿವ್ಯ ಚಕ್ಷುಸ್ಸಿನಿಂದ ಭಗವಂತನ ಅಪರಿಮಿತವಾದ ಜ್ಞಾನ, ವಿಭೂತಿ ಮುಂತಾದುವುಗಳೆಲ್ಲವನ್ನೂ ನೋಡು. (೭—೮)

### ಸಂಜಯನು ಸಾಕ್ಷಾತ್ಕರಿಸಿದ ಭಗವಂತನ ವಿಶ್ವರೂಪದ ವರ್ಣನೆ. (ಶ್ಲೋಕಗಳು ೯ ರಿಂದ ೧೪)

ಸಂಜಯನು ಧೃತರಾಷ್ಟ್ರನಿಗೆ ಹೀಗೆ ಹೇಳಿದನು;—“ ಎಲೈ ರಾಜನೇ ! ಮಹಾಯೋಗಿಗಳಿಗೆಲ್ಲಾ ವಿಶ್ವರೂಪನಾದ ಪರಬ್ರಹ್ಮನಾದ ಶ್ರೀ ಕೃಷ್ಣನು ತನ್ನ ಪರಮೇಶ್ವರ ಸ್ವಭಾವಕ್ಕೆ ಸಮನಾದ ರೂಪವನ್ನು ಅರ್ಜುನನಿಗೆ ಕೃಪೆಯಿಂದ ತೋರಿಸಿದನು. ಆ ವಿಶ್ವರೂಪವು ಎಂಥಾದ್ದು ಅಂದರೆ, ಅದು ನಿರತಿಶಯವಾದ ಐಶ್ವರ್ಯ ರೂಪದಿಂದ ಕೂಡಿದ್ದುದು. ಅಂದರೆ ಅದು ನಾನಾ ವಿಧವಾಗಿ, ವಿಚಿತ್ರವಾಗಿ, ಸಕಲಲೋಕಗಳಿಗೂ ಸ್ಥಾನವಾಗಿ, ಸಕಲ ಲೋಕಗಳನ್ನೂ ಆಳುವುದಾಗಿಯೂ ಇದೆ (೯) ಪರಮೇಶ್ವರನ ಸ್ವಭಾವಕ್ಕೆ ಅನುರೂಪವಾದ ಆ ರೂಪವು ಅನೇಕ ಮುಖಗಳೂ ಮತ್ತು ಕಣ್ಣುಗಳಿಂದ ಕೂಡಿದ್ದೂ ; ಅನೇಕ ಅದ್ಭುತಗಳನ್ನು ತೋರುವುದೂ, ಅನೇಕ ದಿವ್ಯಾಭರಣಗಳಿಂದ ಅಲಂಕೃತವಾದದ್ದೂ, ದಿವ್ಯಗಳಾದ ಅನೇಕ ಆಯುಧಗಳಿಂದ ಕೂಡಿದ್ದೂ, ದಿವ್ಯ ಮಾಲೆಗಳನ್ನೂ ಮತ್ತು ದಿವ್ಯ ವಸ್ತುಗಳನ್ನೂ ಧರಿಸಿದ್ದೂ, ದಿವ್ಯ ಗಂಧವನ್ನು ಲೇಪಿಸಿದ್ದೂ, ಸಕಲ ಐಶ್ವರ್ಯಕರವಾದದ್ದೂ, ಪ್ರಕಾಶವಾದದ್ದೂ ಆಗಿದೆ. ಅಂದರೇನು, ಅದು ಮೂರು ಕಾಲದಲ್ಲೂ ಉಳ್ಳ ಸಕಲ ಜಗತ್ತಿಗೂ ವಾಸಸ್ಥಾನವಾಗಿರುವುದರಿಂದ ದೇಶದಿಂದಲಾಗಲೀ, ಕಾಲದಿಂದಲಾಗಲೀ ಅಳತೆ ಮಾಡಲು ಅಸಾಧ್ಯವಾದದ್ದಾಗಿ ಎಲ್ಲಾ ದಿಕ್ಕುಗಳಲ್ಲಿಯೂ ಮುಖಗಳಿಂದ ಕೂಡಿದುದಾಗಿ ಇದೆ. (೧೦—೧೧) ಆಕಾಶದಲ್ಲಿ ಸಾವಿರ ಸೂರ್ಯರುಗಳು ಏಕಕಾಲದಲ್ಲಿ ಉದಿಸಿದ್ದದೇ ಆದರೆ ಅದರಿಂದ ತೋರುವ ಪ್ರಕಾಶವನ್ನು ಆ ಮಹಾತ್ಮನಾದ ಭಗವಂತನ ವಿಶ್ವರೂಪ ದೇಹದ ಕಾಂತಿಗೆ ಸಾಮ್ಯವನ್ನು ಹೇಳಬಹುದು. ಅಂದರೇನು, ಆ ದಿವ್ಯಶರೀರದ ಕಾಂತಿಯು ಅಕ್ಷಯವಾದ ತೇಜಸ್ಸ್ವರೂಪ ವಾದುದಾಗಿದೆ. (೧೨) ಅಳತೆ ಇಲ್ಲದ ಅಗಲವೂ ಉದ್ದವೂ ಉಳ್ಳದಾಗಿ, ಅನಂತವಾದ ತೋಳುಗಳೂ ಹೊಟ್ಟೆಯೂ ಮುಖ ಕಣ್ಣುಗಳಿಂದ ಕೂಡಿದ್ದಾಗಿ ಅಳತೆ ಇಲ್ಲದ ಪ್ರಕಾಶದಿಂದ ಕೂಡಿದ್ದಾಗಿ, ತನಗೆ ತಕ್ಕಹಾಗೆ ಅಪರಿಮತವಾದ ದಿವ್ಯಾಭರಣಗಳಿಂದ ಕೂಡಿದುದಾಗಿ, ದಿವ್ಯ ಗಂಧಲವನ್ನು ಲೇಪಿಸಿಸುದುದಾಗಿ ಇರುವ ಅನಂತ ಐಶ್ವರ್ಯಮಯವಾಗಿ ಉಳ್ಳ ಆ ದೇವಾದಿದೇವನ ದೊಡ್ಡ ಶರೀರದಲ್ಲಿ ಅಂದರೆ ದಿವ್ಯಸ್ವರೂಪದಲ್ಲಿ ನಾನಾ ವಿಧಗಳಾಗಿ ವಿಂಗಡಿಸಲ್ಪಟ್ಟು (ಅಂದರೆ ಚತುರ್ಮುಖ ಬ್ರಹ್ಮನು ಮೊದಲುಗೊಂಡು ಅನೇಕ ವಿಚಿತ್ರಗಳಾದ ದೇವತೆಗಳು, ಮನುಷ್ಯರು, ತಿರ್ಯಕ್ಕುಗಳು ಮುಂತಾದ ಭೋಗಪಡುವವರ ಗುಂಪುಗಳಾಗಿಯೂ, ಭೂಮಿ ಆಕಾಶ ಸ್ವರ್ಗ, ನರಕ, ಅತಲ, ವಿತಲ, ಸುತಲ ಎಂಬ ಭೋಗಸ್ಥಾನಗಳಾಗಿಯೂ, ಭೋಗಿಸುವುದಕ್ಕೆ ಉಪಕರಣಗಳಾದ ಪದಾರ್ಥಗಳಾಗಿಯೂ ಅನೇಕ ವಿಧವಾಗಿ ವಿಭಾಗಿಸಲ್ಪಟ್ಟು) ಪ್ರಕೃತಿ ಪುರುಷರೂಪವಾಗಿರುವ ಸಕಲ ಲೋಕವನ್ನೂ ಭಗವಂತನ ವಿಶ್ವರೂಪದ ಎಲ್ಲೋ ಒಂದು ಜಾಗದಲ್ಲಿರುವುದಾಗಿ ಅರ್ಜುನನು ಭಗವತ್ಕಟಾಕ್ಷದಿಂದ ಹೊಂದಿದ ದಿವ್ಯ ನೇತ್ರಗಳಿಂದ ಕಂಡು ದರ್ಶನ ಮಾಡಿದನು. (೧೩) ಅನಂತರದಲ್ಲಿ ಧನಂಜಯನು ಮಹಾ ಆಶ್ಚರ್ಯವಾಗಿರುವ ಸಕಲ ಲೋಕಗಳನ್ನೂ ತನ್ನ ದೇಹದ ಒಂದು ಕಡೆಯಲ್ಲಿಟ್ಟು, ಅವುಗಳನ್ನು ಪ್ರೇರೇಪಿಸುವವನಾಗಿ, ಅಧಿಕ ಐಶ್ವರ್ಯಕರವಾದ ಅಸಂಖ್ಯಾತ

ವಾದ ಜ್ಞಾನ ಮುಂತಾದ ಕಲ್ಯಾಣ ಗುಣಗಳಿಗೆ ಸ್ಥಾನವಾಗಿ ಇರುವ ಭಗವಂತನನ್ನು ನೋಡಿ ಆಶ್ಚರ್ಯದಿಂದ ಕೂಡಿದವನಾಗಿ, ದೇಹದ ಕೂದಲೆಲ್ಲಾ ಮೇಲೆ ಎದ್ದವನಾಗಿ (ಅಂದರೆ ಮೈಯೆಲ್ಲಾ ರೋಮಾಂಚಿತವಾಗಿ) ದಂಡದ ಹಾಗೆ ಕೆಳಗೆ ಬಿದ್ದು, ನಮಸ್ಕರಿಸಿ, ಕೈಗಳನ್ನು ಮುಗಿದುಕೊಂಡು ಈ ವಿಧವಾಗಿ ವಿಜ್ಞಾಪನೆಯನ್ನು ಮಾಡುತ್ತಾನೆ." (೧೪)

### ಅರ್ಜುನನು ವಿಶ್ವರೂಪವನ್ನು ಸಾಕ್ಷಾತ್ಕರಿಸುತ್ತಾ ಭಗವಂತನನ್ನು ಸ್ತೋತ್ರ ಮಾಡುತ್ತಾನೆ (ಶ್ಲೋಕಗಳು ೧೫ ರಿಂದ ೩೧ ರ ವರೆಗೆ)

" ಹೇ ಸ್ವಾಮಿಯೇ ! ನಿನ್ನ ದಿವ್ಯ ದೇಹದಲ್ಲಿ ಸಕಲವಾದ ದೇವತೆಗಳನ್ನೂ ಮತ್ತು ಇನ್ನೂ ಉಂಟಾದ ಸಕಲವಾದ ಪ್ರಾಣಿಗಳ ಗುಂಪುಗಳನ್ನೂ, ಅಂಡಾಧಿಪತಿಯಾದ ಚತುರ್ಮುಖ ಬ್ರಹ್ಮನನ್ನೂ, ಹಾಗೆಯೇ ಭಗವಂತನ ಸಂಹಾರ ಶಕ್ತಿ ಮೂರ್ತಿಯಾದ ಶಿವನನ್ನೂ, ದೇವ ಋಷಿಗಳೇ ಮುಂತಾದ ಸಕಲ ಋಷಿಗಳನ್ನೂ, ವಾಸುಕಿ ದಕ್ಷನೇ ಮುಂತಾದ ಅನೇಕ ಸರ್ಪಗಳನ್ನೂ ನೋಡುತ್ತೇನೆ. (೧೫) ಪ್ರಪಂಚಕ್ಕೆಲ್ಲಾ ಒಡೆಯನೇ ! ಅನೇಕವಾದ ಕೈಕಾಲು ಭುಜ ಹೊಟ್ಟೆ ಮುಖ ಕಣ್ಣುಗಳು ಮುಂತಾದ ಕರಣಗಳೊಂದಿಗೆ ಕೂಡಿರುವ ಅನಂತ ರೂಪನಾಗಿರುವ, ಅಳತೆ ಇಲ್ಲದಷ್ಟು ಶರೀರಗಳುಳ್ಳ ನಿನ್ನನ್ನು ಎಲ್ಲಾ ಕಡೆಯಲ್ಲೂ ನೋಡುತ್ತೇನೆ, ಪ್ರಪಂಚವನ್ನೆಲ್ಲಾ ಶರೀರವಾಗಿ ಉಳ್ಳವನೇ ! ನಿನಗೆ ಇದು ಮೊದಲು ಎಂದೂ, ಇದು ಮಧ್ಯ ಎಂದೂ, ಇದು ಅಂತವು ಎಂದೂ ನೀನು ಕೊಟ್ಟಿರುವ ಈ ದಿವ್ಯ ನೇತ್ರಗಳಿಂದಲೂ ಕೂಡ ನೋಡಲು ಶಕ್ತಿ ಇಲ್ಲದವನಾಗಿರುತ್ತೇನೆ. (೧೬) ತೇಜೋರಾಶಿಯಾಗಿ, ಎಲ್ಲಲ್ಲೂ ಪ್ರಕಾಶಿಸುವವನಾಗಿ, ಯಾವ ದಿಕ್ಕಿನಲ್ಲಿಯೂ ನೋಡಲು ಅಸಾಧ್ಯನಾಗಿ, ಜ್ವಲಿಸುವಂಥಾ ಸೂರ್ಯ ಅಗ್ನಿ ಇವರುಗಳ ಕಾಂತಿಯಿಂದ ಕೂಡಿದವನಾಗಿ, ಅಪ್ರಮೇಯನಾಗಿರುವಂಥಾ ನಿನ್ನನ್ನು ಈಗ ಕಿರೀಟ, ಗದೆ, ಚಕ್ರ ಇವುಗಳನ್ನು ಧರಿಸಿರುವವನನ್ನಾಗಿ ದರ್ಶನವನ್ನು ಪಡೆಯುತ್ತಿದ್ದೇನೆ ಅಥವ ಸೇವಿಸುತ್ತಿದ್ದೇನೆ. (೧೭) ಉಪನಿಷತ್ತುಗಳಲ್ಲಿ ತಿಳಿಯಬೇಕಾದುದಾಗಿ ಹೇಳಲ್ಪಟ್ಟ ಪರಮವಾದ ಅಕ್ಷರವೂ ನೀನೇ ! ಈ ಜಗತ್ತಿಗೆ ಮುಖ್ಯವಾದ ಆಧಾರನೂ ನೀನೇ ! ನೀನು ನಾಶರಹಿತನು, ನೀನು ಯಾವ ಸ್ವರೂಪದೊಂದಿಗೂ, ಯಾವ ವಿಧವಾದ ಗುಣಗಳೊಂದಿಗೂ, ಯಾವ ವಿಧವಾದ ವಿಭವದೊಂದಿಗೂ ಇರುತ್ತೀಯೋ ಆ ವಿಧವಾಗಿಯೇ ಯಾವಾಗಲೂ ಇರುತ್ತೀಯೆ. ನಿತ್ಯವಾದ ವೈದಿಕ ಧರ್ಮಗಳೆಲ್ಲವನ್ನೂ ನೀನೇ ಈ ರೀತಿಯಾಗಿ ಅವತಾರ ಮಾಡಿ ಕಾಪಾಡುತ್ತೀಯೆ. ಪುರಾತನ ಪುರುಷನೂ ನೀನೇ ಎಂದು ತಿಳಿದುಕೊಂಡೆನು. ಅಂದರೇನು, ಈ ವರೆಗೆ ಯದುಕುಲ ತಿಲಕನಾಗಿ ತಿಳಿದುಕೊಂಡಿದ್ದ ನಿನ್ನನ್ನು ಈಗತಾನೇ ಮೇಲೆ ಹೇಳಿದ ರೀತಿಯಲ್ಲಿ ತಿಳಿದೆನು. (೧೮)

ಸ್ವಾಮಿಯೇ ! ಆದಿ ಮಧ್ಯ ಅಂತವಿಲ್ಲದವನಾಗಿ, ಅಪರಿಮಿತವಾದ ಬಲ, ವೀರ್ಯ ಮುಂತಾದ ಗುಣಗಳಿಂದ ಕೂಡಿದವನಾಗಿ, ಚಂದ್ರನಹಾಗೆ ಆಶ್ರಯಿಸಿದವರನ್ನು ಕಾಪಾಡುವ ಮತ್ತು ಎದುರುಬಿದ್ದವರನ್ನು ಸೂರ್ಯನಹಾಗೆ ದಹಿಸುವ ಕಣ್ಣುಗಳುಳ್ಳವನಾಗಿ, ಅನಂತವಾದ ಭುಜಗಳುಳ್ಳವನಾಗಿ, ಜ್ವಾಲೆಯೊಂದಿಗೆ ಉರಿಯುವ ಕಾಲಾಗ್ನಿಯಂತೆ ಸಂಹಾರಕ್ಕೆ ತಕ್ಕ ಮುಖಗಳೊಂದಿಗೆ ಕೂಡಿದವನಾಗಿ, ತೇಜಸ್ಸಿನಿಂದ ಲೋಕವನ್ನೆಲ್ಲಾ ತಪಿಸಿರುವಂಥಾ ನಿನ್ನನ್ನು ನೋಡುತ್ತಿದ್ದೇನೆ. ಅಂದರೇನು, ಹೀಗೆ ಸಕಲಕ್ಕೂ ಕಾರಣವಾಗಿಯೂ, ಸರ್ವಾಧಾರನಾಗಿಯೂ, ಸರ್ವರನ್ನೂ ಆಳುವವನಾಗಿಯೂ, ಸರ್ವವನ್ನೂ ನಾಶಮಾಡುವವನಾಗಿಯೂ, ಜ್ಞಾನವೇ ಮುಂತಾದ ಅಪಾರವಾದ ಸಮುದ್ರನಾಗಿಯೂ, ಆದಿ ಮಧ್ಯಾಂತರಹಿತನಾಗಿಯೂ ಇರುವ ನಿನ್ನನ್ನು ಈ ವಿಧವಾದ ದಿವ್ಯ ದೇಹದಿಂದ ಕೂಡಿದವನಾಗಿ ನೀನು ಉಪದೇಶಿಸಿದ ಪ್ರಕಾರ ಸಾಕ್ಷಾತ್ಕಾರ ಮಾಡುತ್ತಿದ್ದೇನೆ. (೧೯) ಮಹಾತ್ಮನೇ ! ಮೇಲಿರುವ ಆಕಾಶದಲ್ಲೂ, ಕೆಳಗಿರುವ ಭೂಮಿಯಲ್ಲೂ ಮತ್ತು ಇವುಗಳ ಮಧ್ಯದಲ್ಲಿರುವ ಅವಕಾಶದಲ್ಲೂ ಇರುವ ಲೋಕಗಳೆಲ್ಲವೂ ನಿನ್ನೊಬ್ಬನಿಂದಲೇ ವ್ಯಾಪಿಸಲ್ಪಟ್ಟದೆಯಲ್ಲವೇ ? ಎಲ್ಲಾ ದಿಕ್ಕುಗಲ್ಲೂ ಹೊಕ್ಕಿರುವ ಈ ಆಶ್ಚರ್ಯಕರವಾದ ನಿನ್ನ ಶರೀರವನ್ನು ನೋಡಿ ಮೂರು ಲೋಕದವರೂ ನಡುಗಿ ಹೋಗುತ್ತಾರೆ. (೨೦) ಇದೋ ಶ್ರೇಷ್ಠರುಗಳಾಗಿರುವ ಕೆಲವು ದೇವತೆಗಳು ವಿಶ್ವರೂಪವಾಗಿರುವ ನಿನ್ನನ್ನು ನೋಡಿ ಸಂತೋಷಪಟ್ಟು ಸಮೀಪದಲ್ಲಿ ಸೇರುತ್ತಾರೆ. ಇನ್ನೂ ಕೆಲವರು ನಿನ್ನ ಭಯಂಕರವಾದ ಆಕಾರವನ್ನು ನೋಡಿ ಭಯಪಟ್ಟವರಾಗಿ, ಅಂಜಲಿ ಹಸ್ತರಾಗಿ ತಮ್ಮ ತಮ್ಮ ಜ್ಞಾನಕ್ಕೆ ತಕ್ಕಹಾಗೆ ಸ್ತೋತ್ರವನ್ನು ಮಾಡುತ್ತಾರೆ. ಇನ್ನೂ ಕೆಲವು ಋಷಿಗಳೂ ಸಿದ್ಧಗಣಗಳೂ ಪರತತ್ವವನ್ನೂ, ಅಪರತತ್ವವನ್ನೂ ತಿಳಿದವರಾದ್ದರಿಂದ " ಸ್ವಸ್ತಿ " ಎಂದು ಅಂದರೆ ಮಂಗಳವನ್ನು ಹೇಳುತ್ತಾ ನಿನ್ನನ್ನು ಅನೇಕವಾಗಿ ಸ್ತೋತ್ರಮಾಡುತ್ತಾರೆ. (೨೧) ರುದ್ರರೂ, ಆದಿತ್ಯರೂ, ವಸುಕ್ಕಗಳೂ, ಸಾಧ್ಯರೂ, ವಿಶ್ವೇ ದೇವತೆಗಳೂ, ಅಶ್ವಿನೀ ದೇವತೆಗಳೂ, ಮರುತ್ತುಗಳೂ, ಪಿತೃಗಳೂ, ಗಂಧರ್ವರೂ, ಯಕ್ಷರೂ, ಅಸುರರೂ, ಸಿದ್ಧಗಣಗಳೂ—ಎಲ್ಲರೂ ಪರಮಾಶ್ಚರ್ಯದಿಂದ ಕೂಡಿದ ನಿನ್ನ ದರ್ಶನವನ್ನು ಮಾಡುತ್ತಾರೆ. (೨೨) ಅನೇಕ ಮುಖ ಕಣ್ಣುಗಳುಳ್ಳ, ಅನೇಕ ಭುಜ ತೊಡೆ ಪಾದಗಳುಳ್ಳ, ಅನೇಕ ಹೊಟ್ಟೆ

ಗಳುಳ್ಳ, ಅನೇಕ ಕೋರೇಹಲ್ಲುಗಳನ್ನು ಪಡೆದಿರುವ ಭಯಂಕರವಾದ ದೊಡ್ಡದಾದ ಶರೀರವನ್ನು ನೋಡಿ ಲೋಕಗಳಲ್ಲಿ ಇರುವವರೆಲ್ಲರೂ ಹೆದರಿರುವರು; ನಾನೂ ಹೆದರಿದ್ದೇನೆ. (೨೩) ಸರ್ವವ್ಯಾಪಿಯೇ! ಪರಮಾಕಾಶವನ್ನು ಮುಟ್ಟುತ್ತಿರುವ, ಮಹಾಪ್ರಕಾಶದಿಂದ ಹೊಳೆಯುತ್ತಿರುವ, ಅನೇಕ ವರ್ಣಗಳಿಂದ ಕೂಡಿರುವ, ತೆರೆದಿರುವ ಬಾಯಿಗಳಿಂದಲೂ ಮತ್ತು ವಿಶಾಲವಾದ ನೇತ್ರಗಳಿಂದಲೂ ಕೂಡಿರುವ ಭಯಂಕಾರವಾಗಿರುವ ವಿಷ್ಣುವೇ! ಈ ರೂಪದಲ್ಲಿರುವ ನಿನ್ನನ್ನು ನೋಡಿ ನಾನು ಸ್ವಲ್ಪವೂ ಧರಿಸಲಾರೆನು; ಏಕೆಂದರೆ ನಾನು ಈಗ ಹೆದರಿದ ಮನಸ್ಸುಳ್ಳವನಾಗಿ ಧೈರ್ಯವನ್ನು ಹೊಂದಿಲ್ಲ. ನಾನು ಮನಸ್ಸಿನಿಂದಾಗಲಿ, ಇಂದ್ರಿಯಗಳಿಂದಾಗಲೀ ಶಾಂತಿಯನ್ನು ಹೊಂದಿಲ್ಲ ಅಂದರೇನು, ಸರ್ವವ್ಯಾಪಿಯಾದ ನಿನ್ನ ಅತಿಶಯವೂ ಅತ್ಯಂತ ಅದ್ಭುತವೂ ಅತ್ಯಂತ ಘೋರವೂ ಆದ ರೂಪವನ್ನು ನೋಡಿ ನನ್ನ ಸಮಸ್ತ ಅಂಗಗಳೂ ಶಿಥಿಲವಾಗುತ್ತಿವೆ; ಇಂದ್ರಿಯಗಳು ವ್ಯಾಕುಲಗೊಳ್ಳುತ್ತಿವೆ. (೨೪) ಲೋಕಕ್ಕೆಲ್ಲಾ ವಾಸಸ್ಥಾನವಾಗಿ, ಬ್ರಹ್ಮಾದಿ ದೇವರುಗಳಿಗೆಲ್ಲಾ ಸ್ವಾಮಿಯಾಗಿ ಇರುವ ಭಗವಂತನೇ! ಪ್ರಳಯಕಾಲದ ಅಗ್ನಿಯಹಾಗೆ ಸಕಲವನ್ನೂ ನಾಶಮಾಡುವ ಘೋರವಾಗಿರುವ ನಿನ್ನ ದಿವ್ಯ ಮುಖಗಳನ್ನು ನೋಡಿ ನನಗೆ ದಿಕ್ಕುಗಳೇ ತೋರುತ್ತಿಲ್ಲ; ನಾನು ಸ್ವಲ್ಪವೂ ಸುಖವನ್ನು ಪಡೆದಿಲ್ಲ. ನೀನು ನನ್ನಲ್ಲಿ ಕೃಪೆಮಾಡಿ, ದಯಪಾಲಿಸಿ ನನ್ನ ಮನಸ್ಸಿನಲ್ಲಿ ಶಾಂತಿಯುಂಟಾಗುವಹಾಗೆ ಕಟಾಕ್ಷಿಸಬೇಕು; ಸ್ವಾಮಿಯೇ ಪ್ರಸನ್ನನಾಗು! (೨೫) ಈ ಧೃತರಾಷ್ಟ್ರ ಕುಮಾರರುಗಳೂ, ಭೀಷ್ಮನೂ, ದ್ರೋಣನೂ, ಕರ್ಣನೂ ಎದುರುಪಕ್ಷದ ರಾಜಕುಮಾರರುಗಳೊಂದಿಗೂ ನಮ್ಮವರನ್ನು ಸೇರಿದ ಕೆಲವು ವೀರರುಗಳಿಂದಲೂ ಅಧಿಕ ವೇಗವಾಗಿ ಕೋರೇಹಲ್ಲುಗಳಿಂದ ವಿಕಾರವಾಗಿರುವ ಮತ್ತು ಭಯವನ್ನು ಉಂಟುಮಾಡುವ ನಿನ್ನ ಬಾಯಿನಲ್ಲಿ ನಾಶ ಹೊಂದುವವರಾಗಿ ನುಗುತ್ತಿದ್ದಾರೆ. ಅದರಲ್ಲಿ ಕೆಲವರ ತಲೆಗಳು ಪುಡಿಮಾಡಲ್ಪಟ್ಟು ಹಲ್ಲುಸಂಧಿಗಳಲ್ಲಿ ಸೇರುತ್ತಿವೆ. (೨೬–೨೭) ಹೇಗೆ ನದಿಗಳ ಅಧಿಕ ನೀರಿನ ಪ್ರವಾಹಗಳು ವೇಗವಾಗಿ ಸಮುದ್ರವನ್ನು ಸೇರುವುದೋ ಹಾಗೆ ಈ ಮನುಷ್ಯ ಲೋಕದ ರಾಜರೇ ಮೊದಲಾದ ವೀರರುಗಳು ಸುತ್ತಲೂ ಉರಿಯುತ್ತಿರುವ ನಿನ್ನ ಬಾಯಿಯನ್ನು ನಾಶ ಹೊಂದುವದಕ್ಕೋಸ್ಕರ ಅತಿ ವೇಗದಿಂದ ಪ್ರವೇಶಿಸುತ್ತಿದ್ದಾರೆ. (೨೮) ಹೇಗೆ ಪತಂಗ ಹುಳುಗಳು ನಾಶ ಹೊಂದುವುದಕ್ಕೋಸ್ಕರ ಬಹಳ ವೇಗದಿಂದ ಉರಿಯುವ ಬೆಂಕಿಯನ್ನು ಪ್ರವೇಶಿಸುತ್ತವೆಯೋ ಹಾಗೆಯೇ ಈ ರಾಜರ ಮತ್ತು ವೀರರುಗಳ ಸಮೂಹಗಳೂಕೂಡ ಬಹಳ ವೇಗದಿಂದ ನಿನ್ನ ಬಾಯಿಗಳನ್ನು ಪ್ರವೇಶಿಸುತ್ತಾರೆ. (೨೯) ವಿಷ್ಣುವೇ! ಒಟ್ಟಿಗೆ ಸೇರಿರುವ ರಾಜರನ್ನೂ ಮತ್ತು ವೀರರುಗಳನ್ನೂ ನೀನು ನಿನ್ನ ಜ್ವಲಿಸುತ್ತಿರುವ ಬಾಯಿಗಳಿಂದ ನುಂಗುತ್ತಾ ಎಲ್ಲಾ ಕಡೆಯಲ್ಲಿಯೂ ನಾಲಿಗೆಯಿಂದ ನೆಕ್ಕುತ್ತಿರುವೆ. ಘೋರವಾದ ನಿನ್ನ ಕಿರಣಗಳು ತಮ್ಮ ಪ್ರಕಾಶಗಳಿಂದ ಲೋಕಗಳನ್ನೆಲ್ಲಾ ವ್ಯಾಪಿಸಿ ಅವೆಲ್ಲವನ್ನೂ ಸುಡುತ್ತವೆ; ತನ್ಮೂಲಕ ಪ್ರಾಣಿಗಳು ನಾಶವನ್ನು ಹೊಂದುತ್ತವೆ. (೩೦) ದೇವತೆಗಳಿಗೆಲ್ಲಾ ಶ್ರೇಷ್ಠನಾದವನೇ! ನಿನಗೆ ನಮಸ್ಕಾರವು. ಘೋರ ರೂಪವುಳ್ಳ ನೀನು ಯಾವನು? ನಿನ್ನ ನಿರಂಕುಶವಾದ ಈಶ್ವರ ಸ್ವರೂಪವನ್ನು ತೋರಿಸಬೇಕೆಂದು ನಾನುಪ್ರಾರ್ಥಿಸಿದೆನು. ಆ ಪ್ರಕಾರ ಮೊದಲು ನಿನ್ನ ನಿರತಿಶಯರೂಪವನ್ನು ತೋರಿಸಿದೆ; ಅನಂತರ ಈಗ ಈ ಘೋರವಾದ ರೂಪವನ್ನು ಧರಿಸಿ ನನಗೆ ತೋರಿಸಿ ಭಯವನ್ನು ಉಂಟುಮಾಡುತ್ತೀಯೆ ಇದು ಯಾತಕ್ಕೋಸ್ಕರ ಎಂಬುದನ್ನು ನನಗೆ ವಿಶದವಾಗಿ ಹೇಳು ಈ ಘೋರ ರೂಪ ದರ್ಶನವು ಸಾಕು. ಇನ್ನು ನೀನು ನನಗೆ ನಿನ್ನ ಶಾಂತವಾದ ಆಕಾರವನ್ನು ಅಂಗೀಕರಿಸಿ ದರ್ಶನವನ್ನು ಕೊಡಬೇಕೆಂದು ಪ್ರಾರ್ಥಿಸುತ್ತೇನೆ. (೩೧)

### ಭಗವಂತನು ಅರ್ಜುನನನ್ನು ಯುದ್ಧಮಾಡೆಂದು ಪ್ರೇರೇಪಿಸುತ್ತಾನೆ. (ಶ್ಲೋಕಗಳು ೩೨ ರಿಂದ ೩೪)

ಅರ್ಜುನನ ಪ್ರಾರ್ಥನೆಯ ಪ್ರಕಾರ ಶ್ರೀ ಕೃಷ್ಣನು ಅರ್ಜುನನನ್ನು ಕುರಿತು ಹೀಗೆ ಹೇಳುತ್ತಾನೆ. "ಅರ್ಜುನಾ! ದುರ್ಯೋಧನನೇ ಮುಂತಾದ ಸಕಲ ರಾಜರುಗಳ ಬಾಳಿನ ಕೊನೆಯನ್ನು ನಾನು ಅರಿತಿರುವುದರಿಂದ ಅವರುಗಳೆಲ್ಲರನ್ನೂ ನಾಶಮಾಡುವುದಕ್ಕೋಸ್ಕರ ಈ ಘೋರವಾದ ರೂಪಗಳಿಂದ ಬೆಳೆದು ಅವರುಗಳನ್ನು ನಾಶಮಾಡುವುದೇ ಪ್ರಯೋಜನವಾಗಿ ಈವಾಗ ಕಾರ್ಯವನ್ನು ಪ್ರಾರಂಭಿಸಿದ್ದೇನೆ; ಏಕೆಂದರ ಲೋಕವನ್ನು ಸಂಹರಿಸತಕ್ಕ ಮೃತ್ಯುವೂ ನಾನೇ ಆಗಿದ್ದೇನೆ. ನಿನ್ನ ಪ್ರಯತ್ನವಿಲ್ಲದೆಯೇ ಈ ದುರ್ಯೋಧನಾದಿಗಳೂ, ಇನ್ನೂ ಬಾಕಿ ನಿನಗೆ ಶತ್ರುಗಳಾಗಿರುವ ಈ ವೀರರುಗಳೆಲ್ಲರೂ ನನ್ನ ಸಂಕಲ್ಪ ಮಾತ್ರದಿಂದಲೇ ನಾಶವನ್ನು ಹೊಂದುತ್ತಾರೆ, ಆದ್ದರಿಂದ ಅವರುಗಳನ್ನು ಎದುರಿಸುವುದಕ್ಕಾಗಿ ನೀನು ಏಳುವವನಾಗು; ಶತ್ರುಗಳಾದ ಅವರನ್ನು ಸುಲಭವಾಗಿ ಜೈಸಿ. ಕೀರ್ತಿಯನ್ನು ಹೊಂದಿ, ಧರ್ಮದಿಂದ ಲಭಿಸಿದ ಮತ್ತು ಸಂಪತ್ತಿನಿಂದ ಕೂಡಿದ ಈ ರಾಜ್ಯವನ್ನು ಆಳಿ ಅನುಭವಿಸುವನಾಗು. ಈ ದುಷ್ಟರು ನಿನ್ನ ಪ್ರಯತ್ನಕ್ಕೆ ಮೊದಲೇ ನನ್ನ ದಿವ್ಯ ಸಂಕಲ್ಪದಲ್ಲಿಯೇ ಕೊಲ್ಲಲ್ಪಟ್ಟಿರುವುದರಿಂದ ಎರಡು ಕೈಗಳಿಂದಲೂ ಯುದ್ಧಮಾಡಲು ಶಕ್ತನಾದ ನೀನು ಅವರನ್ನು ಕೊಲ್ಲುವುದಕ್ಕೆ ನಿಮಿತ್ತ ಮಾತ್ರನಾಗಬೇಕು. ಅಂದರೇನು

ನಿನ್ನಿಂದ ಪ್ರಯೋಗಿಸಲ್ಪಟ್ಟ ಆಯುಧಗಳು ಹೇಗೆ ನಿನ್ನ ಸಂಕಲ್ಪಾಧೀನವಾಗಿ ನಿಮಿತ್ತ ಮಾತ್ರಗಳಾಗಿವೆಯೋ ಹಾಗೆಯೇ ನೀನೂಕೂಡ ಈ ನನ್ನ ದಿವ್ಯಸಂಕಲ್ಪಕ್ಕೆ ಅಧೀನನಾಗಿ ಅವರನ್ನು ಕೊಲ್ಲಲು ನಾನು ಪ್ರಯೋಗಿಸುವ ಶಸ್ತ್ರದ ಸ್ಥಾನವನ್ನು ಹೊಂದಿ ನಿಮಿತ್ತ ಮಾತ್ರವಾಗಿ ಯುದ್ಧಮಾಡುವನಾಗು; ಅಷ್ಟೇ (೩೨—೩೩) ದ್ರೋಣನು, ಭೀಷ್ಮನು, ಕರ್ಣನು ಮುಂತಾದ ಇತರ ವೀರರುಗಳೂ ಕೂಡ ಅಪರಾಧಿಗಳಾದ್ದರಿಂದ ನನ ಸಂಕಲ್ಪದಿಂದಲೇ ಕೊಲ್ಲಲ್ಪಡುತ್ತಾರೆ. ಆದ್ದರಿಂದ ಅವರನ್ನು ಬಂಧುಗಳೆಂದೂ, ಆಚಾರ್ಯರುಗಳು ಎಂದೂ, ಭೋಗದಲ್ಲಿ ಆಶೆಯುಳ್ಳವರೆಂದೂ, ಇವರನ್ನು ಹ್ಯಾಗೆ ಕೊಲ್ಲುವುದು ಎಂದು ಮನಸ್ಸಿನಲ್ಲಿ ಸ್ವಲ್ಪವೂ ವ್ಯಾಕುಲವಿಲ್ಲದೆ ಯುದ್ಧಮಾಡಿ ಜಯಿಸುವನಾಗು. ಇವರುಗಳನ್ನು ಕೊಲ್ಲುವುದರಲ್ಲಿ ನೀನು ಧರ್ಮಾಧರ್ಮ ಭಯವೇ ಆಗಲಿ, ಬಂಧು ಸ್ನೇಹ ವನ್ನಾಗಲಿ, ದಯೆಯನ್ನಾಗಲಿ ಹೊಂದಬೇಡ; ಏಕೆಂದರೆ ಅಪರಾಧ ಮಾಡಿರುವ ಇವರುಗಳು ನನ್ನಿಂದಲೇ ನಿಸ್ಸಂಶಯವಾಗಿ ಕೊಲ್ಲಲ್ಪಡುವರು. ಆದುದರಿಂದ ಯಾವ ಶಂಖೆಯನ್ನೂ ಹೊಂದದೆ ಯುದ್ಧಮಾಡು; ಅದಕ್ಕಾಗಿ ದುಃಖವನ್ನು ಪಡಬೇಡ. ಇನ್ನು ಯುದ್ಧದಲ್ಲಿ ನೀನು ನಿನ್ನ ಶತ್ರುಗಳನ್ನು ಖಂಡಿತವಾಗಿಯೂ ಜಯಿಸುತ್ತೀಯೆ. (೩೪)

### ಸಂಜಯನು ಹೇಳುತ್ತಾನೆ. (ಶ್ಲೋಕ ೩೫)

"ದೃತರಾಷ್ಟ್ರನೇ! ಆಶ್ರಿತ ವಾತ್ಸಲ್ಯ ಸಾಗರನಾದ ಶ್ರೀ ಕೃಷ್ಣನು ಹೀಗೆ ಹೇಳಿದ್ದನು. ಅರ್ಜುನನು ಕೇಳಿದ ಒಡನೆಯೇ ಅವನನ್ನು ಕುರಿತು ನಮಸ್ಕರಿಸಿ, ಪುನಃ ಭಯದಿಂದ ನಡುಗಿ, ಪುನಃ ಬೀಳುತ್ತಾ ಏಳುತ್ತಾ ನಮಸ್ಕರಿಸಿ, ಎರಡು ಕೈಗಳನ್ನೂ ಜೋಡಿಸಿ ಕೈಮುಗಿದುಕೊಂಡು ನಡುಗುತ್ತಾ ಶ್ರೀ ಕೃಷ್ಣನನ್ನು ಕುರಿತು ಗದ್ಗದ ಸ್ವರದೊಡನೆ ಪುನಃ ಈ ರೀತಿ ಪ್ರಾರ್ಥಿಸಿದನು". (೩೫)

### ಅರ್ಜುನನು ಪುನಃ ಶ್ರೀ ಕೃಷ್ಣನನ್ನು ಪ್ರಾರ್ಥಿಸುತ್ತಾನೆ. (ಶ್ಲೋಕಗಳು ೩೬ ರಿಂದ ೪೬)

"ಓ ಹೃಷೀಕೇಶ! ಈ ಯುದ್ಧವನ್ನು ನೋಡುವುದ ಕ್ಕೋಸ್ಕರ ಬಂದಿರುವಂಥಾ ದೇವತೆಗಳು, ಗನ್ಧರ್ವರು, ಯಕ್ಷರು ವಿದ್ಯಾಧರರು, ಕಿನ್ನರರು, ಕಿಂಪುರುಷರು, ಋಷಿಗಳು ಇವರೇ ಮುಂತಾದ ಸಕಲ ಲೋಕವೂ ನಿನ್ನ ಅನುಗ್ರಹದಿಂದಲೇ ಸರ್ವೇಶ್ವರನಾದ ನಿನ್ನನ್ನು ಸೇವಿಸಿ, ನಿನ್ನ ಕೀರ್ತಿಯನ್ನೂ ಮಹಿಮೆಯನ್ನೂ ಕಂಡು ಸಂತೋಷಿಸುತ್ತಿದ್ದಾರೆ. ಆದರೆ ಅಸುರಾದಿಗಳೆಲ್ಲರೂ ನಿನ್ನನ್ನು ನೋಡಿ ಭಯಪಟ್ಟು ಗುಂಪು ಗುಂಪಾಗಿ ಓಡುತ್ತಾ ಮೂಲೆ ಮೂಲೆಗಳಲ್ಲಿರುವ ಹತ್ತು ದಿಕ್ಕು ಗಳನ್ನೂ ಹೊಕ್ಕು ಭಯದಿಂದ ನಡುಗುತ್ತಿದ್ದಾರೆ. ಸಮಸ್ತ ಸಿದ್ಧರೇ ಮೊದಲಾದ ನಿನಗೆ ಅನುಕೂಲವಾದ ನಡತೆಯುಳ್ಳ ವರುಗಳು ನಿನಗೆ ನಮಸ್ಕಾರ ಮಾಡುತ್ತಿದ್ದಾರೆ, ನಿನ್ನ ಹಿರಿ ತನಕ್ಕೆ ಇವುಗಳೆಲ್ಲಾ ತಕ್ಕವುಗಳೇ ಆಗಿವೆ. (೩೬) ಹೇ ಅನಂತ ದೇವೇಶ! ಜಗನ್ನಿವಾಸ! ಹಿರಣ್ಯಗರ್ಭ ಬ್ರಹ್ಮನಿಗೇನೆ ಆದಿ ಕರ್ತೃವಾಗಿರುವಂಥಾ ನಿನ್ನನ್ನು ಆ ಬ್ರಹ್ಮಾದಿಗಳು ಏಕೆ ತಾನೇ ನಮಿಸದೆ ಇರುತ್ತಾರೆ. ನಾಶವಿಲ್ಲದ ಜೀವಸ್ವರೂಪವೂ ನೀನೇ! ನಾಮ ರೂಪಗಳಿಂದ ವಿಂಗಡಿಸಿ ತಿಳಿಯಲ್ಪಡುವ "ಸತ್" ಎಂದು ಕರೆಯಲ್ಪಡುವ ಕಾರ್ಯಸ್ಥಿತಿಯಲ್ಲಿರುವ ಪ್ರಕೃತಿಯೂ ನೀನೇ! ಹಾಗೆಯೇ ನಾಮರೂಪಗಳಿಂದ ವಿಂಗಡಿಸಿ ತಿಳಿಸಲ್ಪಡ ಲಾಗದ "ಅಸತ್" ಎಂದು ಕರೆಯಲ್ಪಡುವ ಕಾರಣಸ್ಥಿತಿ ಯಲ್ಲಿರುವ ಪ್ರಕೃತಿಯೂ ನೀನೇ! ಈ ವಿಧಗಳಾದ ಕಾರ್ಯ ಕಾರಣರೂಪವಾದ ಪ್ರಕೃತಿ ತತ್ವವೇನೂ, ಈ ಪ್ರಕೃತಿಯೊಡನೆ ಸೇರಿದ ಜೀವಾತ್ಮ ತತ್ವವೇನೂ ಎರಡೂ ನೀನೇ ಮತ್ತು ಈ ಎರಡಕ್ಕಿಂತ ಶ್ರೇಷ್ಠನೂ ನೀನೇ! ಅದರೆ ಇವೆರಡನ್ನೂದಾಟಿದ ಮುಕ್ತಸ್ವರೂಪನಾದ ಆತ್ಮ ತತ್ವವೇನುಂಟೋ ಅದೂ ನೀನೇ! (೩೭) ಹಳೆಬನಾದ ಪುರಾಣಪುರುಷನು ನೀನೇ! ಜಗತ್ತಿಗೆಲ್ಲಾ ಉಪಾದಾನ ಕಾರಣನಾದ ದೇವನೂ ನೀನೇ! ಈ ಲೋಕ ಗಳಿಗೆಲ್ಲಾ ಆತ್ಮನಾಗಿ ನಿಂತು ಅದನ್ನೆಲ್ಲಾ ಧರಿಸುವಂಥಾ ಆದಾರ ಪರತತ್ವವೂ ನೀನೇ! ಲೋಕದಲ್ಲಿ ಅರಿಯುವವು ಗಳಾಗಿಯೂ, ಅರಿಯಲ್ಪಡುವವುಗಳಾಗಿಯೂ ಇರುವುವು ಗಳೆಲ್ಲವೂ ನೀನೇ! ಹೀಗೆ ನೀನು ಅಳತೆಯಿಲ್ಲದ ಆಕಾರವುಳ್ಳ ವನಾಗಿ ಸರ್ವಸ್ವರೂಪನಾಗಿರುವುದರಿಂದಲೇ ಎಲ್ಲರಿಂದಲೂ ಹೊಂದಲ್ಪಡಬೇಕಾದ ಉತ್ಕೃಷ್ಟಸ್ಥಾನವೂ (ಅಂದರೆ ವೈಕುಂಠವೂ) ನೀನೇ! ಚೇತನಾಚೇತನರೂಪವಾದ ಈ ಲೋಕವೆಲ್ಲವೂ ಆತ್ಮನಾದ ನಿನ್ನಿಂದಲೇ ವ್ಯಾಪಿಸಲ್ಪಟ್ಟಿರುತ್ತದೆ. (೩೮) ವಾಯು, ಯಮ, ಅಗ್ನಿ, ವರುಣ, ಚಂದ್ರನು, ಚತುರ್ಮುಖ ಬ್ರಹ್ಮನೂ ಇವೆರೆಲ್ಲರೂ ನೀನೇ! ಸಕಲರಾದ ಪ್ರಜೆಗಳಿಗೂ, ಪಿತೃಗಳಿಗೂ, ಪ್ರಜಾಪತಿಗಳಿಗೂ ಚತುರ್ಮುಖ ಬ್ರಹ್ಮನು ಪಿತನಾದ್ದರಿಂದ ಭಗವಂತನಾದ ನೀನು ಸಕಲ ಪ್ರಜೆಗಳಿಗೂ ಪಿತಾಮಹನು! ನಿನ್ನನ್ನು ಸಾವಿರಸಲ ನಮಸ್ಕರಿಸುತ್ತೇನೆ; ತಿರಗಿಯೂ ಅನೇಕಸಲಗಳು ನಿನ್ನನ್ನು ನಮಸ್ಕರಿಸುತ್ತೇನೆ. (೩೯) ಹೇ ಸರ್ವಸ್ವರೂಪ! ನಿನಗೆ ಮುಂದುಗಡೆಯಲ್ಲಿ ನಮಸ್ಕಾರ! ಆಮೇಲೆ ನಿನಗೆ ಹಿಂದುಗಡೆ ಯಲ್ಲಿ ನಮಸ್ಕಾರ! ನಿನಗೆ ಎಲ್ಲಾ ಕಡೆಯಲ್ಲೂ ನಮಸ್ಕಾರ ವಿರಲಿ! ಅಳತೆಯಿಲ್ಲದ ಪರಾಕ್ರಮ ಉಳ್ಳವನೇ! ಅಳತೆ ಇಲ್ಲದಷ್ಟು ಶಕ್ತಿ ಉಳ್ಳವನೇ!

(Re-printed from the Mysore Vysya Patrika, February 1962)

M. V. P. PRESS, MYSORE.

# ಭಗವದ್ಗೀತಾ ಹನ್ನೊಂದನೆಯ ಅಧ್ಯಾಯ

ನೀನು ಎಲ್ಲವನ್ನೂ ಆತ್ಮನಾಗಿ ವ್ಯಾಪಿಸಿರುತ್ತೀಯೆ; ಆದ ಕಾರಣದಿಂದ ನೀನು ಸರ್ವಶಬ್ದವಾಚ್ಯನಾಗಿರುತ್ತೀಯೆ. ಸರ್ವವನ್ನೂ ವ್ಯಾಪಿಸಿರುವುದರಿಂದ ಸರ್ವವೂ ನೀನೇ! (೪೦). ಹೇ ಅಚ್ಯುತಾ! ಅಪರಿಮಿತವಾದ ವೀರ್ಯವೂ, ಅಪರಿಮಿತವಾದ ಪರಾಕ್ರಮವೂ, ಸಕಲ ಪ್ರಾಣಿಗಳಿಗೂ ಆತ್ಮನಾಗಿರುವಿಕೆಯೂ, ಸಮಸ್ತದ ಸೃಷ್ಟ್ಯಾದಿಗಳನ್ನು ಮಾಡುವಿಕೆಯೂ ಇನ್ನೂ ಹೀಗೆಯೇ ಅನೇಕ ಬಗೆಯಾಗಿರುವ ನಿನ್ನ ಮಹಿಮೆಯನ್ನು ತಿಳಿಯದವನಾಗಿ ನಾನು ಅಜ್ಞಾನದಿಂದಲೂ, ಚಿರಪರಿಚಯದಿಂದುಂಟಾದ ಅಧಿಕ ಸ್ವತಂತ್ರದಿಂದಲೂ ನಿನ್ನನ್ನು ಸ್ನೇಹಿತನೆಂದು ತಿಳಿದುಕೊಂಡು "ಎಲೋ ಕೃಷ್ಣಾ! ಎಲೋ ಯಾದವ! ಎಲೋ ಸ್ನೇಹಿತನೇ! ಎಂದು ಸ್ವಲ್ಪವೂ ವಿನಯವಿಲ್ಲದೆ ನುಡಿಯುತ್ತಿದ್ದೆನು ನನ್ನ ಸ್ವಾಮಿಯೇ! ಸರ್ವವಿಧದಿಂದಲೂ ಸತ್ಕರಿಸಬೇಕಾದ ನಿನ್ನನ್ನು ಹೀಗೆ ತಿರಸ್ಕರಿಸಿ ಮಾತನಾಡಿದೆನಲ್ಲಾ! ನಾಶವಿಲ್ಲದವನೇ! ಒಟ್ಟಿಗೆ ಆಡುವಾಗಲೂ, ಮಲಗುವಾಗಲೂ, ಕೂತಿರುವಾಗಲೂ, ಊಟಮಾಡುವಾಗಲೂ ಒಂಟಿಯಾಗಿ ಅಥವ ಜನಗಳ ಎದುರಿಗೆ ಹಾಸ್ಯಕ್ಕಾಗಿ ಅಥವ ಇತರ ಕಾರಣಗಳಿಗಾಗಿ ನನ್ನಿಂದ ಅವಮಾನಿಸಲ್ಪಟ್ಟವನಾಗಿರುವುದನ್ನು ನೀನು ಸಹಿಸಿಕೊಂಡು ಆ ತಪ್ಪುಗಳೆಲ್ಲವನ್ನೂ ನಿನ್ನ ಅಳತೆ ಇಲ್ಲದಷ್ಟು ಇರುವ ದಯಾಗುಣದಿಂದ ನನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ (೪೧-೪೨) ಸಮನಿಲ್ಲದ ದೊಡ್ಡಸ್ತಿಕೆಯನ್ನು ಪಡೆದ ಭಗವಂತನೇ! ಈ ಸ್ಥಾವರ ಜಂಗಮಾತ್ಮಕವಾದ ಪ್ರಪಂಚಕ್ಕೆ ನೀನೇ ತಂದೆಯು ಮತ್ತು ಶ್ರೇಷ್ಠನಾದ ಗುರುವೂ ಕೂಡ ಆಗಿದ್ದೀಯೆ; ಆದುದರಿಂದ ಈ ಲೋಕದಲ್ಲಿ ಪೂಜಿಸಲು ಅತ್ಯಂತ ಯೋಗ್ಯನಾಗಿ ಪೂಜ್ಯತಮನಾಗಿದ್ದೀಯೆ. ಇನ್ನೇನು, ಈ ಮೂರು ಲೋಕಗಳಲ್ಲೂ ಕರುಣೆಯೇ ಮುಂತಾದ ಕಲ್ಯಾಣಗಳಲ್ಲೂ ಮತ್ತು ಜಗತ್ತಿನ ಸೃಷ್ಟಿ ಸ್ಥಿತಿಲಯ ಕಾರ್ಯಗಳಲ್ಲೂ ನಿನಗೆ ಸಮಾನರಾದವರು ಯಾರೂ ಸಿಕ್ಕಲಾರರು. ಹೀಗಿರುವಾಗ ನಿನಗಿಂತ ಅಧಿಕನಾದವನು ಯಾವನಾದರೂ ಇರಬಲ್ಲನೆ? ಇಲ್ಲ; ಈ ವಿಚಾರದಲ್ಲಿ ಸಂದೇಹಕ್ಕೇ ಅವಕಾಶವೇ ಇಲ್ಲ (೪೩) ಈ ಕಾರಣದಿಂದ ನಾನು ಎಲ್ಲರಿಗೂ ಒಡೆಯನಾದ, ಎಲ್ಲರಿಂದಲೂ ಸ್ತೋತ್ರಕ್ಕೆ ಅರ್ಹನಾದ ನಿನ್ನನ್ನು ಕುರಿತು ನನ್ನ ಶರೀರವನ್ನು ಭೂಮಿಯಲ್ಲಿ ಮಲಗಿಸಿ ನಮಸ್ಕಾರಮಾಡಿ, ಅನುಗ್ರಹ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ತಪ್ಪುಮಾಡಿದವನಾದರೂ ಪುತ್ರನು ತಂದೆಯನ್ನು ಕುರಿತು ನಮಸ್ಕಾರಮಾಡಿ ಪ್ರಾರ್ಥಿಸಿದನಾದರೆ ಆ ತಂದೆಯೂ, ಹಾಗೆಯೇ ಪ್ರೀತಿಪಾತ್ರನಾದವನು ತನ್ನ ಸ್ನೇಹಿತನನ್ನು ನಮಸ್ಕರಿಸಿ ಬೇಡಿಕೊಂಡರೆ ಆ ಸ್ನೇಹಿತನೂ ಕನಿಕರಪಟ್ಟು ದಯೆಯನ್ನು ತೋರಿಸುವ ಹಾಗೆ ನನ್ನಲ್ಲಿ ವಿಶೇಷ ಕಟಾಕ್ಷವುಳ್ಳ ನೀನು ಪ್ರಿಯನಾದ ನನಗೋಸ್ಕರ ನನ್ನ ಸಕಲ ತಪ್ಪುಗಳನ್ನೂ ಕ್ಷಮಿಸಬೇಕು (೪೪) ಜಗದಂತರ್ಯಾಮಿಯೇ! ಯಾವಾಗಲೂ ಯಾರಿಂದಲೂ ನೋಡಲ್ಪಡದ ನಿನ್ನ ವಿಶ್ವರೂಪವನ್ನು ಮೊದಲು ದರ್ಶನಮಾಡಿದಾಗ ನನ್ನ ಹೃದಯವು ಸಂತೋಷವನ್ನು ಹೊಂದಿತು. ಆದರೆ ನಿನ್ನ ಉಗ್ರವಾದ ರೂಪವನ್ನು ನೋಡಿದಾಗಿಂದ ನನ್ನ ಹೃದಯವು ಭಯದಿಂದ ನಡುಗಿಹೋಗಿ ಮನಸ್ಸು ದುಃಖಿಸುತ್ತದೆ. ಆದ್ದರಿಂದ ಸಕಲ ಲೋಕಕ್ಕೂ ವಾಸಸ್ಥಾನವಾಗಿರುವ ಮತ್ತು ಬ್ರಹ್ಮಾದಿಗಳಾದ ಸಕಲ ದೇವತೆಗಳಿಗೂ ಈಶನಾದ ನನ್ನಸ್ವಾಮಿಯೇ! ನನಗೆ ಮುಂದಿನ ಹಾಗೆಯೇ ನಿನ್ನ ಸುಪ್ರಸನ್ನವಾದ ದಿವ್ಯದೇಹದೊಂದಿಗೆ ದರ್ಶನವನ್ನು ಕೊಡಬೇಕು; ದಯವಿಟ್ಟು ಪ್ರಸನ್ನನಾಗು (೪೫). ವಿಶ್ವಮೂರ್ತಿಯೇ! ಹಿಂದಿನ ಹಾಗೆಯೇ ಕಿರೀಟವುಳ್ಳಂಥಾ, ಗದೆಯುಳ್ಳಂಥಾ, ಚಕ್ರವನ್ನು ಕೈಯಲ್ಲಿ ಉಳ್ಳಂಥಾ ನಿನ್ನನ್ನು ದರ್ಶನಮಾಡಲು ನಾನು ಇಷ್ಟಪಡುತ್ತೇನೆ. ಆದ್ದರಿಂದ ಈಗ ಸಾವಿರಾರು ಕೈಗಳಿಂದ ಕೂಡಿ ವಿಶ್ವರೂಪಶರೀರಯಾಗಿರುವ ನೀನು ಕೃಪೆಮಾಡಿ ಚತುರ್ಭುಜನಾಗಿ ಹಿಂದಿನ ನಿನ್ನ ದರ್ಶನವನ್ನೇ ಪ್ರಸಾದಿಸಬೇಕೆಂದು ಪ್ರಾರ್ಥಿಸುತ್ತೇನೆ (೪೬).

### ಭಗವಂತನ ವಿಶ್ವರೂಪದರ್ಶನವನ್ನು ಪಡೆಯಲು ಭಕ್ತಿಯೊಂದೇ ಉಪಾಯ
### (ಶ್ಲೋಕಗಳು ೪೭ರಿಂದ ೫೫)

ಭಗವಂತನು ಹೇಳುತ್ತಾನೆ. "ಅರ್ಜುನಾ! ತೇಜೋಮಯವಾಗಿ, ಸಮಸ್ತ ಪ್ರಪಂಚಾತ್ಮಕವಾಗಿ ಅಂದರೆ ವಿಶ್ವರೂಪವಾಗಿ, ಆದಿಯೂ ಮಧ್ಯವೂ ಕೊನೆಯೂ ಇಲ್ಲದುದಾಗಿ, ಸಕಲ ಪದಾರ್ಥಗಳಿಗೂ ಮೊದಲನೆಯದದ್ದಾಗಿ ಇರುವ ಈ ನನ್ನ

ದಿವ್ಯರೂಪವನ್ನು ನಿನ್ನೊಬ್ಬನನ್ನು ಹೊರತು ಮತ್ತೊಬ್ಬರಿಗೂ ನಾನು ತೋರಿಸಿಲ್ಲ; ನೀನು ನನ್ನಲ್ಲಿ ವಿಶೇಷವಾಗಿ ಭಕ್ತಿಯಿಂದ ಕೂಡಿರುವನಾಗಿರುವುದರಿಂದ ನಾನು ಸಂತೋಷಗೊಂಡವನಾಗಿ ನನ್ನ ಸತ್ಯಸಂಕಲ್ಪಯೋಗದಿಂದ ನಿನಗೆ ಈ ದುರ್ಲಭವಾದ ದರ್ಶನವನ್ನು ದಯಪಾಲಿಸಿದೆನು (೪೭) ಕುರುಶ್ರೇಷ್ಠನೇ! ನೀನಲ್ಲದ ಇತರ ಮುಮುಕ್ಷುಗಳು ಭಗವಂತನಾದ ನನ್ನನ್ನು ಈ ವಿಧವಾದ ನಿಜಸ್ವರೂಪದಲ್ಲಿ ಸಾಕ್ಷಾತ್ಕರಿಸಬೇಕಾದರೆ ಅವರುಗಳಲ್ಲಿ ಅತ್ಯಂತ ಹೆಚ್ಚಾದ ಭಕ್ತಿಯು ಮಾತ್ರ ಉಂಟಾಗಬೇಕು; ಆಗ ಅವರಿಗೆ ಈ ದಿವ್ಯದರ್ಶನವು ಉಂಟಾಗುತ್ತದೆ. ಮುಮುಕ್ಷುಗಳಿಗೆ ಭಗವಂತನಲ್ಲಿ ಭಕ್ತಿ ಇಲ್ಲದಿದ್ದರೆ, ಅವರುಗಳು ಯಜ್ಞಗಳನ್ನು ಮಾಡಿದರೂ, ದಾನಕೊಟ್ಟರೂ, ತಪಸ್ಸುಗಳನ್ನು ಮಾಡಿದರೂ ಮತ್ತು ಈ ವಿಧವಾದ ಇತರ ಯಾವ ಕ್ರಿಯೆಗಳನ್ನು ಮಾಡಿದರೂ ಈ ದಿವ್ಯದರ್ಶನವನ್ನು ಪಡೆಯಲಾರರು. ಆದರೆ ಈ ವಿಶ್ವರೂಪದರ್ಶನವನ್ನು ಪಡೆಯುವುದಕ್ಕೆ ನಿರತಿಶಯ ಮತ್ತು ಅನನ್ಯ ಭಕ್ತಿಯೊಂದೇ ಮಾರ್ಗ (೪೮) ಈ ವಿಧವಾದ ನನ್ನ ಈ ಘೋರರೂಪವನ್ನು ನೋಡಿ ಮೂರ್ಛೆಹೋಗಬೇಡ. ನನ್ನ ಭಯಂಕರ ರೂಪದ ದರ್ಶನದಿಂದ ನಿನಗೆ ಭಯವೂ, ದುಃಖವೂ ಉಂಟಾಗದಿರಲಿ! ಇನ್ನು ನೀನು ಭಯವಿಲ್ಲದವನಾಗಿ, ಪ್ರೀತಿಯಿಂದ ಕೂಡಿದ ಮನಸ್ಸುಳ್ಳವನಾಗಿ ಹಿಂದೆ ನೋಡಿದಂಥಾ ಈ ನನ್ನ ಸಹಜರೂಪವನ್ನು ತಿರುಗಿಯೂ ನೋಡು. ಅಂದರೆ, ನಿನಗೆ ಅಭ್ಯಾಸವಾದ ಮೊದಲಿನ ಸೌಮ್ಯರೂಪವನ್ನೇ ತೋರಿಸುತ್ತೇನೆ; ಅದನ್ನೇ ದರ್ಶನ ಮಾಡು (೪೯).

ಪಾಂಡುಕುಮಾರನಾದ ಅರ್ಜುನನನ್ನು ನೋಡಿ ಶ್ರೀಕೃಷ್ಣನು ಹೀಗೆ ಹೇಳಿ ತಿರಗಿಯೂ ತನ್ನ ಚತುರ್ಭುಜದಿಂದ ಕೂಡಿದ ಆಕಾರದಿಂದ ದರ್ಶನವನ್ನುಕೊಟ್ಟನು; ಅದೂ ಅಲ್ಲದೆ ಅಭ್ಯಾಸವಿಲ್ಲದ ಸ್ವರೂಪವನ್ನು ನೋಡಿ ಭಯವನ್ನು ಹೊಂದಿದ ಅರ್ಜುನನನ್ನು ಅಭ್ಯಾಸವಾದ ಶಾಂತವಾದ ಆಕಾರದಿಂದ ಕೂಡಿದವನಾಗಿದ್ದು ಸಮಾಧಾನಮಾಡಿದನು (೫೦). ಒಡನೆಯೇ ಅರ್ಜುನನು ಹೀಗೆ ಹೇಳಿದನು "ಹೇ ಜನಾರ್ಧನಾ! ಅಪರಿಮಿತವಾದ ಅತಿಶಯವಾದ ಲಾವಣ್ಯ, ಸೌಂದರ್ಯ, ಸೌಕುಮಾರ್ಯ ಮುಂತಾದವುಗಳಿಂದ ಕೂಡಿದ್ದಾಗಿ, ಅಧಿಕ ಸೌಮ್ಯವಾಗಿರುವಂಥಾ ಮನುಷ್ಯಾಕಾರವಾದ ನಿನ್ನೊಬ್ಬನಿಗೇ ಸ್ವಂತವಾದ ನಿನ್ನ ಈ ದಿವ್ಯವಿಗ್ರಹವನ್ನು ಪುನಃ ಈಗ ನೋಡುತ್ತಿದೇನೆ. ಈಗ ಪ್ರಸನ್ನವಾದ ಮನಸ್ಸುಳ್ಳವನಾಗಿದ್ದೇನೆ; ಆದುದರಿಂದ ಪೂರ್ವದ ಸ್ವಭಾವವನ್ನೂ ಪ್ರಜ್ಞೆಯನ್ನೂ ಹೊಂದಿದ್ದೇನೆ" (೫೧).

ಭಗವಂತನು ಪುನಃ ಅರ್ಜುನನ್ನು ಕುರಿತು ಹೀಗೆ ಹೇಳಿದನು. "ಅರ್ಜುನಾ! ನಾನು ನಿನಗೆ ಈವಾಗ ತೋರಿಸಿದ ಎಲ್ಲರನ್ನೂ ಆಳುವಂಥಾ ಈ ನನ್ನ ವಿಶ್ವರೂಪವನ್ನು ನೋಡುವುದಕ್ಕೆ ಒಬ್ಬರಿಂದಲೂ ಆಗಲಾರದು. ದೇವತೆಗಳೆಲ್ಲರೂ ಈ ದಿವ್ಯರೂಪವನ್ನು ದರ್ಶನಮಾಡಬೇಕೆಂದು ಎಷ್ಟೋ ಕಾಲದಿಂದ ಎದುರು ನೋಡುತ್ತಿದ್ದಾರೆಯೇ ಹೊರತು ಒಬ್ಬರಾದರೂ ದರ್ಶನಮಾಡಿಲ್ಲ (೫೨). ಹಾಗಾದರೆ ಈಗ ನೀನು ಯಾವ ಆಕಾರದಿಂದ ನನ್ನನ್ನು ನೋಡಿದ್ದೀಯೋ ಅಂಥಾ ಈ ದಿವ್ಯದರ್ಶನವು ಯಾವ ಉಪಾಯದಿಂದ ಉಂಟಾಗುತ್ತದೆ ಎಂಬುದನ್ನು ವಿಶದವಾಗಿ ತಿಳಿ. ವೇದಗಳನ್ನು ಓದುವುದು, ಓದಿಸುವುದು ಮುಂತಾದವುಗಳಿಂದಲಾಗಲೀ, ಯಾಗದಿಂದಲಾಗಲೀ, ಹೋಮದಿಂದಲಾಗಲೀ, ತಪಸ್ಸಿನಿಂದಾಗಲೀ, ದಾನದಿಂದಲಾಗಲೀ ಮತ್ತು ಭಕ್ತಿ ಇಲ್ಲದ ಇತರ ಯಾವ ಉಪಾಯಗಳಿಂದಲಾಗಲೀ ಯಾರೂ ನನ್ನನ್ನು ಈ ನನ್ನ ನಿಜಸ್ವರೂಪದಲ್ಲಿ ನೋಡುವುದಕ್ಕೆ ಆಗುವುದಿಲ್ಲ (೫೩). ಆದರೆ ಯಾವ ಮಹಾತ್ಮರು ಭಗವಂತನನ್ನೇ ಸೇರಬೇಕೆಂಬ ಹೆಚ್ಚಾದ ಭಕ್ತಿಯನ್ನು ಪಡೆಯುತ್ತಾರೆಯೋ ಅವರು ಮಾತ್ರವೇ ನನ್ನ ನಿಜಸ್ವರೂಪವನ್ನು ಮೊದಲು ಶಾಸ್ತ್ರವ್ಯಾಸಂಗದಿಂದ ಬುದ್ಧಿಯಲ್ಲಿ ತಿಳಿಯುತ್ತಾರೆ, ಕ್ರಮೇಣ ಪ್ರತ್ಯಕ್ಷವಾಗಿಯೂ ಭಗವಂತನನ್ನು ದರ್ಶನಮಾಡುತ್ತಾರೆ ಮತ್ತು ಕೊನೆಯಲ್ಲಿ ಅವರು ಶಾಶ್ವತವಾಗಿ ಅಂದರೆ ನಿಜವಾಗಿ ಭಗವಂತನಲ್ಲಿ ಪರಿಪೂರ್ಣವಾಗಿ ಸೇರಿಕೊಳ್ಳುತ್ತಾರೆ. ಒಂದು ವಿಷಯವನ್ನು ಇಲ್ಲಿ ಗಮನಿಸಬೇಕು," ಭಗವಂತನಲ್ಲಿರುವ ಅವರ ಭಕ್ತಿಯು ಇತರ ದೇವತೆಗಳ ಮೇಲಿನ ಭಕ್ತಿಯಿಂದ ಮಿಶ್ರವಾಗಿ ಕಲ್ಮಷವಾಗಿರಕೂಡದು ಅಥವ ಅರ್ಥ, ಕಾಮ, ಧರ್ಮ, ಕೈವಲ್ಯ ಮುಕ್ತಿ ಎಂಬ ಇತರ ಪುರುಷಾರ್ಥಗಳನ್ನು ಹೊಂದುವುದಕ್ಕೆ ಸಹಾಯವಾಗಿರಕೂಡದು. ಭಗವಂತನನ್ನೇ ದರ್ಶನಮಾಡಿ ಅವನನ್ನೇ ಹೊಂದಬೇಕೆಂಬ ಉತ್ತಮಜ್ಞಾನಿಯ ಧ್ಯೇಯದಿಂದ ಕೂಡಿರಬೇಕು (೫೪). ಇಂತಹ ಮಹಾತ್ಮರಾದ ಜ್ಞಾನಿಗಳಾದ ಉತ್ತಮರಾದ ಭಕ್ತರು ತಮ್ಮ ಕಾಲವನ್ನೆಲ್ಲಾ ಯಾವ ರೀತಿಯಲ್ಲಿ ಕಳೆಯುತ್ತಾರೆ ಎಂಬುದನ್ನು ತಿಳಿ ಅವರು ವೇದವನ್ನು ಅಧ್ಯಯನಮಾಡುವುದು ಮುಂತಾದ ಸಕಲ ಕರ್ಮಗಳನ್ನೂ ಭಗವಂತನ ಆರಾಧನವೆಂದೇ ಭಾವಿಸಿ ಮಾಡುತ್ತಾರೆ; ಅಂದರೆ ಯಾವ ಕೆಲಸಗಳನ್ನು ಮಾಡಿದರೂ ಎಲ್ಲವೂ ಭಗವಂತನಿಗೇ ಸೇರಿದ್ದು ಎಂದು ಅವನಿಗೆ ಅರ್ಪಣಮಾಡುತ್ತಾರೆ. (ಮತ್ಕರ್ಮಕೃತ್). ಭಗವಂತನೇ ಎಲ್ಲರಿಗಿಂತಲೂ ಮತ್ತು ಎಲ್ಲವುಗಳಿಗಿಂತಲೂ ಅತ್ಯಂತ ಮೇಲಾದವನು ಮತ್ತು ಶ್ರೇಷ್ಠನು ಎಂಬುದನ್ನು ಶಾಸ್ತ್ರವ್ಯಾಸಂಗದಿಂದ ಬುದ್ಧಿಯಲ್ಲಿ ತಿಳಿಯುತ್ತಾ, ಅವನೇ ತಮಗೆ ಉತ್ತಮವಾದ ಪ್ರಯೋಜನವೆಂದು ನಂಬಿ ಅವನ ಸ್ವರೂಪ, ರೂಪ, ಗುಣ, ವಿಭವ ಮತ್ತು ಐಶ್ವರ್ಯಗಳನ್ನು ವಿಧವಿಧವಾಗಿ ಮನನಮಾಡುತ್ತಾರೆ. (ಮತ್ ಪರಮೋ). ಭಗವಂತ

ನಲ್ಲಿ ಅತ್ಯಧಿಕವಾದ ಭಕ್ತಿಯನ್ನು ಪಡೆದವರಾಗಿರುವುದರಿಂದ ಅವರು ಭಗವಂತನ ವಿಷಯವಾಗಿಯೇ ತಮ್ಮ ಕಾಲವನ್ನು ಕಳೆಯದೇ ಹೋದರೆ ತಮ್ಮ ಜೀವನವನ್ನೇ ಧರಿಸಿರಲಾರರು ಮತ್ತು ಅವರು ಭಗವಂತನನ್ನು ಬಿಟ್ಟು ಮತ್ತೆ ಯಾರನ್ನೂ ಆಶ್ರಯಿಸದೆ ಅವನನ್ನೇ ಉಪಾಯವಾಗಿ ಸ್ವೀಕರಿಸಿರುವರು. ಆದುದರಿಂದ ಅವರು ತಮ್ಮ ವಿರಾಮಕಾಲಗಳಲ್ಲೆಲ್ಲಾ ಅವನ ಕೀರ್ತನೆಗಳನ್ನು ಹಾಡುತ್ತಾರೆ; ಅವನ ಸ್ವರೂಪ ರೂಪ ಕಲ್ಯಾಣಗುಣಗಳನ್ನು ಸ್ಮರಿಸುತ್ತಾರೆ; ಅವನ ವಿಶಿಷ್ಟಸ್ವರೂಪವಾದ ದಿವ್ಯಮಂಗಳ ವಿಗ್ರಹಗಳಿಗೆ ಅರ್ಚನೆಮಾಡುತ್ತಾರೆ; ಅವನು ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಅಂತರ್ಯಾಮಿಯಾಗಿ ಇರುವನೆಂಬ ಭಾವನೆಯನ್ನು ಹೊಂದಿ ಸೂರ್ಯ, ಚಂದ್ರ, ನಕ್ಷತ್ರಗಳು, ಭೂಮಿ, ಸಮುದ್ರ, ಪರ್ವತ, ಮೈದಾನ, ಕಾಡು, ನದಿ, ಸರೋವರ ಮುಂತಾದ ಸೌಂದರ್ಯಯುತ ಇರುವಿಕೆಗಳಲ್ಲಿ ಅವು ಒಂದೊಂದೂ ಭಗವಂತನೇ ತಮ್ಮ ಎದುರಿಗೆ ನಿಂತಿರುವನೆಂದು ತಿಳಿದು ಅವುಗಳನ್ನು ವಂದಿಸಿ ನಮಸ್ಕಾರಮಾಡುತ್ತಾರೆ ಮತ್ತು ಭಗವಂತನ ನಿರಾಕಾರ ಸಾಕಾರ ದಿವ್ಯರೂಪಗಳನ್ನು ಧ್ಯಾನಮಾಡುತ್ತಾರೆ. (ಮದ್ಭಕ್ತಃ). ಇಂಥಾ ಭಕ್ತರಿಗೆ ಮನಸ್ಸಿನಲ್ಲಿ ಭಗವಂತನ ವಿಷಯವಾದ ಚಿತ್ತವೃತ್ತಿಗಳು ಇಲ್ಲದಿದ್ದರೆ ಅವರ ಮನಸ್ಸಿನಲ್ಲಿ ದುಃಖವುಂಟಾಗುತ್ತದೆ; ಆ ಪವಿತ್ರ ಚಿತ್ತವೃತ್ತಿಗಳು ಇರುವ ಕಾಲದಲ್ಲೆಲ್ಲಾ ಅವರ ಮನಸ್ಸಿನಲ್ಲಿ ಸಂತೋಷ ಅಥವ ಆನಂದವುಂಟಾಗುತ್ತದೆ. ಆದುದರಿಂದಲೇ ಅವರು ಇಂದ್ರಿಯ ಸುಖಗಳೇ ಮೊದಲಾದ ಇತರ ವಿಷಯಗಳಲ್ಲಿ ಸಂಗವನ್ನು ಅಂದರೆ ಅಭಿಮಾನವನ್ನು ಸಂಪೂರ್ಣವಾಗಿ ಬಿಡುವರು. (ಸಂಗವರ್ಜಿತಃ). ಇಷ್ಟೇ ಅಲ್ಲ; ಅವರು ತಮಗೆ ಏನಾದರೂ ದುಃಖವು ಸಂಭವಿಸಿದರೆ ಅದು ತಾವು ಮಾಡಿದ ಪಾಪಕೃತ್ಯಗಳ ಫಲವೆಂದು ತಿಳಿಯುತ್ತಾರೆ; ಅದು ಇತರ ಪ್ರಾಣಿಗಳ ಕಾರ್ಯಗಳಿಂದ ಉಂಟಾಯಿತೆಂದು ತಪ್ಪುತಿಳಿದು ಅದರಮೇಲೆ ಕೋಪಮಾಡಿ ಅವರನ್ನು ದ್ವೇಷಿಸುವುದಿಲ್ಲ. ಸಕಲ ಭೂತಗಳೂ ಭಗವಂತನನ್ನು ಅಂತರ್ಯಾಮಿಯಾಗಿ ಪಡೆದು, ಅವನ ಅಧೀನಕ್ಕೆ ಒಳಪಟ್ಟಿವೆ ಎಂಬ ಜ್ಞಾನವನ್ನು ಪಡೆದಿರುವುದರಿಂದ, ಅವು ತಮಗೆ ಕೇಡನ್ನು ಮಾಡಿದರೂ ಭಗವಂತನೇ ತಮ್ಮ ಕರ್ಮಗಳಿಗೆ ಅನುಗುಣವಾಗಿ ಅವುಗಳ ಮೂಲಕ ತಮಗೆ ದುಃಖವನ್ನು ಉಂಟುಮಾಡುವ ಕಾರ್ಯಗಳನ್ನು ನಡೆಸಿರುವನೆಂಬುದನ್ನು ತಿಳಿದು ಅವರು ಯಾವ ಪ್ರಾಣಿಗಳನ್ನೂ ಅವು ತಮ್ಮ ವೈರಿಗಳೆಂದು ತಿಳಿಯುವುದಿಲ್ಲ. ಇನ್ನೇನು ಅವರು ಸಕಲ ಭೂತಗಳೂ ಭಗವಂತನ ವಿಶಿಷ್ಟಸ್ವರೂಪವೆಂಬ ಭಾವನೆಯನ್ನು ಹೃದಯದಲ್ಲಿ ವೃದ್ಧಿಪಡಿಸಿ ಜಗತ್ಕಲ್ಯಾಣಕ್ಕಾಗಿ ಮತ್ತು ಅವುಗಳ ಕ್ಷೇಮಕ್ಕಾಗಿ ಉಪಕಾರಕಾರ್ಯಗಳನ್ನು ಭಗವತ್ಕೈಂಕರ್ಯವೆಂಬ ಭಾವನೆಯಿಂದ ಸದಾಕಾಲದಲ್ಲೂ ಮಾಡುತ್ತಲೇ ಇರುವರು. (ನಿರ್ವೈರಸ್ಸರ್ವಭೂತೇಷು)–ಇಂಥಾ ಜ್ಞಾನಿಗಳಾದ ಉತ್ತಮರಾದ ಭಕ್ತರು ಖಂಡಿತವಾಗಿಯೂ ಅವಿದ್ಯೆಯೇ ಮೊದಲಾದ ಎಲ್ಲಾ ದೋಷಗಳನ್ನೂ ಸಂಪೂರ್ಣವಾಗಿ ತೊಲಗಿಸಿಕೊಂಡು ಯಾವಾಗಲೂ, ಭಗವಂತನನ್ನು ಸಾಕ್ಷಾತ್ಕರಿಸುತ್ತಾರೆ; ಅವನನ್ನು ಅನುಭವಿಸುತ್ತಾರೆ; ಮತ್ತು ಅವನನ್ನು ಹೊಂದಿ ಪ್ರವೇಶಿಸುತ್ತಾರೆ. (ಸಃ ಮಾಂ ಏತಿ ಪಾಂಡವ)–(೫೫)

# ಭಗವದ್ಗೀತಾ ಹನ್ನೆರಡನೆಯ ಅಧ್ಯಾಯ

## ಭಕ್ತಿಯೋಗ

### ಅರ್ಜುನನ ಪ್ರಶ್ನೆ ಶ್ಲೋಕ–೧

ಅನಂತ ಕಲ್ಯಾಣಗುಣಗಳನ್ನು ಪಡೆದಿರುವ ಶ್ರೀಕೃಷ್ಣನು ತನ್ನ ಶಿಷ್ಯನಾದ ಅರ್ಜುನನಿಗೆ ಭಕ್ತಿಯೋಗನಿಷ್ಠರುಗಳಿಗೆ ಪ್ರಯೋಜನವಾಗಿ, ಪರಬ್ರಹ್ಮವಾಗಿ, ಪರಮಪುರುಷನಾಗಿರುವ ಭಗವಂತನ ನಿರಂಕುಶವಾದ ಐಶ್ವರ್ಯದಿಂದ ಕೂಡಿದ ದಿವ್ಯವಾದ ವಿಶ್ವರೂಪದ ಸ್ವರೂಪವನ್ನು ವಿಸ್ತಾರವಾಗಿ ವರ್ಣಿಸಿ ಅದನ್ನೇ ಅವನಿಗೆ ಸಾಕ್ಷಾತ್ಕಾರಮಾಡಿಸಿದನು. ಆಮೇಲೆ ಅವನಲ್ಲಿ ಅನನ್ಯಭಕ್ತಿಮಾಡುವವರು ಮಾತ್ರ ಹೀಗೆ ಅವನ ನಿಜಸ್ವರೂಪವನ್ನು ಶಾಸ್ತ್ರಮುಖದಿಂದ ಅರಿಯುವುದೂ, ಪ್ರತ್ಯಕ್ಷವಾಗಿ ನೋಡುವುದೂ ಮತ್ತು ಯಾವಾಗಲೂ ಅವನ ಸನ್ನಿಧಿಯಲ್ಲೇ ಇರುವುದೂ ಎಂಬ ಉತ್ತಮಫಲಗಳನ್ನು ಹೊಂದುವರು ಎಂದು ಉಪದೇಶಮಾಡಿದನು. ಈಗ ಅರ್ಜುನನ ಮನಸ್ಸಿನಲ್ಲಿ ಒಂದು ಸಂದೇಹವು ತಲೆದೋರಿತು. ಶ್ರೀಕೃಷ್ಣನು ಮೊದಲು ಆರು ಅಧ್ಯಾಯಗಳಲ್ಲಿ ತನಗೆ ಉಪದೇಶಮಾಡಿದ ಆತ್ಮಸಾಕ್ಷಾತ್ಕಾರವನ್ನು ಪಡೆಯುವುದಕ್ಕೆ ಸಹಕಾರಿಯಾದ ಜ್ಞಾನಯೋಗವು ಉತ್ತಮವಾದದ್ದೇ ಅಥವ ಏಳನೆಯ ಅಧ್ಯಾಯದಿಂದ ಹನ್ನೊಂದನೆಯ ಅಧ್ಯಾಯದ ಕೊನೆಯವರೆಗೆ ಉಪದೇಶಮಾಡಿದ ಭಕ್ತಿಯೋಗವು ಉತ್ತಮವೆ ಎಂಬ ವಿಚಾರವನ್ನು ತಿಳಿಯಲು ಆಶೆಪಡುತ್ತಾನೆ. ಆದುದರಿಂದ ಅರ್ಜುನನು ಶ್ರೀಕೃಷ್ಣನನ್ನು ಕುರಿತು

ಹೀಗೆ ಪ್ರಶ್ನೆಮಾಡುತ್ತಾನೆ. "ಶ್ರೀಕೃಷ್ಣನೇ! ನೀನು ಈಗ ತಾನೇ ಉಪದೇಶಮಾಡಿದ ಪ್ರಕಾರ ಭಗವಂತನನ್ನೇ ಯಾವಾಗಲೂ ಉತ್ತಮಫಲವಾಗಿ ತಿಳಿದು ಭಕ್ತರುಗಳಾಗಿ ಅವನನ್ನು ಸಕಲ ಐಶ್ವರ್ಯಗಳಿಂದ ಕೂಡಿರುವವನಾಗಿಯೂ, ಅಪರಿಮಿತ ಅತಿಶಯದಿಂದ ಕೂಡಿದ ಸೌಂದರ್ಯ, ಸೌಶೀಲ್ಯ, ಸರ್ವಜ್ಞತ್ವ, ಸತ್ಯಸಂಕಲ್ಪತ್ವ ಮುಂತಾದ ಸಂಖ್ಯೆ ಇಲ್ಲದ ಗುಣಸಮುದ್ರನಾಗಿರುವುದಾಗಿಯೂ ಯಾರು ಭಗವಂತನನ್ನು ಉಪಾದಿಸುತ್ತಾರೆಯೋ ಅವರುಗಳೂ ಮತ್ತು ಯಾರಾದರೆ ಅಕ್ಷರವೆಂಬುವ ಪ್ರತ್ಯಗಾತ್ಮಸ್ವರೂಪವನ್ನು ಅಂದರೆ ಮುಕ್ತಸ್ವರೂಪನಾದ ಜೀವಾತ್ಮನನ್ನು ಕಣ್ಣು ಮುಂತಾದ ಇಂದ್ರಿಯಗಳಿಂದ ತಿಳಿಯಲ್ಪಡಲಾರನೆಂಬದಾಗಿ ಉಪಾಸಿಸುತ್ತಾರೆಯೋ ಅವರುಗಳೂ ಈ ಎರಡು ತೆರಹದ ಯೋಗಿಗಳಲ್ಲಿ ಯಾರು ಪ್ರಾಜ್ಞರಾದ ಯೋಗಿಗಳು ಎಂಬುದನ್ನು ನನಗೆ ಸಂದೇಹರಹಿತವಾಗಿ ತಿಳಿಸಬೇಕು.

### ಭಗವಂತನು ಅರ್ಜುನನ ಪ್ರಶ್ನೆಗೆ ಬದಲು ಹೇಳುತ್ತಾನೆ.

### (ಶ್ಲೋಕಗಳು ೨ ರಿಂದ ೭ರ ವರಿಗೆ)

ಯಾವ ಮುಮುಕ್ಷುಗಳು ಭಗವಂತನಲ್ಲಿ ಅತ್ಯಂತ ಪ್ರೀತಿಯಿಂದ ಮನಸ್ಸನ್ನು ಅವನಲ್ಲಿಯೇ ಇಟ್ಟು, ಪರಮಾತ್ಮನೊಂದಿಗೇನೇ ನಿರಂತರವಾಗಿ ಇರಬೇಕೆಂದು ಆಶೆಪಟ್ಟು ಆ ಭಗವಂತನನ್ನೇ ಶ್ರದ್ಧೆಯಿಂದ ಉಪಾಸನೆ ಮಾಡುತ್ತಾರೆಯೋ ಅವರೀಗ ಅತ್ಯಂತ ಯುಕ್ತತಮರು; ಅಂದರೆ ಶೀಘ್ರದಲ್ಲಿ ಭಗವಂತನನ್ನು ಹೊಂದುತ್ತಾರೆ (೨) ಹಾಗಾದರೆ ಶುದ್ಧ ಪ್ರತ್ಯಗಾತ್ಮಸ್ವರೂಪನ್ನು ಉಪಾಸನೆ ಮಾಡುವವರ ಗತಿಯೇನು ? ಅವರು ಶುದ್ಧ ಪ್ರತ್ಯಗಾತ್ಮ ಸ್ವರೂಪವನ್ನು ಅಥವ ಮುಕ್ತ ಜೀವನನ್ನು ವಿಕಾರವಿಲ್ಲದುದಾಗಿಯೂ, ದೇವನೆಂದಾಗಲೀ ಮನುಷ್ಯನೆಂದಾಗಲೀ ಇನ್ನೂ ಯಾವ ವಿಧದಿಂದಲಾಗಲೀ ನಿರ್ದೇಶಿಸಲಾರದುದಾಗಿಯೂ, ಆದ್ದರಿಂದಲೇ ಕಣ್ಣು ಮುಂತಾದ ಇಂದ್ರಿಯಗಳಿಗೆ ಗೋಚರಿಸದೆ ಇರುವುದಾಗಿಯೂ, ದೇವತೆಗಳು ಮನುಷ್ಯರು ಮುಂತಾದ ಶರೀರಗಳಲ್ಲೆಲ್ಲಾ ಪ್ರವೇಶಿಸಿ ಆಯಾ ವಿಧವಾಗಿ ತಿಳಿಯತಕ್ಕುದುದಾಗಿಯೂ, ಆದ್ದರಿಂದಲೇ ಊಹಿಸಲು ಅಸಾಧ್ಯವಾಗಿ ಆಯಾದೇವಾದಿಗಳಿಗೆ ಸೇರಿದ ರೂಪಗಳಲ್ಲಿ ಕಟ್ಟುಪಡದೆ ಇರುವುದಾಗಿಯೂ. ತನ್ನ ನಿಜಸ್ವರೂಪಾಕಾರದಲ್ಲಿ ಬದಲಾವಣೆ ಹೊಂದದೆ ಶಾಶ್ವತವಾಗಿ ಇರುವುದಾಗಿಯೂ, ಚಲನೆ ಇಲ್ಲದುದಾಗಿಯೂ, ಒಟ್ಟಿನಲ್ಲಿ ನಿತ್ಯವಾಗಿ ಇರುವುದಾಗಿಯೂ ಉಪಾಸಿಸುತ್ತಾರೆ. ಇಷ್ಟೇ ಅಲ್ಲ; ಅವರು ಹೀಗೆ ಉಪಾಸಿಸುವಾಗ ಕಣ್ಣು. ಕಿವಿ ಮುಂತಾದ ಎಲ್ಲಾ ಇಂದ್ರಿಯಗಳನ್ನೂ ತಮ್ಮತಮ್ಮ ವ್ಯಾಪಾರಗಳಿಂದ ಅಡಗಿಸುವರು. ಸಕಲ ಆತ್ಮರುಗಳಲ್ಲಿಯೂ ಸಮಬುದ್ಧಿಗಳಾಗಿರುವರು ಅಂದರೆ ಆತ್ಮನು ಜ್ಞಾನವೇ ಆಕಾರವಾಗಿ ಎಲ್ಲೆಲ್ಲಿಯೂ ಒಂದೇ ರೀತಿಯಾಗಿ ಇರುತ್ತಾನೆಂದು ತಿಳಿದಿರುವರು ಮತ್ತು ತನ್ಮೂಲಕ ಸಕಲಭೂತಗಳಲ್ಲಿಯೂ ಅಧಿಕ ಪ್ರೀತಿಯನ್ನು ಇಟ್ಟಿರುವರು. ಇಂಥಾ ಅಕ್ಷರ ಉಪಾಸಕರು ಅಥವ ಶುದ್ಧ ಪ್ರತ್ಯಗಾತ ಉಪಾಸಕರು ಅಥವ ಮುಕ್ತಾತ್ಮ ಸ್ವರೂಪ ಉಪಾಸಕರೂ ಕೂಡ ಕೊನೆಯಲ್ಲಿ ಭಗವಂತನನ್ನು ಸೇರುತ್ತಾರೆ; ಅಂದರೆ ಸಂಸಾರ ಸಂಬಂಧದಿಂದ ಬಿಡಲ್ಪಟ್ಟವರಾಗಿ ಭಗವಂತನಿಗೆ ಸಮನಾಗಿ ಪ್ರಕಾಶಿಸುವ ಮುಕ್ತ ಆತ್ಮ ಸ್ವರೂಪವನ್ನೇ ಹೊಂದಿ ಭಗವಂತನನ್ನೇ ಸೇರುತ್ತಾರೆ. (೩–೪) ಮನುಷ್ಯರಿಗೆ ಅನಾದಿಕಾಲದಿಂದ ದೇಹಸಂಬಂಧವಿರುವುದರಿಂದ ಅವರ ಜ್ಞಾನವು ಶುದ್ಧವಾಗಿ ವಿಭುವಾಗಿರುವುದಿಲ್ಲ; ಕಲ್ಮಷಗಳಿಂದ ಕೂಡಿರುವುದಾಗಿ ಸಂಕುಚಿತವಾಗಿರುತ್ತದೆ; ಅವರು ದೇಹವನ್ನೇ ಆತ್ಮವೆಂದು ತಿಳಿಯುತ್ತಾರೆ. ಅದುದರಿಂದ ಅವರು ಇಂದ್ರಿಯಗಳಿಗೆ ಗೋಚರವಲ್ಲದ ಶುದ್ಧ ಪ್ರತ್ಯಗಾತ್ಮವನ್ನು ಉಪಾಸನೆ ಮಾಡುವುದರಲ್ಲಿ ಕ್ಲೇಶವು ಎಂದರೆ ಕಷ್ಟವು ಹೆಚ್ಚಾಗಿರುತ್ತದೆ. ಯಾರು ಬಹಳ ಅಧಿಕವಾಗಿ ಶ್ರಮಪಟ್ಟು ಪ್ರತ್ಯಗಾತ್ಮಸ್ವರೂಪ ಸಾಕ್ಷಾತ್ಕಾರ ಯೋಗ ಅಥವ ಅಕ್ಷರೋಪಾಸನೆಯನ್ನು ಮಾಡುತ್ತಾರೆಯೋ ಅವರಿಗೆ ಮಾತ್ರ ಉತ್ತಮ ಫಲವು ದೊರೆಯುತ್ತದೆ ಬಹುಮಂದಿಯವರಿಗೆ ಈ ಅವ್ಯಕ್ತ ಉಪಾಸನೆಯನ್ನು ಕೈಗೊಳ್ಳುವುದಕ್ಕೆ ಆಗುವುದಿಲ್ಲ; ಹಾಗೆ ಅವರು ಕೈಗೊಂಡರೂ ಅವರು ಫಲವನ್ನು ಅನುಭವಿಸುವತನಕ ಅದನ್ನು ಮುಂದುವರಿಸುವುದಕ್ಕೂ ಆಗುವುದಿಲ್ಲ. (೫) ಆದುದರಿಂದ ಬಹುಮಂದಿ ಭಕ್ತರು ಅವ್ಯಕ್ತ ಅಕ್ಷರ ಉಪಾಸನೆ ಬದಲಾಗಿ ಭಗವಂತನ ಉಪಾಸನೆಯನ್ನು ಮಾಡುವುದು ಒಳ್ಳೆಯದು; ಅವರು ಯುಕ್ತತಮರು; ಏಕೆಂದರೆ ಅವರು ಭಗವಂತನ ಸಹಾಯದಿಂದ ಸುಲಭವಾಗಿ ತನ್ನ ಧ್ಯೇಯವನ್ನು ಸಾಧಿಸಿಕೊಳ್ಳುವರು. ಯಾರನ್ನು ಭಗವಂತನು ಮರಣವೆಂಬ ಸಾಗರದಿಂದ ಎತ್ತುತ್ತಾನೆ ? ಯಾವಮುಮುಕ್ಷುಗಳು ತಮ್ಮ ದೇಹವನ್ನು ಭರಿಸುವುದಕ್ಕೋಸ್ಕರ ಮಾಡಬೇಕಾದ ಲೌಕಿಕ ಕರ್ಮಗಳನ್ನೂ ಮತ್ತು ಯಜ್ಞ, ದಾನ. ತಪಸ್ಸು, ಹೋಮ ಮುಂತಾತ ವೈದಿಕ ಕರ್ಮಗಳನ್ನೂ, ಅವುಗಳ ಕಾರಣವಾದ ಪ್ರಯತ್ನ ಮನಸ್ಸಿನ ಉದ್ದೇಶ ಮತ್ತು ಅವುಗಳ ಫಲ ಎಲ್ಲವನ್ನೂ ಭಗವಂತನಲ್ಲಿ ಸಮರ್ಪಿಸುತ್ತಾರೋ, ಭಗವಂತನನ್ನೇ ದೊಡ್ಡ ಫಲವಾಗಿ ನೆನೆದು ಬೇರೆ ಯಾವುದನ್ನೂ ಇಚ್ಛಿಸದೆ ಅವನನ್ನು ಧ್ಯಾನಮಾಡಿ ಉಪಾಸನೆ ಮಾಡುತ್ತಾರೋ, ಅಂದರೆ ಯಾರು ಭಗವಂತನ ಧ್ಯಾನ ಅರ್ಚನೆ, ಪ್ರಣಾಮ, ಸ್ತುತಿ, ಕೀರ್ತನೆ ಮುಂತಾದುವುಗಳನ್ನು ಮಾಡುವುದರಲ್ಲಿ ಸಂತೋಷಪಡುತ್ತಾರೆಯೋ, ಯಾರು ಈ ಅರ್ಚನಾಗಳನ್ನು ಮಾಡುತ್ತಿರುವುದೇ ಕೊನೆಯ ಫಲವೆಂದು ತಿಳಿದು ಆನಂದ ಪಡುತ್ತಾರೆಯೋ ಅವರಲ್ಲಿ ಭಗವಂತನು ವಿಶೇಷವಾದ ಕೃಪೆಯನ್ನು ತೋರುತ್ತಾನೆ.

(Re-printed from the Mysore Vysya Patrika, March 1962)

M. V. P. PRESS, MYSORE.

# ಭಗವದ್ಗೀತಾ ಹನ್ನೆರಡನೆಯ ಅಧ್ಯಾಯ

ಮುಮುಕ್ಷುಗಳು ಭಗವಂತನೊಂದಿಗೆ ಸೇರಲು ಅಡ್ಡಿ ಮಾಡುತ್ತಿರುವ ಅವರ ಸಂಸಾರ ಬಂಧವನ್ನು ಭಗವಂತನೇ ಅತಿ ಶೀಘ್ರದಲ್ಲಿ ಕತ್ತರಿಸಿ, ಬಿಡುಗಡೆಯನ್ನು ಉಂಟುಮಾಡಿ, ಅವರನ್ನು ಜನನ ಮರಣ ವೆಂಬ ಸಾಗರದಿಂದ ಎತ್ತುತ್ತಾನೆ. (೬—೭)

### ಭಕ್ತಿಯೋಗದ ಅಭ್ಯಾಸಗಳು
### (ಅವರೋಹಣ ಕ್ರಮದಲ್ಲಿ)
### ಶ್ಲೋಕಗಳು ೮ ರಿಂದ ೧೨ ರ ವರಿಗೆ

(1) ಭಕ್ತಿಯೋಗ ಅಭ್ಯಾಸದಲ್ಲಿ ಅತ್ಯಂತ ಮೇಲಾದದ್ದು ಯಾವಾಗಲೂ ಭಗವಂತನ ವಿಷಯವಾಗಿಯೇ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸುವುದು ಮತ್ತು ಅವನಲ್ಲೇ ಬುದ್ಧಿಯನ್ನು ಅಥವ ಜ್ಞಾನವನ್ನು ಇಡುವುದು. ಭಗವಂತನೇ ತಾನು ಹೊಂದ ಬೇಕಾದ ಉತ್ತಮ ಪ್ರಯೋಜನವೆಂಬುವ ಬುದ್ಧಿಯಿಂದ ಕೂಡಿದವನಾಗಿ ಭಗವಂತನಲ್ಲಿಯೇ ಮನಸ್ಸನ್ನು ಇಟ್ಟರೆ ಭಕ್ತನು ಭಗವಂತನಲ್ಲಿಯೇ ನಿತ್ಯವಾಗಿದ್ದು ಬಾಳುತ್ತಾನೆ; ಇದರಲ್ಲಿ ಸಂದೇಹವೇ ಇಲ್ಲ. (೮)

(2) ಶೀಘ್ರದಲ್ಲಿ ಭಗವಂತನಲ್ಲಿಯೇ ಚಲಿಸದಿಹುವ ಮನಸ್ಸಿನಿಂದ ಕೂಡಿದವನಾಗಿರಲು ಭಕ್ತನಿಗೆ ಆಗದಿದ್ದ ಪಕ್ಷದಲ್ಲಿ ಅವನು ಅಭ್ಯಾಸಯೋಗದಿಂದಲೇ ಭಗವಂತನನ್ನು ಹೊಂದಲು ಇಷ್ಟಪಡಬೇಕು. ಅಭ್ಯಾಸ ಯೋಗವೆಂದರೇನು? ಸ್ವಭಾವ ವಾಗಿಯೇ, ಎಲ್ಲೆ ಇಲ್ಲದ, ಅತಿಶಯದಿಂದ ಕೂಡಿದ, ಸೌಂದರ್ಯ, ಸೌಕುಮಾರ್ಯ, ಸೌಹಾರ್ದ, ವಾತ್ಸಲ್ಯ, ಕಾರುಣ್ಯ, ಮಾಧುರ್ಯ, ಗಾಂಭೀರ್ಯ, ಔದಾರ್ಯ, ಶೌರ್ಯ, ವೀರ್ಯ, ಪರಾಕ್ರಮ, ಸರ್ವಜ್ಞತ್ವ, ಸಂತ್ಯಸಂಕಲ್ಪತ್ವ, ಸರ್ವೇಶ್ವರತ್ವ, ಸರ್ವಕಾರಣತ್ವ ಮುಂತಾದ ಕಲ್ಯಾಣ ಗುಣಗಳಿಗೆ ಆಧಾರನಾಗಿ, ಸಕಲ ಹೇಯಗಳಿಗೂ ಪ್ರತಿಭಟನಾಗಿರುವ ಭಗವಂತನಲ್ಲಿ, ಎಲ್ಲೆ ಇಲ್ಲದ ಪ್ರೀತಿಯಿಂದ ಕೂಡಿದ ಸ್ಮೃತಿರೂಪವಾದ ಮನಸ್ಸನ್ನು ನಿಲ್ಲಿಸಿ ಭಗವಂತನನ್ನು ಹೊಂದಲು ಪ್ರಯತ್ನಿಸುವುದು. (೯)

(3) ಭಕ್ತನಿಗೆ ಈ ವಿಧವಾಗಿ ಅಭ್ಯಾಸ ಯೋಗವನ್ನು ಮಾಡುವುದರಲ್ಲೂ ಸಾಮರ್ಥ್ಯವಿಲ್ಲದ ಪಕ್ಷದಲ್ಲಿ ಅವನು, ಭಗವಂತನಿಗೆ, ಪ್ರೀತಿಯಿಂದ, ಶ್ರೇಷ್ಠವಾದ ಕೈಂಕರ್ಯಗಳನು ಮಾಡಬೇಕು. ಯಾವನು ಭಗವಂತನನ್ನೇ ಉದ್ದೇಶಮಾಡಿ ಕೊಂಡು ಶ್ರೇಷ್ಠ ಕರ್ಮಗಳನ್ನು ಮಾಡುತ್ತಾನೆಯೋ ಅವನೂ ಕೂಡ ಸಿದ್ಧಿಯನ್ನು ಹೊಂದುತ್ತಾನೆ. ಹಾಗಾದರೆ ಭಗವಂತನ ಉದ್ದಿಶ್ಯವಾಗಿಯೇ ಮಾಡಬಹುದಾದ ಶ್ರೇಷ್ಠ ಕರ್ಮಗಳು ಯಾವುವು? ಊರಿನವರೆಲ್ಲರೂ ಸೇರಿ ದೇವರ ಪೂಜೆಯನ್ನು ಮಾಡಲು ಸಹಾಯವಾಗುವ ಗುಡಿಗಳನ್ನು ಕಟ್ಟಲು ಸಹಾಯ ಮಾಡುವುದು; ರೋಗಗಳಲ್ಲಿ ನರಳುತ್ತಿರುವವರಿಗೆ ಔಷಧಿಗಳನ್ನು ಕೊಟ್ಟು, ಅವರಿಗೆ ಆರೋಗ್ಯವನ್ನುಂಟುಮಾಡಿ, ಅವರಲ್ಲಿ ಭಕ್ತಿ ಭಾವನೆಗಳನ್ನು ಉಂಟುಮಾಡಲು ಸಹಾಯಮಾಡುವ ಆಸ್ಪತ್ರೆ ಗಳನ್ನು ಏರ್ಪಡಿಸಲು ಸಹಾಯ ಮಾಡುವುದು; ಬಡವರಾಗಿರುವ ಸನ್ಯಾಸಿಗಳಿಗೆ ಮತ್ತು ಭಗವದ್ಭಕ್ತರಿಗೆ ಊಟ ವಸತಿಗಳನ್ನು ಏರ್ಪಡಿಸಲು ಸಹಾಯ ಮಾಡುವುದು; ಬಾಲಕರೆಲ್ಲರೂ ಮುಂದೆ ಭಗವಂತನ ಭಕ್ತರಾಗುವಹಾಗೆ ವೇದಾದಿ ಶಾಸ್ತ್ರಗಳಲ್ಲಿ ಉತ್ತಮ ಶಿಕ್ಷಣವನ್ನು ಕೊಡುವ ಪಾಠಶಾಲೆಗಳನ್ನು ಏರ್ಪಾಡು ಮಾಡುವುದು, ಅಥವ ಅವುಗಳಿಗೆ ಸಹಾಯ ಮಾಡುವುದು; ದೇವರಿಗೆ ಹೂವುಗಳನ್ನು ಸಮರ್ಪಿಸುವುದಕ್ಕಾಗಿ ನಂದನ ವನಗಳನ್ನು ಏರ್ಪಡಿಸುವುದು; ಗುಡಿಗಳಲ್ಲಿರುವ ಅರ್ಚಾ ವಿಗ್ರಹಗಳಿಗೆ ದೀಪಗಳನ್ನು ಸಮರ್ಪಿಸುವುದು ಮತ್ತು ಬೀಸಣಿಗೆ ಯಿಂದ ಬೀಸುವುದು; ಈ ಪವಿತ್ರ ಸ್ಥಳಗಳನ್ನು ನೀರು ಹಾಕಿ ಶುದ್ಧಿಮಾಡುವುದು; ಮನೆಗಳಲ್ಲಿ ಭಗವಂತನ ಆರಾಧನೆಯನ್ನು ಮಾಡುವುದು; ಆ ಸಂದರ್ಭದಲ್ಲಿ ಹೂಮಾಲೆ ಕಟ್ಟುವುದು, ನಾಮಕೀರ್ತನೆ ಮಾಡುವುದು, ಪ್ರದಕ್ಷಿಣೆ ಮಾಡುವುದು, ಮಂಗಳ ಹಾಡುವುದು, ದಂಡ ನೀಡುವುದು ಇವೇ ಮುಂತಾದ ಕೈಂಕರ್ಯಗಳನ್ನು ಅತ್ಯಂತ ಪ್ರೀತಿಯಿಂದ ಭಗವಂತನ ಕೈಂಕರ್ಯ ವೆಂಬ ಉದ್ದೇಶದಿಂದಲೇ ಮಾಡಬೇಕು. ಹೀಗೆ ಅತ್ಯಂತ ಪ್ರೀತಿಯಿಂದ ಭಗವಂತನ ಕೈಂಕರ್ಯಗಳನ್ನು ಭಕ್ತನು ಮಾಡುತ್ತ ಬಂದರೆ ಅವನು ಅತಿ ಶೀಘ್ರದಲ್ಲಿ ಅಭ್ಯಾಸಯೋಗವನ್ನು ಹೊಂದಿ ತನ್ಮೂಲಕ ಭಗವಂತನಲ್ಲಿ ನೆಲೆಸಿದ ಮನಸ್ಸಿನಿಂದ ಕೂಡಿ, ಆಮೇಲೆ ಭಗವಂತನನ್ನು ಹೊಂದುವುವೆಂಬುವ ಸಿದ್ಧಿಯನು ಹೊಂದುತ್ತಾನೆ. (೧೦)

(4) ಒಂದುವೇಳೆ, ಭಕ್ತನಿಗೆ ಭಗವಂತನನ್ನು ಪ್ರೀತಿಯಿಂದ ಚಿಂತಿಸುವ ಭಕ್ತಿಯೋಗವನ್ನು ಆರಂಭಿಸಲು, ಮೇಲೆ ಹೇಳಿದ ಭಗವಂತನ ಕೈಂಕರ್ಯಗಳನ್ನು ಮಾಡುವುದಕ್ಕೂ ಆಗದಿದ್ದ ಪಕ್ಷದಲ್ಲಿ ಆ ಮುಮುಕ್ಷುವು ಏನು ಮಾಡಬೇಕು ? ಅವನು ಭಗವದ್ಗೀತೆಯ ಮೊದಲು ಆರುಅಧ್ಯಾಯಗಳಲ್ಲಿ ಬೋಧಿಸಿರುವ ಪರಭಕ್ತಿಯನ್ನು ಹೃದಯದಲ್ಲಿ ಉಂಟು ಮಾಡುವ ಆತ್ಮ ಅನುಸಂಧಾನರೂಪವಾದ ಅಕ್ಷರ ಯೋಗವನ್ನು ಕೈ ಹಿಡಿದು ಅದಕ್ಕೆ ಉಪಾಯವಾಗಿ ಕರ್ಮಯೋಗವನ್ನು ಆಚರಿಸಬೇಕು ಕರ್ಮಯೋಗವನ್ನು ಆಚರಿಸಲು, ಸಕಲ ಕರ್ತವ್ಯ ಕರ್ಮಗಳನ್ನೂ ಮಾಡುತ್ತಾ, ಅವುಗಳ ಫಲಗಳಲ್ಲಿ ಅಭಿಮಾನವನ್ನೂ ಮತ್ತು ಆಶೆಯನ್ನೂ ಬಿಡಬೇಕು. ಹಾಗೆ ಫಲಾಪೇಕ್ಷೆ ಇಲ್ಲದೆ, ಭಗವಂತನ ಆರಾಧನ ರೂಪವಾಗಿ, ಅನುಷ್ಠಿಸಲ್ಪಟ್ಟ ಕರ್ಮದಿಂದ ಆತ್ಮಧ್ಯಾನವು ಸಿದ್ಧಿಸುತ್ತದೆ. ಆತ್ಮಧ್ಯಾನದಿಂದ ಅವಿದ್ಯೆ ಮುಂತಾದ ಎಲ್ಲಾ ತಡೆಗಳೂ ನೀಗುತ್ತವೆ. ಈ ತಡೆಗಳು ನಾಶವಾದಮೇಲೆ ತಾನಾಗಿಯೇ ಹೃದಯದಲ್ಲಿ ಉತ್ತಮವಾದ ಭಕ್ತಿಯುಂಟಾಗುತ್ತದೆ. (೧೧)

(5) ಮೇಲೆ ಹೇಳಿರುವ ಭಕ್ತಿಯೋಗದ ಅಭ್ಯಾಸಗಳನ್ನು ಕೈಗೊಳ್ಳಲು ರುಚಿ ಇಲ್ಲದಿರುವವರಲ್ಲಿ, ಭಗವಂತನಲ್ಲಿ ಪರಭಕ್ತಿಯು ಅಂಕುರಿಸುವುದಕ್ಕೆ ಏನು ಮಾಡಬೇಕು ಎಂಬುದನ್ನು ಈ ಶ್ಲೋಕದಲ್ಲಿ ಉಪದೇಶ ಮಾಡಿದೆ. ಒಬ್ಬನಿಗೆ ಭಗವಂತನಲ್ಲಿ ಪ್ರೀತಿ ಇಲ್ಲದಿದ್ದರೆ, ಅವನಿಗೆ ಭಗವಂತನ ಸ್ಮರಣೆ ಮಾಡುವ ಅಭ್ಯಾಸವು ಬೇಜಾರನ್ನು ಉಂಟುಮಾಡುತ್ತದೆ. ಅಂಥಾವನಿಗೆ ದೃಢವಾದ ಭಕ್ತಿ ಇಲ್ಲದಿರುವುದರಿಂದ ಅವನು ಭಗವಂತನನ್ನು ಸ್ಮರಿಸುವುದು ಎಂಬ ಅಭ್ಯಾಸಯೋಗವನ್ನು ಆಚರಿಸಲಾರನು. ಆದುದರಿಂದ ಅವನು ಆತ್ಮನಿಶ್ಚಯವನ್ನು ಚಿಂತಿಸುತ್ತ ಅದರಿಂದ ಆತ್ಮಸಾಕ್ಷಾತ್ಕಾರ ಮಾಡಲು ಪ್ರಯತ್ನಿಸುವುದೇ ಅವನಿಗೆ ತನ್ನ ಆತ್ಮನಿಗೆ ಹಿತಮಾಡುವುದರಲ್ಲಿ ಉತ್ತಮವಾದದ್ದು. ಸಿದ್ಧಿಯನ್ನು ಹೊಂದದ ಆತ್ಮ ಸ್ವರೂಪ ಸಾಕ್ಷಾತ್ಕಾರ ಜ್ಞಾನಕ್ಕಿಂತಲೂ ಅದಕ್ಕೆ ಉಪಾಯವಾದ ಆತ್ಮ ಸ್ವರೂಪ ಧ್ಯಾನವೇ ಆತ್ಮನಿಗೆ ಒಳ್ಳೆಯದನ್ನು ಮಾಡುವುದರಲ್ಲಿ, ಆತ್ಮ ಕಲ್ಯಾಣಕ್ಕೆ ಉತ್ತಮವಾದದ್ದು. ಸಿದ್ಧಿಯಾಗದ ಆ ಆತ್ಮ ಸ್ವರೂಪ ಧ್ಯಾನಕ್ಕಿಂತಲೂ ಅದಕ್ಕೆ ಉಪಾಯವಾದ ಫಲಾಪೇಕ್ಷೆ ಇಲ್ಲದ ಸತ್ಕರ್ಮವನ್ನು ಅನುಷ್ಠಿಸುವುದೇ ಆತ್ಮನಿಗೆ ಶ್ರೇಯಸ್ಕರವು. ಫಲಾಪೇಕ್ಷೆ ಇಲ್ಲದೆ ಕರ್ತವ್ಯ ಕರ್ಮಗಳನ್ನು ಅನುಷ್ಠಿಸಿದರೆ ಸಕಲ ಪಾಪಗಳೂ ನಶಿಸುವುದರಿಂದ, ಮನಸ್ಸಿಗೆ ತಾನಾಗಿಯೇ ಶಾಂತಿಯುಂಟಾಗುತ್ತದೆ. ಹಾಗೆ ಮನಸ್ಸು ಶಾಂತಿಯನ್ನು ಹೊಂದಿದರೆ, ಕ್ರಮೇಣ ಆತ್ಮಧ್ಯಾನವು ತಾನಾಗಿಯೇ ಕೈಸೇರುತ್ತದೆ ಆ ಸಂತತ ಆತ್ಮಧ್ಯಾನದಿಂದ ಶುದ್ಧ ಪ್ರತ್ಯಗಾತ್ಮ ಸಾಕ್ಷಾತ್ಕಾರವುಂಟಾಗುತ್ತದೆ. ಆತ್ಮ ಪ್ರತ್ಯಕ್ಷಜ್ಞಾನದಿಂದ ಭಗವಂತನಲ್ಲಿ ಪರಭಕ್ತಿ ಅಂಕುರಿಸುತ್ತದೆ. ಯಾವಾಗಲೂ ಭಗವಂತನಲ್ಲಿ ಪರಭಕ್ತಿ ಅಂಕುರಿಸುತ್ತದೆಯೋ ಆಗ ಭಕ್ತನು ಭಗವಂತನಿಗೆ ಕೈಂಕರ್ಯಗಳನ್ನು ಮಾಡುತ್ತಾನೆ ; ಭಗವಂತನ ಸ್ಮರಣೆಯೆಂಬ ಅಭ್ಯಾಸಯೋಗವನ್ನು ಕೈಗೊಳ್ಳುತ್ತಾನೆ ; ಅಭ್ಯಾಸ ಯೋಗಬಲದಿಂದ "ಮಯ್ಯೇವ ಮನ ಆಧತ್ಸ್ವ—ಮಯಿಬುದ್ಧಿಂನಿವೇಶಯ" ಎಂಬ ಸಿದ್ಧಿಯು ಅವನಲ್ಲಿ ಉಂಟಾಗಿ, ಅನಂತರದಲ್ಲಿ ಅವನು ಯಾವಾಗಲೂ ಭಗವಂತನಲ್ಲೇ ವಾಸಮಾಡುತ್ತಿರುವನು. (೧೨) ಒಟ್ಟಿನಲ್ಲಿ, ಭಕ್ತಿ ಯೋಗದ ಅಭ್ಯಾಸಗಳನ್ನು ಕೈಗೊಳ್ಳಲು ಅಶಕ್ತನಾದ ಮುಮುಕ್ಷುವಿಗೆ ಆತ್ಮನಿಷ್ಠೆಯೇ ಶ್ರೇಯಸ್ಕರವು. ಅಶಾಂತ ಮನಸ್ಕನಾದ ಆತ್ಮನಿಷ್ಠನಿಗೆ ಭಕ್ತಿನಿಷ್ಠೆಯನ್ನು ಪಡೆಯಲು ಆತ್ಮಜ್ಞಾನವನ್ನು ಅಂತರ್ಗತವಾಗಿ ಹೊಂದಿ, ಫಲಾಭಿಸಂಧಿ ರಹಿತವಾಗಿ ಆಚರಿಸುವ ಕರ್ಮನಿಷ್ಠೆಯೇ ಶ್ರೇಷ್ಠವು ಎಂದು ಅಭಿಪ್ರಾಯವು

## ಫಲಾಭಿಸಂಧಿ ರಹಿತನಾಗಿ ಕರ್ಮವಾಡುವ ಭಕ್ತನ ಗುಣಗಳು

(ಶ್ಲೋಕಗಳು ೧೩ ರಿಂದ ೧೯ ರ ವರಿಗೆ)

ಭಗವಂತನನ್ನು ಸಾಕ್ಷಾತ್ಕರಿಸಿ ಅವನಲ್ಲಿಯೇ ವಾಸ ಮಾಡುವುದು ಎಂಬ ಕೊನೆಯ ಧ್ಯೇಯವನ್ನು ಹೊಂದಲು ಅಥವ ಸಾಧಾರಣ ಭಾಷೆಯಲ್ಲಿ ಪರಮಪದವೆಂಬ ಅನುಭವವನ್ನು ಪಡೆಯಲು ಸಾಧನವಾದ—ಕರ್ಮ—ಜ್ಞಾನ—ಭಕ್ತಿ ಸಮುಚ್ಚಯಯೋಗದಲ್ಲಿ ಒಂದರಮೇಲೆ ಒಂದು ಎನ್ನುವಹಾಗೆ ಅನೇಕ ಮೆಟ್ಟಿಲುಗಳು ಇವೆ. ಎಂಬುದನ್ನು, ಇಲ್ಲಿಯವರೆಗೆ ಶ್ರೀ ಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದನು. ಅದರಲ್ಲಿ ಮೊದಲನೆಯ ಮೆಟ್ಟಿಲು ಫಲಾಪೇಕ್ಷೆ ಇಲ್ಲದ ಕರ್ಮಯೋಗವೇ ಎಂದು ಕೊನೆಯಲ್ಲಿ ಹೇಳಿದನು. ಇನ್ನು ಮುಂದಿನ ಏಳುಶ್ಲೋಕಗಳಲ್ಲಿ ಫಲಾಪೇಕ್ಷೆ ಇಲ್ಲದೆ ಕರ್ಮಯೋಗ ಮಾಡುವವನಿಗೆ ಇರಬೇಕಾದ ಗುಣಗಳು ಅಂದರೆ ಅವನು ತನ್ನ ಸಮಾಜ ಜೀವನದಲ್ಲಿ ಆಚರಿಸಬೇಕಾದ ನೈತಿಕ ಧರ್ಮಗಳು ಯಾವುವು ಎಂಬುದನ್ನು ಒಂದೊಂದಾಗಿ ಉಪದೇಶ ಮಾಡುತ್ತಾನೆ. (೧೩—೧೯)

1. ಅದ್ವೇಷ್ಟಾ ಸರ್ವ ಭೂತಾನಾಂ :—ಭಕ್ತನಾಗಲು, ಕರ್ಮಯೋಗವನ್ನು ಆಚರಿಸುವವನು ತನ್ನನ್ನು ದ್ವೇಷಿಸುವ, ತನಗೆ

ಉಪಕಾರಮಾಡುವ ಅಥವ ಮಧ್ಯಸ್ಥನಾಗಿರುವ ಒಬ್ಬ ಮನುಷ್ಯ ನನ್ನೂ ಅಥವ ಒಂದು ಪ್ರಾಣಿಯನ್ನೂ ದ್ವೇಷಿಸಕೂಡದು; ಏಕೆಂದರೆ " ತನ್ನ ಪೂರ್ವ ಕರ್ಮಕ್ಕೆ ಅನುಗುಣವಾಗಿ ಇತರ ಪ್ರಾಣಿಗಳು ಭಗವಂತನಿಂದಲೇ ಪ್ರೇರೇಪಿಸಲ್ಪಟ್ಟು ತನ್ನ ವಿಚಾರದಲ್ಲಿ ವಿರೋಧಿಸುತ್ತವೆ, ಉಪಕಾರ ಮಾಡುತ್ತವೆ ಅಥವ ಮಧ್ಯಸ್ಥವಾಗಿ ಇವೆ ಎಂದು ತಿಳಿದುಕೊಳ್ಳಬೇಕು. ಹೀಗೆ ತಿಳಿದರೆ, ತನ್ನನ್ನು ಇನ್ನೊಬ್ಬನು ದ್ವೇಷಿಸಿ ಹಿಂಸೆ ಮಾಡುವುದು, ಅವನ ತಪ್ಪಲ್ಲ ಅದು, ತಾನೇ ಹಿಂದೆ ಮಾಡಿದ ತಪ್ಪಿನ ಫಲವೆಂದು ತಿಳಿದು ಅವನಮೇಲೆ ದ್ವೇಷ ಅಥವ ಕೋಪ ಮಾಡುವುದಿಲ್ಲ.

2. ಮೈತ್ರಃ ಕರುಣ ಏವಚ :—ಇತರ ಪ್ರಾಣಿಗಳನ್ನು ದ್ವೇಷಿಸದೆ ಇರುವುದು ಮಾತ್ರವೇ ಅಲ್ಲ; ಭಕ್ತನಾಗಲು ಕರ್ಮ ಯೋಗವನ್ನು ಆಚರಿಸುವವನು ತನಗೆ ಉಪಕಾರ ಮಾಡುವ, ಮಧ್ಯಸ್ಥನಾಗಿರುವ ಮತ್ತು ತನ್ನನ್ನು ದ್ವೇಷಿಸುವ ಎಲ್ಲಾ ಪ್ರಾಣಿಗಳಲ್ಲಿಯೂ ಸ್ನೇಹಬುದ್ಧಿಯನ್ನು ಮಾಡುತ್ತಲೇ ಇರಬೇಕು; ಅವುಗಳಿಗೆ ದುಃಖವು ಸಂಭವಿಸಿದರೆ ಕಪಟವಿಲ್ಲದ ಕರುಣೆಯಿಂದ ಕೂಡಿದವನಾಗಿ ಅವನು ತನ್ನ ಕೈಲಾಗುವಷ್ಟು ಸಹಾಯ ಮಾಡಬೇಕು

3. ನಿರ್ಮಮಃ :—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ತನ್ನ ಶರೀರ, ಇಂದ್ರಿಯ, ಮನಸ್ಸು, ಬುದ್ಧಿಗಳಲ್ಲಿಯೂ ಮತ್ತು ಅವುಗಳಿಗೆ ಸಂಬಂಧಪಟ್ಟ ಪದಾರ್ಥ ಗಳಲ್ಲಿಯೂ " ನನ್ನದು " ಎಂಬ ಅಭಿಮಾನವನ್ನು ಬಿಡಬೇಕು.

4 ನಿರಹಂಕಾರಃ :—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು, " ನಾನು ದೇಹವಲ್ಲ, ಇಂದ್ರಿಯಗಳಲ್ಲ, ಮನಸ್ಸಲ್ಲ, ಬುದ್ಧಿಯಲ್ಲ; ಆದರೆ ನಾನು ದೇಹ ಅಥವ ಇಂದ್ರಿಯಗಳು ಅಥವ ಮನಸ್ಸು ಅಥವ ಬುದ್ಧಿಯು ಎಂದು ತಿಳಿಯುವುದು, ಅಹಂಕಾರ ತತ್ವ ಸಂಬಂಧದಿಂದ, ನನಗೆ ಉಂಟಾದ ಅಜ್ಞಾನವು " ಎಂದು ದೃಢವಾಗಿ ತಿಳಿದು, ತಾನು ಜ್ಞಾನಸ್ವರೂಪನಾದ ಮತ್ತು ಜ್ಞಾನ ಗುಣವನ್ನು ಪಡೆದಿರುವ ಪರಿಶುದ್ಧ ಆತ್ಮನು ಎಂದು ನಿಸ್ಸಂದೇಹವಾಗಿ ನಂಬಿ, ಹಾಗೆಯೇ ಯಾವಾಗಲೂ ಮನನಮಾಡುತ್ತಾ ದೇಹಾತ್ಮಾಭಿಮಾನ ರಹಿತನಾಗಿರಬೇಕು

5. ಸಮದುಃಖಸುಖಃ :—ಭಕ್ತನಾಗಲು ಕರ್ಮ ಯೋಗವನ್ನು ಆಚರಿಸುವವನು, ತನಗೆ ಯಾವುದೊಂದು ತರಹದ ಇಂದ್ರಿಯ ಸುಖವು ಬರಬೇಕೆಂದು ಇಚ್ಛಿಸಕೂಡದು ಮತ್ತು ಯಾವುದೊಂದು ದುಃಖವು ಅಥವ ಇಂದ್ರಿಯಾದಿಗಳಿಗೆ ಕಷ್ಟವು ಬಂದಿತೆಂದು ಅದನ್ನು ದ್ವೇಷಿಸಕೂಡದು ಇನ್ನೇನು ಅಂಥಾ ಕಷ್ಟವು ಬಂದರೆ ದುಃಖಪಡಕೂಡದು; ಸುಖ ಬಂದರೆ ಹರ್ಷ ಪಡಕೂಡದು.

6. ಕ್ಷಮೀ :—ಹೀಗೆ ಸಮದುಃಖ ಸುಖನಾದರೆ, ಭಕ್ತ ನಾಗಲು ಕರ್ಮಯೋಗವನ್ನು ಆಚರಿಸುವವನು, ತನ್ನಿಂದ ಹೋಗಲಾಡಿಸಿಕೊಳ್ಳಲಾರದ ಮತ್ತು ತಾವಾಗಿಯೇ ಉಂಟಾಗುವ ಶೀತೋಷ್ಣಾದಿಗಳನ್ನು "ಅಹಮಾತ್ಮಾ-ನಶರೀರಃ" ಎಂಬ ಸ್ಮರಣೆಯ ಬಲದಿಂದ ಸಹಿಸಿಕೊಳ್ಳಬೇಕು; ಅಂದರೇನು, ಸ್ಪರ್ಶದಿಂದ ಉಂಟಾಗುವ ಅನಿವಾರ್ಯವಾದ ಆ ಸುಖದುಃಖ ಗಳಿಂದ ವಿಕಾರರಹಿತನಾಗಬೇಕು.

7. ಸಂತುಷ್ಟಃ :—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಸಮಾಜದ ಕಟ್ಟಳೆಯ ಪ್ರಕಾರವಾಗಿ, ತನ್ನ ಅವಸ್ಥೆಗೆ ಅನುಗುಣವಾಗಿ, ತಾನಾಗಿಯೇ ಸಿಕ್ಕುವ, ವಸ್ತು ಗಳನ್ನೂ, ಅದರಲ್ಲಿಯೂ ಧಾರಕ-ಪೋಷಕ ವಸ್ತುಗಳನ್ನುಮಾತ್ರ ಉಪಯೋಗಿಸಿಕೊಳ್ಳುತ್ತಾ, ತಾನು ಆತ್ಮನೆಂಬ ಭಾವನೆಯಿಂದ ಕೂಡಿದವನಾಗಿ ಯಾವಾಗಲೂ ಸಂತೋಷದಿಂದ ಇರುವನು.

8. ಸತತಂಯೋಗಿ :—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಕುಳಿತಿರುವಾಗಲೂ, ನಿಂತಿರುವಾಗಲೂ, ಮಲಗಿರುವಾಗಲೂ, ಕಾರ್ಯಗಳನ್ನು ಮಾಡುವಾಗಲೂ, ವ್ಯಾಸಂಗ ಮಾಡುವಾಗಲೂ, ವಿನೋದಗಳಲ್ಲಿ ಕಾಲ ಕಳೆಯುವಾಗಲೂ, ಪೂಜಾದಿಗಳನ್ನು ಮಾಡುವಾಗಲೂ, ಉಪನ್ಯಾಸಗಳನ್ನು ಕೇಳು ವಾಗಲೂ-ಯಾವಾಗಲೂ ತಾನು ಪ್ರಕೃತಿಯಿಂದ ಬೇರೆಯಾದ ಜ್ಞಾನಸ್ವರೂಪನಾದ ಆತ್ಮಸ್ವರೂಪನು ಎಂದೂ ಮತ್ತು ಈಗ ಪ್ರಕೃತಿಬಂಧನಕ್ಕೆ ಒಳಪಟ್ಟು ದೇಹೇಂದ್ರಿಯ ಮನ ಪ್ರಾಣ ಬುದ್ಧಿಗಳಮೂಲಕ ಕಾರ್ಯಗಳನ್ನು ಮಾಡುತ್ತಾ ಇರುವನೆಂದೂ ಸ್ಮರಿಸುತ್ತಿರುವನು.

9. ಯತಾತ್ಮಾ :—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ತನ್ನ ಮನಸ್ಸನ್ನು ಸ್ವೇಚ್ಛೆಯಾಗಿ ವಿಧ ವಿಧ ಗಳಾದ ಚಿತ್ತ ವೃತ್ತಿಗಳನ್ನು ಪಡೆದು ಓಡುತ್ತಿರುವುದಕ್ಕೆ ಬಿಡದೆ ತಡೆಯುವ ಅಭ್ಯಾಸವನ್ನು ಮಾಡುತ್ತಾ ಇರಬೇಕು.

10. ದೃಢನಿಶ್ಚಯಃ :—ಭಕ್ತನಾಗಲು ಕರ್ಮ ಯೋಗವನ್ನು ಆಚರಿಸುವವನು ವಿಜ್ಞಾನಶಾಸ್ತ್ರ, ಸಮಾಜಶಾಸ್ತ್ರ ಸಾಹಿತ್ಯಶಾಸ್ತ್ರ, ತತ್ವಶಾಸ್ತ್ರ ಇವುಗಳ ತೀರ್ಮಾನಗಳನ್ನು ತಿಳಿದು ಅವನ್ನು ಪ್ರಸ್ಥಾನತ್ರಯಿಯ ಅಂದರೆ ಉಪನಿಷತ್ತು,

ಭಗವದ್ಗೀತಾ ಮತ್ತು ದರ್ಶನಗಳನ್ನು ಒಳಗೊಂಡ ಬ್ರಹಸೂತ್ರ ಮತ್ತು ಭಕ್ತರ ಗಾನಗಳು ಎಂಬ ಅಧ್ಯಾತ್ಮ ಶಾಸ್ತ್ರಗಳ ತೀರ್ಮಾನಗಳೊಡನೆ ಹೋಲಿಸಿ, ಕೊನೆಗೆ ಅಧ್ಯಾತ್ಮ ಶಾಸ್ತ್ರದಲ್ಲಿ ಹೇಳಿರುವ ಅರ್ಥಗಳಲ್ಲಿ ಯಾವ ಸಂದೇಹವನ್ನೂ ಹೊಂದದೆ ದೃಢನಿಶ್ಚಯದೊಂದಿಗೆ ಇರುವುದು.

11. **ಮಯ್ಯರ್ಪಿತ ಮನೋಬುದ್ಧಿಃ** :— ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ತನ್ನ ಮನಸ್ಸನ್ನೂ ಬುದ್ಧಿಯನ್ನೂ ಯಾವಾಗಲೂ ಭಗವಂತನಲ್ಲಿ ಇರಿಸಬೇಕು. " ನಾನು ಫಲಾಪೇಕ್ಷೆ ಇಲ್ಲದೆ ಅನುಷ್ಠಿಸುವಂಥಾ ಸತ್ಕರ್ಮಗಳಿಂದ ಭಗವಂತನೇ ಆರಾಧಿಸಲ್ಪಡುತ್ತಾನೆ ; ಹೀಗೆ ಆರಾಧಿಸಲ್ಪಟ್ಟ ಭಗವಂತನು ನನ್ನನ್ನು ಪ್ರೀತಿಸಿ, ತಾನಾಗಿಯೇ ನನಗೆ ಆತ್ಮ ಸಾಕ್ಷಾತ್ಕಾರವನ್ನು ಉಂಟುಮಾಡಿಕೊಡುತ್ತಾನೆ, " ಎಂದು ಅವನು ಮನಸ್ಸಿನಲ್ಲಿ ದೃಢವಾಗಿ ನಂಬಿ, ಬುದ್ಧಿಯಲ್ಲಿ ಈ ವಿಚಾರವನ್ನೇ ಯಾವಾಗಲೂ ಯೋಚಿಸುತ್ತಿರಬೇಕು

12. **ಯಸ್ಮಾನ್ನೋದ್ವಿಜತೇ ಲೋಕೋ** :–ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ತನ್ನ ಕುಟುಂಬದ, ಹಳ್ಳಿಯ ಅಥವ ಪಟ್ಟಣದ, ದೇಶದ ಅಥವ ಜನಾಂಗದ, ಮನುಷ್ಯ ಸಮಾಜದ ಜನರಲ್ಲಿ ಯಾರಿಗೂ ಸ್ವಲ್ಪವೂ ಪ್ರತಿಕೂಲವಾಗುವಹಾಗೆ ನಡೆಯಕೂಡದು ; ಅಂದರೆ ಅವರ ಕ್ಷೇಮಕ್ಕೆ ಅಥವ ಸಂತೋಷಕ್ಕೆ ವಿರೋಧವಾಗುವಹಾಗೆ ಅಥವ ಅವರಿಗೆ ಕಷ್ಟವನ್ನು ಕೊಡುವ ಯಾವ ಕಾರ್ಯಗಳನ್ನೂ ಮಾಡಕೂಡದು.

13. **ಲೋಕಾನ್ನೋದ್ವಿಜತೇಚಯಃ** :— ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ದಿವ್ಯತೇಜಸ್ಸನ್ನು ಪಡೆದಿರುವನು ; ಆ ತೇಜಸ್ಸಿನ ಪ್ರಭಾವದಿಂದ ಅವನನ್ನು ಕುರಿತು ಯಾವುದೊಂದುಪ್ರಾಣಿಯೂ ಮತ್ತು ಸಮಾಜದಲ್ಲಿರುವ ಯಾವನೊಬ್ಬನೂ ಅವನಿಗೆ ವಿರೋಧವನ್ನು ಅಥವ ಪ್ರತಿಕೂಲವನ್ನು ಮಾಡಲಾರನು. ಅವನೂಕೂಡ ಇತರ ಪ್ರಾಣಿಗಳೂ ಮತ್ತು ಮನುಷ್ಯರು ಅವನ ವಿಚಾರದಲ್ಲಿ ಮಾಡುವ ಕಾರ್ಯಗಳನ್ನು ಅವು ತನಗೆ ವಿರೋಧಗಳೆಂದು ಭಾವಿಸುವುದೇ ಇಲ್ಲ.

14. **ಹರ್ಷಾಮರ್ಷಭಯೋದ್ವೇಗೈಃ ಮುಕ್ತಃ** :— ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಒಂದು ವಸ್ತು, ಪ್ರಾಣಿ, ಮನುಷ್ಯ ಅಥವ ದೇವತೆಯನ್ನು ಕುರಿತು ಸಂತೋಷವನ್ನಾಗಲೀ, ಅಸೂಯೆಯನ್ನಾಗಲೀ, ಭಯವನ್ನಾಗಲೀ, ಕೋಪವನ್ನಾಗಲೀ ಹೊಂದುವುದಿಲ್ಲ. ಇನ್ನೇನು, ಅವನೂಕೂಡ ಅವರಿಗೆ ಅಲ್ಪ ಸಂತೋಷಗಳನ್ನೂ, ಕೋಪವನ್ನೂ ಭಯವನ್ನೂ ಅಥವ ಉದ್ವೇಗವನ್ನೂ ಉಂಟುಮಾಡುವ ಕಾರ್ಯಗಳನ್ನು ಮಾಡುವುದಿಲ್ಲ

15. **ಅನಪೇಕ್ಷಃ** :–ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು, ಆತ್ಮನನ್ನು ಹೊರತು ಮಿಕ್ಕವುಗಳಲ್ಲಿ ಯಾವುವನ್ನೂ ಹೊಂದಲು ಆಶೆಗಳನ್ನು ಪಡೆದಿರಕೂಡದು.

16. **ಶುಚಿಃ** :—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಶಾಸ್ತ್ರವಿಹಿತವಾದ ದ್ರವ್ಯದಿಂದ ಶರೀರವನ್ನು ಶುಚಿಯಾಗಿ ಇಟ್ಟುಕೊಂಡು ಪ್ರೋಕ್ಷಣೆ ಮಾಡಬೇಕು ; ಅಂದರೇನು, ಅವನು ತನ್ನ ಶರೀರವನ್ನೂ, ಬಟ್ಟೆಗಳನ್ನೂ, ಮನೆಯನ್ನೂ, ಸುತ್ತಲಿನ ಆವರಣಗಳನ್ನೂ ಕೊಳೆಗಳಿಂದ ಅಡಿಗಡಿಗೆ ಶುದ್ಧಿಮಾಡುತ್ತಾ ಶುಚಿಯಾಗಿ ಇಟ್ಟುಕೊಳ್ಳಬೇಕು. ಮತ್ತು ಸಾತ್ವಿಕವಾದ ಆಹಾರಗಳನ್ನೇ ಸೇವನೆ ಮಾಡುತ್ತಾ ಅನೇಕ ವರುಷಗಳು ಬದಕುವಹಾಗೆ ತನ್ನ ಶರೀರವನು ಆರೋಗ್ಯವಾಗಿ ಇಟ್ಟುಕೊಳ್ಳಬೇಕು.

17. **ದಕ್ಷಃ** :—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ತನ್ನ ಸಮಾಜದ ಕಟ್ಟಳೆಗಳಿಗೆ ಅನುಗುಣವಾಗಿರುವ, ಶಾಸ್ತ್ರೋಕ್ತವಾಗಿರುವ, ಪ್ರಪಂಚ ವ್ಯಾಪಾರಗಳನ್ನು ವಿಚಾರಿಸಿ, ತಿಳಿದು, ಚೆನ್ನಾಗಿ ಅನುಷ್ಠಿಸುವುದರಲ್ಲಿ ಸಮರ್ಥನಾಗಿರಬೇಕು.

18. **ಉದಾಸೀನಃ** :–ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಶಾಸ್ತ್ರೋಕ್ತವಲ್ಲದ ಬಾಕಿ ಪ್ರಪಂಚ ವ್ಯಾಪಾರಗಳಲ್ಲಿ ಸಂಪರ್ಕವಿಲ್ಲದವನಾಗಿರುತ್ತಾನೆ ; ಅಂದರೆ ಆ ವ್ಯಾಪಾರಗಳಲ್ಲಿ ಅವನು ಸೇರದೆ ಉದಾಸೀನನಾಗಿರುತ್ತಾನೆ.

19 **ಗತವ್ಯಥಃ** :–ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಶಾಸ್ತ್ರೋಕ್ತ ವ್ಯಾಪಾರಗಳನ್ನು ಮಾಡುವಾಗ ಅವನಿಗೆ ತಾವಾಗಿಯೇ ಶೀತೋಷ್ಣ ದುಃಖಗಳು ಉಂಟಾಗುವ ಸಂದರ್ಭದಲ್ಲಿ ಅವನು ಜುಗುಪ್ಸೆಯನ್ನೂ, ದುಃಖವನ್ನೂ ಪಡೆಯುವುದಿಲ್ಲ.

20. **ಸರ್ವಾರಂಭಪರಿತ್ಯಾಗೀ** :–ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಶಾಸ್ತ್ರದಲ್ಲಿ ವಿಧಿಸಿರುವ ವ್ಯಾಪಾರಗಳನ್ನು ಹೊರತು ಮತ್ಯಾವ ಕರ್ಮಗಳನ್ನು ಮಾಡಲು ಆರಂಭಿಸುವುದಿಲ್ಲ.

**21. ಯೋನಹೃಷ್ಯತಿ ನದ್ವೇಷ್ಟಿ :**— ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಲೋಕದಲ್ಲಿರುವ ಮನುಷ್ಯರುಗಳಿಗೆ ಸಂತೋಷ ಹೇತುವಾಗಿರುವ ಸಂದರ್ಭಗಳನ್ನೂ ಮತ್ತು ಪದಾರ್ಥಗಳನ್ನೂ ಹೊಂದಿದಾಗ ತಾನು ಸಂತೋಷಿಸುವುದಿಲ್ಲ; ಹಾಗೆ ಒಂದುವೇಳೆ ತನಗೆ ದ್ವೇಷ ಹೇತುವಾಗಿರುವ ವ್ಯಾಪಾರಗಳು ಮತ್ತು ಸಂದರ್ಭಗಳೂ ಉಂಟಾದರೆ ಆಗ ಅವನ್ನು ದ್ವೇಷಿಸದೆಯೂ ಇರುವನು

**22. ನಶೋಚತಿ :**—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಮನುಷ್ಯರ ಶೋಕಕ್ಕೆ ಕಾರಣರಾದ ಹೆಂಡತಿ, ಮಕ್ಕಳು, ಬಂಧುಗಳು, ಐಶ್ವರ್ಯಗಳು ಇವೇ ಮುಂತಾದವುಗಳು ನಾಶವಾಗುವುದು ಅಥವ ಅವರಿಗೆ ಕಷ್ಟವುಂಟಾಗುವುದು ಎಂಬ ಸಂದರ್ಭಗಳಲ್ಲಿ ಅವುಗಳನ್ನು ಧರ್ಮದಿಂದ ಹೋಗಲಾಡಿಸಲು ಅಥವ ಕಮ್ಮಿಮಾಡಲು ಪ್ರಯತ್ನಿಸುತ್ತಾನೆ. ಆದರೆ ಅವು ಕಮ್ಮಿಯಾಗದಿದ್ದಪಕ್ಷದಲ್ಲಿ ಅವನು ಅದಕ್ಕಾಗಿ ದುಃಖಪಡುವುದಿಲ್ಲ.

**23. ನಕಾಂಕ್ಷತಿ :**—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಮನುಷ್ಯರಿಗೆ ಹರ್ಷವನ್ನುಂಟುಮಾಡುವ ಹೆಂಡತಿ, ಮಕ್ಕಳು, ಐಶ್ವರ್ಯಾದಿಗಳನ್ನು ತಾನು ಹೊಂದದೆ ಇದ್ದಪಕ್ಷದಲ್ಲಿ ಅವು ತನಗೆ ಬೇಕೆಂದು ಆಶೆಪಡುವುದಿಲ್ಲ.

**24. ಶುಭಾಶುಭ ಪರಿತ್ಯಾಗಿ :**—ಪಾಪಕಾರ್ಯಗಳ ಹಾಗೆ ಫಲಾಪೇಕ್ಷೆಯಿಂದ ಕೂಡಿದ ಪುಣ್ಯಕಾರ್ಯಗಳೂ ಕೂಡ ಸಂಸಾರವನ್ನು ಅಂದರೆ ಕರ್ಮರೂಪವಾದ ದೇಹಸಂಬಂಧವನ್ನು ವೃದ್ಧಿಪಡಿಸುವುದರಿಂದ, ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಅಶುಭ ಅಥವ ಪಾಪಕಾರ್ಯಗಳನ್ನು ಬಿಡುವ ಹಾಗೆ ಶುಭ ಅಥವ ಪ್ರಪಂಚಸುಖ ಮತ್ತು ಸ್ವರ್ಗಾದಿಗಳ ಫಲಗಳನ್ನು ಕೊಡುವ ಪುಣ್ಯಕರ್ಮಗಳನ್ನೂ ಮಾಡುವುದಿಲ್ಲ

**25. ಶತ್ರೌಚ ಮಿತ್ರೇಚ ಸಮಃ :**—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಸಮಾಜದ ಕಟ್ಟಳೆಯ ಪ್ರಕಾರ ಅಂದರೆ ಧರ್ಮದಿಂದ ಶತ್ರುಗಳನ್ನು ಎದುರಿಸಬೇಕಾದರೂ ಮತ್ತು ಮಿತ್ರರೊಡನೆ ಸಹಕರಿಸಬೇಕಾದರೂ ಕೂಡ, ತನ್ನ ಮನಸ್ಸಿನಲ್ಲಿ ಮಾತ್ರ ಶತ್ರುಗಳನ್ನು ದ್ವೇಷಿಸದೆ ಮತ್ತು ಮಿತ್ರರನ್ನು ಪ್ರೀತಿಸದೆ ಇಬ್ಬರಲ್ಲಿಯೂ ಒಂದೇ ಸಮನಾದ ಭಾವನೆಯನ್ನು ಪಡೆಯಬೇಕು.

**26. ಮಾನಾಪಮಾನಯೋಃ ಸಮಃ :**—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಸಮಾಜದ ಕಟ್ಟಳೆಯ ಪ್ರಕಾರ ಅಂದರೆ ಧರ್ಮದಿಂದ ತನ್ನ ಕರ್ತವ್ಯಕರ್ಮಗಳನ್ನು ಧೈರ್ಯವಾಗಿ ನಡೆಸಬೇಕು; ಇತರರು ತನ್ನನ್ನು ಹೊಗಳಬೇಕೆಂದು ಮನಸ್ಸನ್ನು ಸೋಲಬಾರದು; ಇತರರು ತನ್ನನ್ನು ಬೈಯ್ಯುತ್ತಾರೆಂದು ಮನಸ್ಸಿನಲ್ಲಿ ಹೆದರಿ, ದಾಕ್ಷಿಣ್ಯಕ್ಕಾಗಿ ತನ್ನ ಕರ್ತವ್ಯಕರ್ಮಗಳನ್ನು ಮಾಡದೆ ಬಿಡಬಾರದು. ಅಂದರೇನು, ತನ್ನ ಕರ್ತವ್ಯಕರ್ಮಗಳನ್ನುನಡೆಸುವಾಗ ಮರ್ಯಾದೆಯು ಬಂದರೂ ಸರಿಯೇ ಅಥವ ಅಪಮಾನವು ಉಂಟಾದರೂ ಸರಿಯೇ ಅವನು ತನ್ನ ಮನಸ್ಸನ್ನು ಶಾಂತವಾಗಿ ಒಂದೇ ಸಮನಾಗಿ ಇಟ್ಟುಕೊಳ್ಳಬೇಕು.

**27. ಶೀತೋಷ್ಣ ಸುಖದುಃಖೇಷು ಸಮಃ :**—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ತನಗೆ ಛಳಿಕಾಲದಲ್ಲಿ ಶೀತದಿಂದ ಕಷ್ಟವಾದರೂ, ಉಷ್ಣದಿಂದ ಸುಖವಾದರೂ ಅಥವ ಬೇಸಿಗೆ ಕಾಲದಲ್ಲಿ ಉಷ್ಣದಿಂದ ಕಷ್ಟವಾದರೂ, ತಂಪಾದ ಗಾಳಿಯಿಂದ ಸುಖವಾದರೂ ಅದನ್ನು ಗಮನಿಸದೆ ಮನಸ್ಸನ್ನು ಒಂದೇ ಸಮನಾಗಿ ಇಟ್ಟುಕೊಳ್ಳಬೇಕು. ಒಟ್ಟಿನಲ್ಲಿ ಪ್ರಕೃತಿಯ ಕಟ್ಟಳೆಯಿಂದ ತಾನಾಗಿಯೇ ಸುಖಬಂದರೂ ಸರಿಯೇ ಅಥವ ಕಷ್ಟದುಃಖಗಳು ಬಂದರೂ ಸರಿಯೇ ಅವನು ತನ್ನ ಮನಸ್ಸನ್ನು ಒಂದೇ ಶಾಂತಿಸ್ಥಿತಿಯಲ್ಲಿ ಇಟ್ಟುಕೊಳ್ಳಬೇಕು.

**28. ಸಂಗವರ್ಜಿತಃ :**—ಸುಖದುಃಖಗಳು ಬಂದಾಗ ಮನಸ್ಸನ್ನು ಒಂದೇ ಸಮನಾಗಿ ಶಾಂತವಾಗಿ ಇಟ್ಟುಕೊಳ್ಳಬಹುದು; ಆದರೆ ಮುಂದೆ ಸುಖಗಳೇ ಉಂಟಾಗಬೇಕೆಂದೂ ಮತ್ತು ಮುಂದೆ ಕಷ್ಟಗಳು ಬರಕೂಡದೆಂದೂ ಮನಸ್ಸಿನಲ್ಲಿ ಚಿತ್ತವೃತ್ತಿರೂಪವಾದ ಅಲೆಗಳು ಇದ್ದೇ ಇರುತ್ತವೆ. ಆದುದರಿಂದ ಭಕ್ತನಾಗಲು ಕರ್ಮಯೋಗವನ್ನುಆಚರಿಸುವವನು ಸುಖದುಃಖಗಳನ್ನುಂಟುಮಾಡುವ ಯಾವುದರಲ್ಲಿಯೂ ಆಸಕ್ತಿ ಇಲ್ಲದ ಮನಸ್ಸುಳ್ಳವನಾಗಿರಬೇಕು; ಅಂದರೆ ಅವುಗಳಲ್ಲಿ ಸಂಗವನ್ನು ಬಿಡಬೇಕು.

**29. ತುಲ್ಯನಿಂದಾಸ್ತುತಿಃ :**—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಇತರರು ತನ್ನ ವಿಚಾರದಲ್ಲಿ ಮಾಡಬಹುದಾದ ನಿಂದೆ-ಸ್ತುತಿ ಎರಡನ್ನೂ ಸಮನಾಗಿ ಭಾವಿಸುವನು; ಅಂದರೆ ಅವುಗಳಿಗೆ ತನ್ನ ಗಮನವನ್ನೇ ಕೊಡುವುದಿಲ್ಲ. ಇನ್ನೇನು, ತಾನೂ ಕೂಡ ಯಾರನ್ನೂ ಅನವಶ್ಯಕವಾಗಿ ಸ್ತೋತ್ರಮಾಡುವುದೂ ಇಲ್ಲ ಮತ್ತು ನಿಂದೆಯನ್ನೂ ಮಾಡುವುದಿಲ್ಲ.

**30. ಮೌನಿ :**—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಕಾಲಕಳೆಯುವುದಕ್ಕಾಗಿ ಅಥವ ತನ್ನ ಪಾಂಡಿ

ತ್ಯವನ್ನು ಇತರರಿಗೆ ತೋರಿಸಿಕೊಳ್ಳುವುದಕ್ಕಾಗಿ ಅನವಶ್ಯಕವಾಗಿ ತತ್ವಹಿತ-ಪುರುಷಾರ್ಥಗಳ ವಿಚಾರದಲ್ಲಿ ಚರ್ಚೆ ಅಥವ ವಾದ ಮಾಡುವುದಿಲ್ಲ. ಇತರರೊಡನೆ ಕೆಲಸಕ್ಕೆ ಬಾರದ ಮಾತುಗಳನ್ನು ಆಡುತ್ತಾ ಕಾಲಕಳೆಯುವುದಿಲ್ಲ. ತಾನು ಮಾಡಬೇಕಾದ ಕರ್ತವ್ಯ ಕರ್ಮಗಳಿಗೆ ಆವಶ್ಯಕವಾದಷ್ಟು ಮಾತ್ರ ಮಾತನಾಡುವನು ; ಕೆಲಸಕ್ಕೆ ಬಾರದ ಹರಟೆಗಳಲ್ಲಿ ಅನ್ವಯಿಸುವುದಿಲ್ಲ. ಇತರರ ಮನಸ್ಸಿಗೆ ನೋವನ್ನು ಉಂಟುಮಾಡುವ ಹಾಸ್ಯದ ಮಾತುಗಳನ್ನೂ ಆಡುವುದಿಲ್ಲ.

31. **ಸನ್ತುಷ್ಟೋ ಏನಕೇನಚಿತ್:**—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ತಾನು ಜೀವಿಸಿರುವುದಕ್ಕಾಗಿ ಭಗವಂತನ ಕೃಪೆಯಿಂದ(ಅಂದರೆ ಸಮಾಜದ ಕಟ್ಟಳೆಯ ಪ್ರಕಾರ)-ತನಗೆ ಎಷ್ಟು ಸಿಕ್ಕುತ್ತದಯೋ ಅಷ್ಟೇ ಸಾಕೆಂದು ಅದನ್ನು ಸಂತೋಷದಿಂದ ಉಪಯೋಗಿಸಿ ತೃಪ್ತನಾಗಿರುವನು.

32. **ಅನಿಕೇತಃ:**—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಆತ್ಮನಲ್ಲಿಯೇ ಸ್ಥಿರಬುದ್ಧಿಯನ್ನು ಇಟ್ಟಿರುವುದರಿಂದ ಗೃಹಾದಿಗಳಲ್ಲಿ ಆಸಕ್ತಿಯನ್ನು ಹೊಂದುವುದಿಲ್ಲ. ಒಂದು ಮನೆಯು ತನ್ನದು ಎಂಬ ಮಮಕಾರಭಾವನೆಯನ್ನು ಇಟ್ಟುಕೊಳ್ಳುವುದಿಲ್ಲ ಮತ್ತು ಮನೆ ಇಲ್ಲದಿದ್ದರೆ ತನಗೆ ಮನೆಯಾಗಬೇಕೆಂದು ಆಶೆಪಡುವುದಿಲ್ಲ. ಅವನು ಸ್ವಗೃಹರಹಿತನಾಗಿರುವನು; ಅಂದರೆ, ಇಂಥಾದ್ದೇ ತನ್ನ ವಾಸಸ್ಥಳವು ಎಂಬ ನಿಯಮವನ್ನು ಅವನು ಇಟ್ಟುಕೊಳ್ಳುವುದಿಲ್ಲ. ಅಂದರೇನು, ಯಾವ ಮನೆಯಲ್ಲಿದ್ದರೂ ಅಲ್ಲಿರುವ ನೆಂಟರು ಅಥವ ಸ್ನೇಹಿತರ ಮೇಲೆ ಅಭಿಮಾನವನ್ನಿಡದೆ, ಆ ಮನೆಯಲ್ಲಿ ತಾನು ಒಬ್ಬ ಅತಿಥಿ ಎಂಬ ಭಾವನೆಯನ್ನು ಪಡೆಯಬೇಕು.

33. **ಸ್ಥಿರಮತಿಃ:**—ಭಕ್ತನಾಗಲು ಕರ್ಮಯೋಗವನ್ನು ಆಚರಿಸುವವನು ಆಧ್ಯಾತ್ಮಿಕ ತತ್ವಹಿತ ಪುರುಷಾರ್ಥಗಳ ವಿಷಯಗಳನ್ನು ತಿಳಿಯುವುದರಲ್ಲೂ, ಆಚರಿಸುವುದರಲ್ಲೂ ತನ್ನ ಬುದ್ಧಿಯನ್ನು ಸ್ಥಿರವಾಗಿ ಇಟ್ಟುಕೊಳ್ಳಬೇಕು.

ಮೇಲೆ ವಿವರಿಸಿರುವ ಮೂವತ್ತುಮೂರು ಗುಣಗಳನ್ನೂ ಪಡೆದಿರುವ ಶ್ರೇಷ್ಠನಾದ ಕರ್ಮಯೋಗಿಯು ಭಗವಂತನ ಭಕ್ತನು; ಅವನ ಪ್ರೀತಿಗೆ ಪಾತ್ರನು; ಅವನಿಗೆ ಇಷ್ಟನು; ಅವನ ಅನುಗ್ರಹವನ್ನು ಪಡೆಯುವುದಕ್ಕೆ ಯೋಗ್ಯನು; ಅವನಿಗೆ ಅತ್ಯಂತ ಪ್ರಿಯನಾಗಿರುವನು. ಅಂದರೇನು, ಇಂಥಾ ಭಕ್ತನಾದ ಕರ್ಮಯೋಗಿಯನ್ನು ಭಗವಂತನು ಪ್ರೀತಿಯಿಂದ ಅನುಗ್ರಹಿಸಿ, ಕ್ರಮೇಣ ಅವನಿಗೆ ಪರಮಶ್ರೇಷ್ಠವಾದ, ಶಾಶ್ವತವಾದ, ಮೋಕ್ಷಾನಂದವಾದ ಉತ್ತಮ ಫಲವನ್ನುಕೊಡುತ್ತಾನೆ.

## ಕೊನೆಯ ಶ್ಲೋಕದ ಉಪದೇಶ

(ಶ್ಲೋಕ–೨೦)

ಭಕ್ತಿಯೋಗವು ಧರ್ಮದಿಂದ ಕೂಡಿದ ಉಪಾಯವು; ಅದು ಅಮೃತ ಅಥವ ಆನಂದಸ್ವರೂಪವಾದ ಫಲವನ್ನುಕೊಡುತ್ತದೆ. ಆದುದರಿಂದ ಭಗವಂತನ ಪರಮ ಭಕ್ತರು ಈ ಭಕ್ತಿಯೋಗವೆಂಬ ಸಾಧನವನ್ನು ಕೈಗೊಂಡು ಈ ಅಧ್ಯಾಯದ ಆರನೆಯ ಶ್ಲೋಕದಿಂದ ಆರಂಭಿಸಿ ಹತ್ತೊಂಭತ್ತನೆಯ ಶ್ಲೋಕದಲ್ಲಿ ಮುಗಿಸಿರುವ ಅಂದರೆ ಹದಿನಾಲ್ಕು ಶ್ಲೋಕಗಳಲ್ಲಿ ಉಪದೇಶಮಾಡಿರುವ ರೀತಿಯಲ್ಲಿ, ಶ್ರದ್ಧೆಯಿಂದ ಕೂಡಿದವರಾಗಿ, ಚೆನ್ನಾಗಿ ಭಗವಂತನನ್ನು ಉಪಾಸನೆ ಮಾಡುತ್ತಾರೆ. ಅಂತಹ ಭಗವದುಪಾಸಕರು ಭಗವಂತನಿಗೆ ತುಂಬಾ ಪ್ರಿಯರು ಅಥವ ಅವನಿಗೆ ಅತ್ಯಂತ ಇಷ್ಟರುಗಳಾಗಿ ಇರುತ್ತಾರೆ. (೨೦)

(Re-printed from the Mysore Vysya Patrika, May 1962 )

M. V. P. PRESS, MYSORE.

# ಭಗವದ್ಗೀತಾ ಅಧ್ಯಾಯ—೧೩ ಪಾಠ—೧

## ಕ್ಷೇತ್ರ ಮತ್ತು ಕ್ಷೇತ್ರಜ್ಞ—(ಶ್ಲೋಕಗಳು ೧ ರಿಂದ ೪)

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ |
ಏತದ್ಯೋವೇತ್ತಿತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ || ೧ ||
ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ |
ಕ್ಷೇತ್ರಕ್ಷೇತ್ರಜ್ಞಯೋ ರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ || ೨ ||

### ಈ ಶ್ಲೋಕಗಳಲ್ಲಿರುವ ವಾಕ್ಯಗಳ ಅರ್ಥ

1. ಹೇ ಕೌಂತೇಯ ! ಇದಂ ಶರೀರಂ ಕ್ಷೇತ್ರಮಿತಿ ಅಭಿಧೀಯತೇ | =ಎಲೈ ಕುಂತಿಯ ಮಗನೇ ! ಈ ಶರೀರವು 'ಕ್ಷೇತ್ರ' ಎಂದು ಹೇಳಲ್ಪಡುತ್ತದೆ.

2. ಏತತ್ ಯಃ ವೇತ್ತಿ ತಂ ಕ್ಷೇತ್ರಜ್ಞ ಇತಿ=ಈ ಕ್ಷೇತ್ರವನ್ನು ಯಾವನು ಅರಿಯುತ್ತಾನೆಯೋ ಅವನನ್ನು "ಕ್ಷೇತಜ್ಞ" ಎಂದು.

3. ತದ್ವಿದಃ ಪ್ರಾಹುಃ=ಅದನ್ನು ತಿಳಿದವರು ಹೇಳುತ್ತಾರೆ.

4. ಭಾರತ ! ಸರ್ವಕ್ಷೇತ್ರೇಷು ಮಾಮಪಿಚ ಕ್ಷೇತ್ರಜ್ಞಂ ವಿದ್ಧಿ=ಭಾರತನೆ ! ಸರ್ವಕ್ಷೇತ್ರಗಳಲ್ಲಿಯೂ ಇರುವ ನನ್ನನ್ನೂ ಕೂಡ ಕ್ಷೇತ್ರಜ್ಞನನ್ನಾಗಿ ತಿಳಿದುಕೋ—ಅಥವಾ

ಸರ್ವಕ್ಷೇತ್ರೇಷು ಚಾಪಿ ಮಾಂ ಕ್ಷೇತ್ರಜ್ಞಂ ವಿದ್ಧಿ=ಎಲ್ಲಾ ಕ್ಷೇತ್ರಗಳಲ್ಲೂ ನನ್ನನ್ನೇ ಕ್ಷೇತ್ರಜ್ಞನೆಂಬುದಾಗಿ ತಿಳಿ—ಅಥವಾ

ಚ ಸರ್ವಕ್ಷೇತ್ರೇಷು ಕ್ಷೇತ್ರಜ್ಞಂ ಅಪಿ ಮಾಂ ವಿದ್ಧಿ=ಮತ್ತು ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನನ್ನೂ ಕೂಡ ನನ್ನನ್ನೇ ಎಂದು ತಿಳಿ—ಅಥವಾ

ಸರ್ವಕ್ಷೇತ್ರೇಷು ಅಪಿ ಕ್ಷೇತ್ರಜ್ಞಂ ಮಾಂ ಚ ವಿದ್ಧಿ=ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನನ್ನು ನನ್ನನ್ನೇಯಾಗಿ ತಿಳಿ—ಅಥವಾ

ಸರ್ವಕ್ಷೇತ್ರೇಷು ಮಾಂ ಕ್ಷೇತ್ರಜ್ಞಂ ಚಾಪಿ ವಿದ್ಧಿ=ಸರ್ವಕ್ಷೇತ್ರಗಳಲ್ಲಿ ನನ್ನನ್ನೂ ಕ್ಷೇತ್ರಜ್ಞನನ್ನಾಗಿಯೇ ತಿಳಿ.

5. ಕ್ಷೇತ್ರಕ್ಷೇತ್ರಜ್ಞಯೋ ಜ್ಞಾನಂ ಯತ್ ತತ್ ಜ್ಞಾನಂ ಮಮ ಮತಂ=ಕ್ಷೇತ್ರಕ್ಷೇತ್ರಜ್ಞರ ಜ್ಞಾನವು ಯಾವುದೋ ಅದು ಜ್ಞಾನವು ಎಂದು ನನ್ನ ಅಭಿಪ್ರಾಯ—ಅಥವಾ

ಕ್ಷೇತ್ರಕ್ಷೇತ್ರಜ್ಞಯೋ ರ್ಜ್ಞಾನಂ ಯತ್ ತತ್ ಮಮ ಜ್ಞಾನಂ=ಕ್ಷೇತ್ರಕ್ಷೇತ್ರಜ್ಞರ ಜ್ಞಾನ ಎಂಬುದು ಯಾವುದುಂಟೋ ಅದು ನನ್ನ ಜ್ಞಾನವು ಎಂಬುದು ಸಮ್ಮತವಾಗಿರುವುದು.

### ಕೆಲವು ಪದಗಳ ವಿವಿಧ ಅರ್ಥ.

1. "ಶರೀರಂ" ಎಂಬ ಪದಕ್ಕೆ ಕೆಲವು ವ್ಯಾಖ್ಯಾನಕಾರರು "ಮನುಸ್ಯನ ಶರೀರ" ಎಂದು ಅರ್ಥಮಾಡಿರುವರು; ಇನ್ನು ಕೆಲವರು ಜೀವದಿಂದ ಕೂಡಿರುವ ಒಬ್ಬ ಮನುಷ್ಯ ಅಥವ ಒಂದು ಪ್ರಾಣಿ ಅಥವ "ಒಂದು ಸಜೀವ ವ್ಯಕ್ತಿ"ಯೇ 'ಶರೀರ' ಎಂದು ಅರ್ಥಮಾಡಿರುವರು; ಮತ್ತೆ ಕೆಲವರು 'ಶರೀರ' ಎಂಬ ಪದಕ್ಕೆ "ಪ್ರಕೃತಿಮಹದಹಂಕಾರಮನ ಜ್ಞಾನೇಂದ್ರಿಯ ಕರ್ಮೇಂದ್ರಿಯ, ಪಂಚತನ್ಮಾತ್ರೆ, ಪಂಚಮಹಾಭೂತ" ಇವುಗಳ ಸಂಯೋಗದಿಂದುಂಟಾಗಿರುವ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗಿರುವ "ಜಗತ್ತು" ಎಂದು ಅರ್ಥಮಾಡಿರುವರು.

2. "ಕ್ಷೇತ್ರ" ವೆಂದರೇನು ? 'ಕ್ಷೇತ್ರ' ವೆಂದರೆ "ಉಳುವ ಭೂಮಿ" ಎಂಬುದು ಒಂದು ಅರ್ಥ; "ಕ್ಷತ" ಪೆಟ್ಟಿನಿಂದ ಕಾಪಾಡುವುದು "ಕ್ಷೇತ್ರ" ಎಂದು ಇನ್ನೊಂದು ಅರ್ಥ; ಯಾವುದು ಕ್ರಮೇಣ ಕ್ಷಯಿಸುತ್ತಾ ಕೊನೆಯಲ್ಲಿ ನಾಶವಾಗುತ್ತದೆಯೋ ಅದು "ಕ್ಷೇತ್ರ" ಎಂಬುದು ಮತ್ತೊಂದ ಅರ್ಥ. ಯಾವುದನ್ನು ನಾವು ತಿಳಿದು, ಅದರಲ್ಲಿ ಕೆಲಸಮಾಡಿ, ತನ್ಮೂಲಕ ಸುಖದುಃಖಗಳನ್ನು ಕೆಲವು ಕಾಲ ಅನುಭವಿಸುತ್ತೇವೆಯೋ ಅದು ನಮಗೆ "ಕ್ಷೇತ್ರ" ಎಂಬುದು ವಿಶಾಲವಾದ ಅರ್ಥ.

3. "ಕ್ಷೇತ್ರಜ್ಞ" ಎಂದರೇನು ? ಯಾವ ತತ್ವವು ಅಥವ ಯಾವನು "ಕ್ಷೇತ್ರವನ್ನು" ತಿಳಿಯುತ್ತಾನೆಯೋ ಅವನು "ಕ್ಷೇತ್ರಜ್ಞನು" ಎಂಬುದು ಸಂಕುಚಿತವಾದ ಅರ್ಥ. ಯಾವನು "ಕ್ಷೇತ್ರವನ್ನು" ತಿಳಿದು, ಅದರಲ್ಲಿ ಕೆಲಸವಮಾಡಿ

ತನ್ಮೂಲಕ ಸುಖದುಃಖಗಳನ್ನು ಕೆಲವು ಕಾಲ ಅನುಭವಿಸು ತ್ತಾನೆಯೋ ಅವನು "ಕ್ಷೇತ್ರಜ್ಞನು" ಎಂಬುದು ವಿಶಾಲ ವಾದ ಅರ್ಥ.

4. "ತದ್ವಿದಃ" ಎಂದರೇನು? ಅದನ್ನು ಅಂದರೆ "ಕ್ಷೇತ್ರಜ್ಞನ ವಿಚಾರವನ್ನು ತಿಳಿದವರು" ಎಂದು ಕೆಲವರು ಅರ್ಥಮಾಡಿದ್ದಾರೆ; ಕ್ಷೇತ್ರಕ್ಷೇತ್ರಜ್ಞರ ವಿಚಾರವನ್ನು ತಿಳಿದವರು ಎಂದು ಇನ್ನು ಕೆಲವರು ಅರ್ಥಮಾಡಿದ್ದಾರೆ; ಈ ಕ್ಷೇತ್ರಕ್ಷೇತ್ರಜ್ಞರ ವಿಚಾರಗಳನ್ನೂ ಮತ್ತು ಅವೆರಡರ ವ್ಯತ್ಯಾಸ ಸಂಯೋಗಗಳ ವಿಚಾರವನ್ನೂ ತಿಳಿದವರು ಎಂದು ಮತ್ತೆ ಕೆಲವರು ಅರ್ಥ ಮಾಡಿದ್ದಾರೆ. "ವಿದಃ" ಅಥವ "ತಿಳಿಯುವುದು" ಎಂಬ ವಿಚಾರದಲ್ಲೂ ಕೂಡ ಸಾಮಾನ್ಯವಾಗಿ ಬುದ್ಧಿಯಲ್ಲಿ ಅನುಮಾನದಿಂದ ತಿಳಿಯುವುದು, ಶಾಸ್ತ್ರಜ್ಞಾನದಿಂದ ತಿಳಿಯುವುದು ಮತ್ತು ಸ್ವಂತಯೋಗಾಭ್ಯಾಸದಿಂದ ಶುದ್ಧಮಾಡಲ್ಪಟ್ಟ ಮನಸ್ಸಿನಿಂದ ಸಾಕ್ಷಾತ್ಕರಿಸುವುದು ಎಂಬ ಭೇದಗಳಿವೆ.

5. "ಸರ್ವಕ್ಷೇತ್ರೇಷು" ಎಂಬ ಪದಗಳಿಗೆ ಪ್ರತ್ಯೇಕವಾದ ಅಥವ "ಬೇರೆ ಬೇರೆಯಾದ ಕ್ಷೇತ್ರಗಳು" ಎಂಬುದು ಒಂದು ಅರ್ಥ; ಮಹದಹಂಕಾರ ಪಂಚಮಹಾಭೂತಾದಿಗಳ ಸಂಯೋಗದಿಂದ ಉಂಟಾಗಿರುವ "ಒಟ್ಟು ಜಗತ್ತು" ಎಂಬುದು ಇನ್ನೊಂದು ಅರ್ಥ.

6. "ಜ್ಞಾನಂ" ಎಂಬ ಪದಕ್ಕೆ "ಸಾಮಾನ್ಯವಾದ ಜ್ಞಾನ" ಎಂದು ಒಂದು ಅರ್ಥ; "ಬ್ರಹ್ಮ" ಎಂದು ಇನ್ನೊಂದು ಅರ್ಥ; "ಪರಮಾತ್ಮ" ಎಂದು ಮತ್ತೊಂದು ಅರ್ಥ.

7. "ಚ–ಅಪಿ" ಎಂಬ ಎರಡು ಪದಗಳನ್ನು ಬೇರೆ ಬೇರೆ ವ್ಯಾಖ್ಯಾನಕಾರರು ತಮ್ಮ ತಮ್ಮ ಸಿದ್ಧಾಂತಗಳನ್ನು ಸ್ಥಾಪಿಸುವುದಕ್ಕಾಗಿ ಎರಡನೆಯ ಶ್ಲೋಕದ "ಕ್ಷೇತ್ರಜ್ಞಂ ಚಾಪಿಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ" ಎಂಬ ವಾಕ್ಯದ ಎರಡು ಬೇರೆ ಬೇರೆ ಪದಗಳ ಹಿಂದೆ ಮತ್ತು ಮುಂದೆ ಸೇರಿಸಿ ಆ ವಾಕ್ಯಕ್ಕೆ ಬೇರೆ ಬೇರೆ ಅರ್ಥಗಳನ್ನು ಮಾಡಿದ್ದಾರೆ. ಆದುದರಿಂದಲೇ ಈ ವಾಕ್ಯಕ್ಕೆ ಮೇಲೆ ಐದು ಅರ್ಥಗಳನ್ನು ಸೂಚಿಸಿದ್ದೇವೆ. ಹೀಗೆ ಈ ಪದಗಳಿಗೆಲ್ಲಾ ವಿವಿಧಅರ್ಥಗಳನ್ನು ಮಾಡಿರುವುದರಿಂದ ಈ ಎರಡು ಗೀತಾಶ್ಲೋಕಗಳ ತಾತ್ಪರ್ಯದಲ್ಲಿ ಮತ ಅಥವಾ ಅಭಿಪ್ರಾಯಗಳ ಭೇಧಗಳಿವೆ.

### ಮೊದಲನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ನಮಗೆ ಪ್ರತ್ಯಕ್ಷವಾಗಿಕಾಣುವ ಮನುಷ್ಯನ ಈ ಶರೀರವು "ಕ್ಷೇತ್ರ" ವೆಂದು ಕರೆಯಲ್ಪಡುತ್ತದೆ; ಏಕೆಂದರೆ, ಅದು ಪ್ರತಿ ದಿವಸ, ಪ್ರತಿ ತಿಂಗಳು ಮತ್ತು ಪ್ರತಿ ವರುಷ ಕ್ರಮೇಣ ಕ್ಷಯಿಸುತ್ತಾ ಬೇರೆ ಬೇರೆ ಕೌಮಾರ, ಯೌವನ, ಜರಾ, ಮರಣ ಎಂಬ ಪರಿಣಾಮಗಳನ್ನು ಹೊಂದುತ್ತದೆ. ಮತ್ತು ಉಳುವ ಭೂಮಿಯಲ್ಲಿ ಧಾನ್ಯಾದಿ ಫಲಗಳು ಉಂಟಾಗುವಂತೆ ಅದರಲ್ಲಿ ವಿವಿಧ ಕರ್ಮಗಳ ವಿವಿಧ ಫಲಗಳು ಉಂಟಾಗುತ್ತವೆ. ಈ ಮನುಷ್ಯ ಶರೀರದಲ್ಲಿ ಯಾವುದೋ ಒಂದು "ಉಪಾಧಿರಹಿತವಾದ, ಪಾರಮಾರ್ಥಿಕವಾದ ಶಾಶ್ವತ ಇರುವಿಕೆಯು" ಅಥವ ಸಾಧಾರಣ ಭಾಷೆಯಲ್ಲಿ "ಭಗವಂತನು" ಈ ಶರೀರವನ್ನು ಸಂಪೂರ್ಣವಾಗಿ ಅಂದರೆ ಅದರ ಎಲ್ಲಾ ಅಂಗಗಳನ್ನೂ ಮತ್ತು ಅವುಗಳೊಳಗೆ ನಡೆಯುತ್ತಿರುವ ಕಾರ್ಯಗಳನ್ನೂ ಪ್ರತ್ಯಕ್ಷದಿಂದಾಗಲೀ, ಅನುಮಾನದಿಂದಾಗಲೀ, ಉಪದೇಶದಿಂದಾಗಲೀ ತಿಳಿಯುತ್ತದೆ ಅಥವ ತಿಳಿಯುತ್ತಾನೆ. ಹೀಗೆ ದೇಹ ಮತ್ತು ಮನಸ್ಸಿನಿಂದ ಕೂಡಿದ ಶರೀರವನ್ನು ತಿಳಿಯುವ ಜ್ಞಾನಸ್ವರೂಪವಾದ ಇರುವಿಕೆಯನ್ನೇ ಅಥವ ಅರಿಯುವವನನ್ನೇ "ಕ್ಷೇತ್ರಜ್ಞನು" ಎಂದು ಆ ಕ್ಷೇತ್ರ ಕ್ಷೇತ್ರಜ್ಞರ ಸ್ವರೂಪವನ್ನು ಯಾರು ತಿಳಿದಿರುವರೋ ಆ ತದ್ವಿದರು, ಕರೆಯುತ್ತಾರೆ.

ಹಾಗಾದರೆ ಬೇರೆ ಬೇರೆ ಮನುಷ್ಯರ ಅಥವ ಪ್ರಾಣಿಗಳಲ್ಲಿ ಒಬ್ಬನೇ ಕ್ಷೇತ್ರಜ್ಞನು ಇರುವನೇ? ಅಥವ ಅನೇಕ ಕ್ಷೇತ್ರಜ್ಞರು ಇರುವರೆ? ಜಗತ್ತಿನ ಸರ್ವಕ್ಷೇತ್ರಗಳಲ್ಲಿಯೂ ಒಬ್ಬನೇ ಕ್ಷೇತ್ರಜ್ಞನು ಇರುವನು; ಅನೇಕ ಕ್ಷೇತ್ರಜ್ಞರು ನಿಜವಾಗಿ ಇಲ್ಲ, ಆ ಒಬ್ಬನೇ ಆದ "ಕ್ಷೇತ್ರಜ್ಞ" ನನ್ನು ಪರಬ್ರಹ್ಮ ಅಥವ ಸಾಧಾರಣ ಭಾವನೆಯಲ್ಲಿ ಪರಮೇಶ್ವರನೆಂದು ತಿಳಿಯಬೇಕು ಈ ಅದ್ವಿತಿಯ ಪರಬ್ರಹ್ಮ ಅಥವ ಪರಮೇಶ್ವರನು ಚತುರ್ಮುಖ ಬ್ರಹ್ಮನನ್ನು ಮೊದಲುಗೊಂಡು ಇರುವ ದೇವತೆಗಳು, ಮನುಷ್ಯರು, ತಿರ್ಯಕ್ಕುಗಳು, ಲತಾವೃಕ್ಷಗಳು, ಕ್ರಿಮಿಕೀಟಗಳು ಮತ್ತು ಸ್ಥಾವರ ಜಂಗಮಗಳೂ ಎಂಬ ಅನಂತ ಬೇರೆ ಬೇರೆ ಶರೀರಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ವಿಭಾಗವಾಗಿರುವಂತೆ ತೋರುವನು; ಆದರೆ ಪರಬ್ರಹ್ಮನು ಅಥವ ಪರಮೇಶ್ವರನು ನಿಜವಾಗಿ ವಿಭಾಗವಾಗಿಲ್ಲ. ಪ್ರಪಂಚದಲ್ಲಿ ಬೇರೆಯಾಗಿ ಕಾಣುವ ಕ್ಷೇತ್ರಗಳನ್ನೂ ಮತ್ತು ಪ್ರತ್ಯೇಕವಾಗಿ ವ್ಯವಹಾರ ಮಾಡುತ್ತಿರುವ ಕ್ಷೇತ್ರಜ್ಞರನ್ನೂ ನಿಜವಾದ, ಸತ್ಯವಾದ ಅಥವ ಶುದ್ಧವಾದ ಜ್ಞಾನದಲ್ಲಿ ವಿಷಯೀಕರಿಸಿದರೆ ಅವು ನಿಜವಾಗಿ ಬ್ರಹ್ಮವೇ ಆಗಿರುತ್ತವೆಯೇ ಹೊರತು ಬೇರೆಯಲ್ಲ. ಈ ಪ್ರಕಾರದಲ್ಲಿ ಕ್ಷೇತ್ರಕ್ಷೇತ್ರಜ್ಞನ ಸ್ವರೂಪವನ್ನು ನಿಶ್ಚಯವಾಗಿ ತಿಳಿದುಕೊಳ್ಳುವ ಜ್ಞಾನವೇ ಸತ್ಯವಾದ ಜ್ಞಾನವು. ಮೇಲೆ ವಿವರಿಸಿರುವ ಅಭಿಪ್ರಾಯವು ಸಾಧಾರಣ ಮನುಷ್ಯರ ಅಭಿಪ್ರಾಯ ಮಾತ್ರ ಎಂದು ತಿಳಿಯಕೂಡದು; ಆದು ಗೀತಾಚಾರ್ಯನಾದ ಶ್ರೀ ಕೃಷ್ಣನ ಅಭಿಪ್ರಾಯ.

## ಎರಡನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಮನುಷ್ಯನ ಅಥವ ಜೀವಿಯ ಶರೀರವು ಕ್ಷೇತ್ರವೆಂದು ಕರೆಯಲ್ಪಡುತ್ತದೆ. ಅವನಲ್ಲಿರುವ ಶರೀರವಲ್ಲದ ಇನ್ನೊಂದು ತತ್ವವು ಕ್ಷೇತ್ರವಾದ ಶರೀರವನ್ನೂ ಮತ್ತು ಅದರ ಮೂಲಕ ಪ್ರಪಂಚವನ್ನೂ ತಿಳಿಯುತ್ತದೆ. ಈ ತತ್ವವನ್ನೇ ಜ್ಞಾನಿಗಳು ಅಂದರೆ ಆತ್ಮಸ್ವರೂಪವನ್ನು ತಿಳಿದವರು "ಕ್ಷೇತ್ರಜ್ಞ" ಎಂದು ಕರೆದಿರುವರು. "ಕ್ಷೇತ್ರಜ್ಞನೆಂದರೆ ಕ್ಷೇತ್ರವಾದ ಶರೀರವನು ತಿಳಿಯುವವನು, ಅದರ ಮೂಲಕ ಕೆಲಸ ಮಾಡಿಸುವವನ್ನು ಮತ್ತು ಅದನ್ನೂ ಪ್ರಪಂಚದ ಸುಖದುಃಖಗಳನ್ನೂ ಅನುಭವಿವವನು ಎಂದು ಅರ್ಥ. ಅಂದರೇನು, ದೇವ ಮನುಷ್ಯಾದಿ ರೂಪಗಳಲ್ಲಿರುವ ಮತ್ತು ದಪ್ಪನಾಗಿ ಅಥವ ಸಣ್ಣನಾಗಿರುವ ಶರೀರವೇ ಕ್ಷೇತ್ರವು ; ಇದನ್ನು ತಿಳಿದು ತನ್ನ ಸ್ವಾರ್ಥ ಅಥವ ಪರಾರ್ಥಗಳಿಗಾಗಿ ಉಪಯೋಗಿಸುವ ಆತ್ಮನೇಕ್ಷೇತ್ರಜ್ಞನು. ಮೃತ ಶರೀರದಲ್ಲಿ ಕ್ಷೇತ್ರಜ್ಞನು ಕಂಡು ಬರುವುದಿಲ್ಲವಷ್ಟೆ. ಆದರೆ ಶರೀರವನು ಏಕೆ "ಕ್ಷೇತ್ರ" ಎಂಬುದಾಗಿ ಕರೆದರು ? ಸಾಧಾರಣವಾಗಿ "ಕ್ಷೇತ್ರ" ಎಂಬ ಪದಕ್ಕೆ "ಉಳುವ ಭೂಮಿ" ಎಂದು ಅರ್ಥ. ರೈತನು ತಾನು ಉಳುವ ಭೂಮಿಯನ್ನು ತಿಳಿದು, ಅದರಲ್ಲಿ ಕೆಲಸಮಾಡಿ, ತನ್ಮೂಲಕ ಬರುವ ಧಾನ್ಯಗಳೇ ಮೊದಲಾದ ಫಲಗಳನ್ನು ಅನುಭವಿಸುವನು. ಹಾಗೆಯೇ ಕ್ಷೇತ್ರಜ್ಞನಾದ ಆತ್ಮನೂ ಕೂಡ ತನ್ನ ಕ್ಷೇತ್ರವಾದ ಶರೀರವನ್ನು ತಿಳಿದು, ಅದರಿಂದ ಕೆಲಸ ಮಾಡಿಸಿ, ಸುಖದುಃಖಗಳೆಂಬ ಕರ್ಮಫಲಗಳನ್ನು ಅನುಭವಿಸುವನು. ಈ ಆತ್ಮನನ್ನೇ ಜೀವಾತ್ಮನೆಂದೂ, ಪುರುಷನೆಂದೂ, ಕರೆಯುತ್ತಾರೆ.

ಹಾಗಾದರೆ ಮನುಷ್ಯನಲ್ಲಿ ಕ್ಷೇತ್ರ ಮತ್ತು ಕ್ಷೇತ್ರಜ್ಞ ಎಂಬ ಎರಡು ತತ್ವಗಳು ಮಾತ್ರ ಇವೆಯೇ ? ಈ ಪ್ರಶ್ನೆಗೆ ಉತ್ತರವಾಗಿ ಶ್ರೀಕೃಷ್ಣನು ಎರಡನೆಯ ಶ್ಲೋಕದಲ್ಲಿ "ಅರ್ಜುನಾ ! ಪರಮಾತ್ಮನಾದ ನನ್ನನ್ನೂ ಕೂಡ ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ 'ಕ್ಷೇತ್ರಜ್ಞ' ನೆಂದು ತಿಳಿ" ಎಂದು ಹೇಳಿದನು. ಅಂದರೇನು, ಮನುಷ್ಯನಲ್ಲಿ ಮತ್ತು ಇತರ ಜೀವಿಗಳಲ್ಲಿ ಕ್ಷೇತ್ರ ಮತ್ತು ಕ್ಷೇತ್ರಜ್ಞ ಅಥವ ಶರೀರ ಮತ್ತು ಜೀವಾತ್ಮ ಎಂಬ ಎರಡು ತತ್ವಗಳು ಮಾತ್ರವಲ್ಲದೆ ಮೂರನೆಯದಾದ ಪರಮಾತ್ಮ ತತ್ವವೂ ಕೂಡ ಅಂತರ್ಯಾಮಿಯಾಗಿರುವುದು ಎಂದು ತಿಳಿಯಬೇಕು. ಆದುದರಿಂದ ಒಟ್ಟಿನಲ್ಲಿ ಕ್ಷೇತ್ರ ಅಥವ ಶರೀರ, ವೈಯಕ್ತಿಕ ಕ್ಷೇತ್ರಜ್ಞ ಅಥವ ಆತ್ಮ ಮತ್ತು ಸಾರ್ವತ್ರಿಕ ಕ್ಷೇತ್ರಜ್ಞ ಅಥವ ಪರಮಾತ್ಮ ಎಂದು ಮೂರು ತತ್ವಗಳಾಯಿತು. ಎಲ್ಲಾ ಕ್ಷೇತ್ರಗಳಲ್ಲಿಯೂ ಒಬ್ಬನೇ ಕ್ಷೇತ್ರಜ್ಞನಿರುವನೆ ? ಅಥವ ಅನೇಕ ಕ್ಷೇತ್ರಜ್ಞರು ಇರುವರೆ ? ಅನೇಕರೂ ಇರುವರು ಮತ್ತು ಒಬ್ಬನೇ ಇರುವನು ! ವೈಯಕ್ತಿಕ ಕ್ಷೇತ್ರಜ್ಞರು ಬೇರೆ ಬೇರೆ ಶರೀರಗಳಲ್ಲಿ ಪ್ರತ್ಯೇಕವಾಗಿ ಅನೇಕರು ಇರುವರು ; ಆದರೆ ಅದ್ವಿತೀಯನಾದ ಪರಮಾತ್ಮನು ಮಾತ್ರ ಎಲ್ಲಾ ಕ್ಷೇತ್ರಗಳಲ್ಲಿಯೂ ಅಂತರ್ಯಾಮಿಯಾಗಿದ್ದು ಒಬ್ಬನೇ ಆಗಿರುವನು. ವೈಯಕ್ತಿಕ ಕ್ಷೇತ್ರಜ್ಞನು ವೈಯಕ್ತಿಕ ಕ್ಷೇತ್ರವನ್ನು ತಿಳಿದು, ಅದರಲ್ಲಿ ಕೆಲಸಮಾಡಿಸಿ, ಅದನ್ನು ಅನುಭವಿಸುವ ಹಾಗೆ ಪರಮಾತ್ಮ ಕ್ಷೇತ್ರಜ್ಞನು ಜಗತ್ತಿನಲ್ಲಿರುವ ಕೋಟ್ಯಾನುಕೋಟಿ ಎಲ್ಲಾ ಕ್ಷೇತ್ರಗಳಲ್ಲಿಯೂ ಅಂತರ್ಯಾಮಿಯಾಗಿದ್ದು, ಅವುಗಳೆಲ್ಲವನ್ನೂ ತಿಳಿದು, ಲೀಲೆಯಿಂದ ಅವುಗಳಿಂದ ಕೆಲಸವನ್ನು ಮಾಡಿಸಿ ಆನಂದದಿಂದ ಇರುವನು. ಕೆಲವು ಕಡೆಗಳಲ್ಲಿ ಉಳುವ ಭೂಮಿಯನ್ನು ರೈತನು ಮಾತ್ರ ಅನುಭವಿಸುವುದಲ್ಲದೆ, ಆ ರೈತನಿಗೆ ಯಜಮಾನನಾದ ಜಮೀನುದಾರನೂ ಕೂಡ ಅದನ್ನು ಅನುಭವಿಸುವನಲ್ಲವೆ ? ಹಾಗೆಯೇ ಕ್ಷೇತ್ರವೆಂಬ ಒಂದು ಶರೀರವನ್ನು ಜೀವಾತ್ಮನು ಮಾತ್ರ ಅನುಭವಿಸುವುದಲ್ಲದೆ ಸರ್ವಕ್ಷೇತ್ರಗಳಿಗೂ ಕ್ಷೇತ್ರಜ್ಞರಿಗೂ ಕ್ಷೇತ್ರಜ್ಞನಾಗಿ ಯಜಮಾನನಾಗಿರುವ ಪರಮಾತ್ಮನೂ ಕೂಡ ಆ ಶರೀರವನ್ನು ತಿಳಿದು ಲೀಲೆಯಿಂದ ಉಪಯೋಗಿಸುವನು. ಒಟ್ಟು ತಾತ್ಪರ್ಯವೇನು ? ಸರ್ವಕ್ಷೇತ್ರಜ್ಞರನ್ನೂ "ಮದಾತ್ಮಕಂ" ಎಂದು ಹೇಳಿರುವುದರಿಂದ ಪ್ರತಿಯೊಂದು ವ್ಯಕ್ತಿಯಲ್ಲಿಯೂ ಸ್ವತಂತ್ರನಾದ "ಸತ್ಯಸ್ಯಸತ್ಯಂ" ಅಥವ ಪ್ರಾಮುಖ್ಯವಾದ ಸತ್ಯಸ್ವರೂಪನು ಪರಮಾತ್ಮನೇ ಆಗಿರುವನು ಮತ್ತು ವೈಯಕ್ತಿಕ ಕ್ಷೇತ್ರವೂ, ವೈಯಕ್ತಿಕ ಕ್ಷೇತ್ರಜ್ಞನೂ ಪರಮಾತ್ಮನ ಆಧಾರದ ಮೇಲೆ ನಿಂತು, ಅವನ ಅಧೀನಕ್ಕೆ ಒಳಪಟ್ಟು, ಅವನ ಲೀಲಾಭೋಗಕ್ಕೆ ಸಾಧನಗಳಾಗಿರುವುದರಿಂದ ಅವೆರಡೂ "ಸತ್ಯ" ಮಾತ್ರವೇ ಹೊರತು "ಸತ್ಯಸ್ಯ ಸತ್ಯ" ವಲ್ಲ. ಶರೀರ ಮತ್ತು ಜೀವಾತ್ಮ ಇವೆರಡೂ ಗೌಣವಾದ ತತ್ವಗಳೇ ವಿನಹ ಬರಿಯ ತೋರಿಕೆ ಮಾತ್ರವಲ್ಲ.

ಯಾವನು ಕ್ಷೇತ್ರ ಕ್ಷೇತ್ರಜ್ಞರೆಂಬ ತತ್ವಗಳ ಸ್ವರೂಪಾದಿಗಳನ್ನು ಚೆನ್ನಾಗಿ ತಿಳಿಯುತ್ತಾನೆಯೋ ಅವನೇ ನಿಜವಾದ ಜ್ಞಾನವನ್ನು ಪಡೆದಿರುವನು ಎಂಬುದು ಶ್ರೀಕೃಷ್ಣನ ಅಭಿಪ್ರಾಯ. ಕ್ಷೇತ್ರಗಳ ಸ್ವರೂಪ, ವೈಯಕ್ತಿಕ ಕ್ಷೇತ್ರಜ್ಞನ ಸ್ವರೂಪ, ಅದ್ವಿತೀಯ ಸಾರ್ವತ್ರಿಕ ಪರಮಾತ್ಮಕ್ಷೇತ್ರಜ್ಞನ ಸ್ವರೂಪ, ಇವುಗಳ ವ್ಯತ್ಯಾಸಗಳು, ಇವುಗಳಿಗಿರುವಅನ್ಯೋನ್ಯಸಂಬಂಧ ಇವೆಲ್ಲವನ್ನೂ ತಿಳಿದರೆ ನಾವು "ಸಂಪೂರ್ಣ ಜ್ಞಾನವನ್ನು" ಪಡೆಯುತ್ತೇವೆ. ಅಂದರೆ ಅದ್ವಿತೀಯನಾದ ಭಗವಂತನ ವಿಶಿಷ್ಟ ಸ್ವರೂಪದ ಜ್ಞಾನವನ್ನು ಪಡೆಯುತ್ತೇವೆ. "ಇದನ್ನು ನಾನು ತಿಳಿಯುತ್ತೇನೆ". ಎಂಬ ಅನುಭವವನ್ನು ಪರೀಕ್ಷಿಸಿ ಆತ್ಮನ ನಿಶ್ಚಯವನ್ನು ತಿಳಿದವರು ಹೀಗೆ ಹೇಳುತ್ತಾರೆ. ಅರಿಯುವನಾದ ಆತ್ಮನು ಅರಿಯಲ್ಪಡುವ ತನ್ನ ಶರೀರಕ್ಕಿಂತ ಬೇರೇ ವಸ್ತು. ಆದಾಗ್ಯೂ ಕೆಲವು ವೇಳೆ ತನ್ನನ್ನೂ ತನ್ನ ಶರೀರವನ್ನೂ

ಒಟ್ಟುಗೂಡಿಸಿ ವ್ಯವಹಾರ ಮಾಡುತ್ತಾನೆ. ಇನ್ನು ಕೆಲವು ವೇಳೆ ತನ್ನನ್ನೂ ಶರೀರವನ್ನೂ ವಿಂಗಡಿಸಿಯೂ ವ್ಯವಹಾರ ಮಾಡುತ್ತಾನೆ. ಬಹುಮಂದಿ ಮನುಷ್ಯರು ತಮ್ಮ ಶಕ್ತ್ಯಾನು ಸಾರ ಕ್ಷೇತ್ರಗಳಲ್ಲಿ ಕೆಲವನ್ನು ಮಾತ್ರ ತಿಳಿಯುವ ಸಾಧಾರಣ ಶಕ್ತಿಯನ್ನು ಪಡೆದಿರುವರು, ಆದರೆ ವೈಯಕ್ತಿಕ ಕ್ಷೇತ್ರ ಜ್ಞನ ನಿಜಸ್ವರೂಪವನ್ನು ತಿಳಿದಿಲ್ಲ. ಕೆಲವು ಯೋಗಿಗಳು ಕ್ಷೇತ್ರ ಮತ್ತು ವೈಯುಕ್ತಿಕ ಕ್ಷೇತ್ರಜ್ಞನ ನಿಜವಾದ ಸ್ವರೂಪಗಳನ್ನು ತಿಳಿದಿರುವರೇ ಹೊರತು ಸಾರ್ವತ್ರಿಕ ಅದ್ವಿತೀಯ ಕ್ಷೇತ್ರಜ್ಞನಾದ ಪರಮಾತ್ಮನ ಸ್ವರೂಪವನ್ನು ತಿಳಿದಿರುವುದಿಲ್ಲ. ಇವರು " ಸಮಾಧಿ " ಎಂಬ ವೈಯಕ್ತಿಕ ಕ್ಷೇತ್ರ ಜ್ಞನ ಅಥವ ಆತ್ಮನ ಸಾಕ್ಷಾತ್ಕಾರವನ್ನು ಪಡೆದು ಅದೇ ಕೊನೆಯ ಸತ್ಯವೆಂದು ಭಾವಿಸಿ ಕ್ಷೇತ್ರಗಳಿಗೂ, ಇಂದ್ರಿಯಗಳಿಗೆ ಗೋಚರವಾಗುವ ಪ್ರಪಂಚಕ್ಕೂ, ಈ ಪ್ರಪಂಚದ ಸೃಷ್ಟಿಸ್ಥಿತಿ ಲಯಗಳಿಗೂ ಕಾರಣನಾದ ಪರಮಾತ್ಮನಿಗೂ ಗೌಣಸ್ಥಾನ ವನ್ನು ಅಂದರೆ ಕೀಳುದರ್ಜೆಯ ಸ್ಥಾನವನ್ನು ಕೊಡುತ್ತಾರೆ. ಆದರೆ ಭಕ್ತರಾದ ಋಷಿಗಳು ಮಾತ್ರ ಕ್ಷೇತ್ರಗಳ ಸ್ವರೂಪ, ವೈಯಕ್ತಿಕ ಕ್ಷೇತ್ರಜ್ಞನ ಸ್ವರೂಪ ಮತ್ತು ಅದ್ವಿತೀಯ ಸಾರ್ವತ್ರಿಕ ಪರಮಾತ್ಮ ಕ್ಷೇತ್ರಜ್ಞನ ಸ್ವರೂಪ ಇವೆಲ್ಲವನ್ನೂ ಒಟ್ಟಾಗಿ ಸಾಕ್ಷಾತ್ಕರಿಸಿ ಸಂಪೂರ್ಣ ಅಥವ ಪರಿಪೂರ್ಣ ಜ್ಞಾನವನ್ನು ಪಡೆಯುವರು.

### ಮೂರನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ಎರಡು ಶ್ಲೋಕಗಳಲ್ಲಿ ಪರಮಾತ್ಮನ ಮತ್ತು ಮಹದ ಹಂಕಾರಾದಿಗಳಿಂದ ಕೂಡಿದ ಜಗತ್ತಿನ ವಿಷಯಗಳು ಇವೆಯೇ ವಿನಹ, ವೈಯುಕ್ತಿಕ ಜೀವಾತ್ಮನ ವಿಷಯವನ್ನು ಇಲ್ಲಿ ಪ್ರಸ್ತಾಪ ಮಾಡಿಲ್ಲ ಎಂಬುದನ್ನು ನಾವು ಮೊದಲು ತಿಳಿಯಬೇಕು. ಇಲ್ಲಿ " ಶರೀರ " ಎಂಬ ಪದಕ್ಕೆ ಒಬ್ಬ ವ್ಯಕ್ತಿಯಶರೀರ ಎಂದು ಅರ್ಥ ಮಾಡಕೂಡದು. " ಶರೀರ " ವೆಂದರೆ ಪ್ರಕೃತಿ, ಮಹತ್ತು, ಅಹಂಕಾರ, ಮನ, ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಪಂಚತನ್ಮಾತ್ರೆಗಳು, ಪಂಚಮಹಾಭೂತಗಳು ಇವುಗಳ ಸಂಯೋಗಗಳಿಂದ ಉಂಟಾಗಿರುವ ಜಗತ್ತಿನಲ್ಲಿರುವ ಸಮಸ್ತ ಪದಾರ್ಥಗಳ ಸಮೂಹ ಎಂದು ಅರ್ಥ. ಈ ಪದಾರ್ಥಗಳ ಸಮೂಹವೇ " ಕ್ಷೇತ್ರ " ವೆನಿಸಿಕೊಳ್ಳುತ್ತದೆ. ಈ ವಿಶಾಲವಾದ ಅನಂತವಾದ ಕ್ಷೇತ್ರವನ್ನು ತಿಳಿದು, ಲೀಲೆಯಿಂದ ಅದರಿಂದ ಕೆಲಸಮಾಡಿಸಿ, ಪವನ್ನು ಆನಂದದಿಂದ ಅನುಭವಿಸುವವನೇ " ಕ್ಷೇತ್ರಜ್ಞನು "; ಅವನೇ " ಅದ್ವಿತೀಯ ಪರಮಾತ್ಮನು " ಎಂದು ಶಾಸ್ತ್ರಜ್ಞಾನವನ್ನು ಅಂದರೆ ಪರಮಾತ್ಮನ ಜ್ಞಾನವನ್ನು ಪಡೆದವರು ಉಪದೇಶಮಾಡುತ್ತಾರೆ. ವೈಯಕ್ತಿಕ ಜೀವಾತ್ಮನು ಈ ಶ್ಲೋಕದಲ್ಲಿ ಸೂಚಿಸಿರುವ " ಕ್ಷೇತ್ರಜ್ಞ " ನಲ್ಲ. " ಕ್ಷೇತ್ರಜ್ಞಂ ಚಾಪಿಮಾಂವಿದ್ಧಿ " ಎಂಬ ವಾಕ್ಯಕ್ಕೆ ಶ್ರೀ ಕೃಷ್ಣನೇ (ಮಾಂ) " ಕ್ಷೇತ್ರಜ್ಞ " ನಾದ ಪರಮಾತ್ಮನು ಎಂದು ಅರ್ಥ. ಪಂಚ ಮಹಾಭೂತಾದಿಗಳಿಂದ ಮತ್ತು ಮಹದಹಂಕಾರಗಳಿಂದ ಕೂಡಿದ ಜಗದ್ರೂಪವಾದ ಕ್ಷೇತ್ರವು ಮತ್ತು ಆ ಕ್ಷೇತ್ರವನ್ನು ತಿಳಿಯುವ ಪರಮಾತ್ಮನು ಇವೆರಡು ತತ್ವಗಳ ಸಮನ್ವಯ ಜ್ಞಾನವು ಅತ್ಯುತ್ತಮವಾದ ಜ್ಞಾನ ಎಂಬುದು ಶ್ರೀಕೃಷ್ಣನ ಅಭಿಪ್ರಾಯ ; ಏಕೆಂದರೆ ಈ ಜ್ಞಾನವನ್ನು ಪಡೆಯುವ ಮನುಷ್ಯನು ಮೋಕ್ಷವನ್ನು ಪಡೆಯುತ್ತಾನೆ.

### ಮೇಲಿನ ಅಭಿಪ್ರಾಯಗಳ ಆಧುನಿಕ ಸಮನ್ವಯ

" ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ " ಮತ್ತು "ಏತದ್ಯೋ ವೇತ್ತಿತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ" ಎಂಬ ಮೊದಲನೆಯ ಶ್ಲೋಕದ ಎರಡು ವಾಕ್ಯಗಳ ಅರ್ಥದ ಪ್ರಕಾರ " ಕ್ಷೇತ್ರವೇ " ಬೇರೆ, " ಕ್ಷೇತ್ರಜ್ಞ " ನೇ ಬೇರೆ. ಆದರೆ ಪಶ್ಚಿಮ ದೇಶದ ತತ್ವಶಾಸ್ತ್ರಜ್ಞರು ಮನುಷ್ಯನಲ್ಲಿ ಕೈಕಾಲು ಕಣ್ಣು ಕಿವಿ ಮೂಗು, ಹೃದಯ ರಕ್ತನಾಳಗಳು ಮುಂತಾದ ಅಂಗಗಳಿಂದ ಕೂಡಿದ " ಸ್ಥೂಲಶರೀರ " (Physical body) ಮತ್ತು ಸಂಕಲ್ಪ, ಉದ್ವೇಗ, ಬುದ್ಧಿ ಮುಂತಾದ ಜ್ಞಾನವನ್ನು-ಉಂಟುಮಾಡುವ ಅಲೆಗಳಿಗೆ ಆಶ್ರಯವಾದ " ಮನುಸ್ಸು " (Mind) ಎಂಬ ಎರಡು ತತ್ವಗಳು ಮಾತ್ರ ಇವೆ ಎಂದು ವಾದಿಸುತ್ತಾರೆ. ಗೀತೆಯ ಹದಿಮೂರನೆಯ ಅಧ್ಯಾಯದ ಮೊದಲನೆಯ ಶ್ಲೋಕದ ಅಭಿಪ್ರಾಯದ ಪ್ರಕಾರ ಮನುಷ್ಯನಲ್ಲಿ ಸ್ಥೂಲಶರೀರ, ಸೂಕ್ಷ್ಮಮನುಸ್ಸು ಮತ್ತು " ಜ್ಞಾನಸ್ವರೂಪನಾದ ಕ್ಷೇತ್ರಜ್ಞ " ಎಂಬ ಮೂರು ತತ್ವಗಳಿವೆ. ಇವುಗಳಲ್ಲಿ ಸ್ಥೂಲ ಶರೀರ ಮತ್ತು ಸೂಕ್ಷ್ಮ ಮನಸ್ಸುಗಳಿಗೆ ಜ್ಞಾನವಿಲ್ಲ ಮತ್ತು ಇವೆರಡೂ ಸೇರಿದರೆ " ಕ್ಷೇತ್ರ " ವೆಂದು ಕರೆಯಲ್ಪಡುತ್ತವೆ. ಕ್ಷೇತ್ರಜ್ಞನಿಗೂ ಕ್ಷೇತ್ರಕ್ಕೂ ಸಂಯೋಗವಾದಾಗ ಮಾತ್ರ ಶರೀರ ದಲ್ಲಿ ಜೀವವಿರುತ್ತದೆ ಮತ್ತು ಮನಸ್ಸಿನಲ್ಲಿ ಜ್ಞಾನವನ್ನುಂಟು ಮಾಡುವ ಅಲೆಗಳು ಪ್ರವಾಹವಾಗಿ ಹುಟ್ಟುತ್ತಲೇ ಇವೆ. ಮೃತಶರೀರದಲ್ಲಿ " ಕ್ಷೇತ್ರಜ್ಞನ " ಅಥವ ಆತ್ಮನ ವಿಯೋಗ ವಾಗುವುದರಿಂದ ಅದರಲ್ಲಿ ಜ್ಞಾನದ ಚಿಹ್ನೆಗಳು ಕಂಡುಬರುವುದಿಲ್ಲ. ಆದುದರಿಂದ ಸೂಕ್ಷ್ಮಮನಸ್ಸೂ ಕೂಡ ಜ್ಞಾನವನ್ನು ಪಡೆಯದಿರುವ ಕ್ಷೇತ್ರದ ಭಾಗವೇ ಹೊರತು ಜ್ಞಾನಸ್ವರೂಪ ನಾದ ಕ್ಷೇತ್ರಜ್ಞನಲ್ಲ.

[Re-printed from Mysore Vysya Patrika]
(October 1958)

M. V. P. Press, Mysore.

# ಭಗವದ್ಗೀತಾ ಅಧ್ಯಾಯ-೧೩. ಪಾರ ೧ ಮತ್ತು ೨

ಎರಡನೆಯ ಶ್ಲೋಕದಲ್ಲಿ "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ " ಎಂಬ ವಾಕ್ಯವಿದೆ. ಇಲ್ಲಿ " ಮಾಂ " ಎಂಬ ಪದಕ್ಕೆ ಒಂದು ಅಭಿಪ್ರಾಯದಲ್ಲಿ " ನಿರ್ಗುಣ ಬ್ರಹ್ಮ " ನೆಂದೂ, ಇನ್ನೊಂದು ಅಭಿಪ್ರಾಯದಲ್ಲಿ " ಸಗುಣಬ್ರಹ್ಮ " ನೆಂದೂ, ಮತ್ತೊಂದು ಅಭಿಪ್ರಾಯದಲ್ಲಿ ಅವತಾರಪುರುಷನಾದ " ಶ್ರೀಕೃಷ್ಣ ಪರಮಾತ್ಮ " ನೇ ಎಂದೂ ಅರ್ಥಮಾಡಿದ್ದಾರೆ. ಆಯಾ ಅರ್ಥಗಳ ಪ್ರಕಾರ ಅವರವರು ಆ ವಾಕ್ಯಕ್ಕೆ ತಾತ್ಪರ್ಯವನ್ನು ವಿವರಿಸಿದ್ದಾರೆ. ಆದರೆ ಎಲ್ಲರೂ ಒಪ್ಪಬಹುದಾದ ತಾತ್ಪರ್ಯವೇನು ? ಬಹುಮಂದಿ ಮನುಷ್ಯರಿಗೆ ಜೀವಾತ್ಮ ಪರಮಾತ್ಮರ ಸಾಕ್ಷಾತ್ಕಾರಗಳು ಇರುವುದಿಲ್ಲ; ಪ್ರತ್ಯಕ್ಷ ಅನುಮಾನಗಳಿಗೆ ಮಾತ್ರ ಗೋಚರವಾಗುವ ಜಗತ್ತಿನ ಅನುಭವ ಮಾತ್ರವಿದೆ. ಅವರಿಗೆ ಪಾಶ್ಚಿಮಾತ್ಯ ತತ್ವಶಾಸ್ತ್ರಜ್ಞರು ಹೇಳುವಹಾಗೆ " ಸ್ಥೂಲ ಶರೀರ " ಮತ್ತು ಜ್ಞಾನದ ಅಲೆಗಳಿಂದ ಕೂಡಿದ " ಸೂಕ್ಷ್ಮಮನಸ್ಸು " ಇವೆರಡು ತತ್ವಗಳ ತಿಳುವಳಿಕೆಮಾತ್ರ ಕೆಲವು ಜ್ಞಾನಿಗಳು " ನಿರ್ಗುಣಬ್ರಹ್ಮ " ಅಥವ " ವೈಯಕ್ತಿಕ ಆತ್ಮನ " ಜ್ಞಾನವನ್ನು ಯೋಗಸಮಾಧಿ ಕಾಲದಲ್ಲಿ ಪಡೆದಿರುವಾಗ ಅವರಿಗೆ ಆಗ " ಕ್ಷೇತ್ರ " ಮತ್ತು ಅದನ್ನು ತಿಳಿಯುತ್ತಿರುವ " ವೈಯಕ್ತಿಕ ಕ್ಷೇತ್ರಜ್ಞ " ಇವೆರಡರ ಅನುಭವವೇ ಇರುವುದಿಲ್ಲ. ಇನ್ನು ಕೆಲವು ಭಕ್ತರು " ಸಗುಣಬ್ರಹ್ಮನ " ಪರವ್ಯೂಹ ಅಂತರ್ಯಾಮಿ ವಿಭವ ಅರ್ಚಾ ವಿಶ್ವರೂಪ ಸ್ವರೂಪಗಳನ್ನು ಸಾಕ್ಷಾತ್ಕರಿಸಿ ಕ್ಷೇತ್ರಗಳು, ವೈಯಕ್ತಿಕ ಕ್ಷೇತ್ರಜ್ಞರು ಮತ್ತು ಅದ್ವಿತೀಯ ಸಾರ್ವತ್ರಿಕ ಪರಮಾತ್ಮ ಕ್ಷೇತ್ರಜ್ಞ ಇವರುಗಳ ಸಂಯೋಗದ ತಿಳುವಳಿಕೆಯನ್ನು ಪಡೆಯುತ್ತಾರೆ. ಈ ಮೂರು ಅಭಿಪ್ರಾಯಗಳಲ್ಲೂ ಪರಮಾತ್ಮನೇ ನಿಜವಾದ ಅಥವ ಮುಖ್ಯವಾದ ತತ್ವ ; ಕ್ಷೇತ್ರ ಮತ್ತು ವೈಯಕ್ತಿಕ ಕ್ಷೇತ್ರಜ್ಞ ಎಂಬ ಮಿಕ್ಕೆರಡು ತತ್ವಗಳೂ ಅಪ್ರಧಾನವಾದವು ಮತ್ತು ಗೌಣವಾದವು.

### ಶ್ಲೋಕಗಳು

ತತ್‌ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।<br>
ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೩ ॥<br>
ಋಷಿಭಿ ರ್ಬಹುಧಾ ಗೀತಂಛಂ ದೋಭಿ ರ್ವಿವಿಧೈಃ ಪೃಥಕ್ ।<br>
ಬ್ರಹ್ಮಸೂತ್ರ ಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೪ ॥

### ಈ ಶ್ಲೋಕಗಳಲ್ಲಿರುವ ವಾಕ್ಯಗಳ ಅರ್ಥ

(1) ತತ್‌ಕ್ಷೇತ್ರಂ ಯಚ್ಚ, ಯಾದೃಕ್ಚ, ಯದ್ವಿಕಾರಿ ಯತಶ್ಚ ಯತ್ ತತ್ ಸಮಾಸೇನ ಮೇ ಶೃಣು = ಆ ಕ್ಷೇತ್ರವು ಯಾವುದೋ (ಯಾವ ದ್ರವ್ಯವೋ), ಎಂತಹ ಗುಣವುಳ್ಳದ್ದೋ (ಯಾವ ಬಗೆಯಾಗಿ ಅಥವ ಹೇಗೆ ಇರುವುದೋ), ಯಾವ ವಿಕಾರ ಅಥವ ಪರಿಣಾಮವುಳ್ಳದ್ದೋ, ಯಾವ ಕಾರಣದಿಂದ ಉಂಟಾಗಿದೆಯೋ ಅಥವ ಯಾವ ಪ್ರಯೋಜನಕ್ಕಾಗಿ ಹುಟ್ಟಿದೆಯೋ ಮತ್ತು ಯಾವ ಸ್ವರೂಪವುಳ್ಳದ್ದೋ ಅಥವ ಯಾವ ಕಾರ್ಯಗಳನ್ನು ನಡೆಸುತ್ತದೆಯೋ ಈ ವಿಚಾರಗಳನ್ನೆಲ್ಲಾ ಸಂಗ್ರಹವಾಗಿ ನನ್ನಿಂದ ಕೇಳು.

(2) ಸ ಚ ಯಃ ಯತ್ಪ್ರಭಾವಃ (ತತ್‌ಸಮಾಸೇನ ಮೇ ಶೃಣು) = ಅವನೂ (ಕ್ಷೇತ್ರಜ್ಞನೂ) ಕೂಡ ಯಾರು (ಎಂತಹ ಸ್ವರೂಪವುಳ್ಳವನು) ಮತ್ತು ಯಾವ ಪ್ರಭಾವವುಳ್ಳವನು (ಎಂತಹ ಮಹಿಮೆಯುಳ್ಳವನು ಅಥವ ಸಾಮರ್ಥ್ಯವುಳ್ಳವನು) ಎಂಬೀ ವಿಚಾರಗಳನ್ನೂ ಸಂಗ್ರಹವಾಗಿ ನನ್ನಿಂದ ಕೇಳು.

(3) ಋಷಿಭಿಃ ಬಹುದಾ ಗೀತಂ = (ಈ ವಿಚಾರಗಳು) ಋಷಿಗಳಿಂದ ಅನೇಕ ವಿಧವಾಗಿ ಹಾಡಲ್ಪಟ್ಟಿರುವುದು. (ವರ್ಣಿಸಲ್ಪಟ್ಟದೆ.)

(4) ಪೃಥಕ್ ವಿವಿಧೈಃ ಛಂದೋಭಿಃ (ಗೀತಂ) = ಪ್ರತ್ಯೇಕವಾಗಿ ನಾನಾವಿಧಗಳಾದ ವೇದದ ವಿರುಕ್ಕುಗಳಿಂದ ಹಾಡಲ್ಪಟ್ಟಿರುವುದು (ಹೇಳಲ್ಪಟ್ಟಿವೆ).

(5) ಹೇತುಮದ್ಭಿಃ ವಿನಿಶ್ಚಿತೈಃ ಬ್ರಹ್ಮಸೂತ್ರ ಪದಶ್ಚೈವ (ಗೀತಂ) = ಕಾರ್ಯಕಾರಣ ಯುಕ್ತಿಗಳಿಂದ ಕೂಡಿರುವ ನಿಶ್ಚಯಗಳಿಂದ ಕೂಡಿರುವ ನಿಶ್ಚಯವಾದ ತಿರ್ಮಾನಗಳಿಂದ ಕೂಡಿದ ಬ್ರಹ್ಮಸೂತ್ರವೆಂಬ ಹೆಸರುಳ್ಳ ಪದಗಳಿಂದ ಹೇಳಲ್ಪಟ್ಟಿರುವುದು.

(ಯಾವ ವಿಚಾರಗಳನ್ನು ಅನೇಕ ಋಷಿಗಳು ಪೃಥಿಕ್ ಪೃಥಕ್ಕಾಗಿ ವಿಧವಿಧವಾದ ಛಂದಸ್ಸುಗಳಿಂದ ಹಾಡಿರುವರೋ

ಮತ್ತು ಯುಕ್ತಿಯಿಂದ ಸ್ಥಾಪಿಸಲ್ಪಟ್ಟ ಬ್ರಹ್ಮಸೂತ್ರಪದಗಳಿಂದ ವರ್ಣಿಸಿರುವರೋ ಅವೆಲ್ಲವನ್ನೂ ಸಂಗ್ರಹವಾಗಿ ನನ್ನಿಂದ ಕೇಳು).

(6) "ಸ ಚ ಯೋ" ಎಂಬ ಪದಗಳಲ್ಲಿ "ಸ" ಎಂಬ ಪದಕ್ಕೆ ಮೊದಲನೆಯ ಅಭಿಪ್ರಾಯದ ಪ್ರಕಾರ "ನಿರ್ಗುಣಬ್ರಹ್ಮನೆಂದೂ", ಎರಡನೆಯ ಅಭಿಪ್ರಾಯದ ಪ್ರಕಾರ "ವೈಯಕ್ತಿಕ ಕ್ಷೇತ್ರಜ್ಞ ಅಥವ ಆತ್ಮ" ನೆಂದೂ, ಮೂರನೆಯ ಅಭಿಪ್ರಾಯದ ಪ್ರಕಾರ "ಸಗುಣಬ್ರಹ್ಮ ಅಥವ ಪರಮಾತ್ಮ." ನೆಂದೂ ಬೇರೆ ಬೇರೆ ಅರ್ಥಮಾಡಿದ್ದಾರೆ.

### ಈ ಶ್ಲೋಕಗಳ ತಾತ್ಪರ್ಯ

ಈ ಕ್ಷೇತ್ರವು ಯಾವ ದ್ರವ್ಯವೋ, ಯಾವ ಗುಣವುಳ್ಳದ್ದೋ ಯಾವ ಪರಿಣಾಮಗಳನ್ನು ಹೊಂದುತ್ತದೆಯೋ, ಯಾವ ಕಾರಣಗಳಿಂದ ಯಾವ ಪ್ರಯೋಜನಕ್ಕಾಗಿ ಹುಟ್ಟಿದೆಯೋ ಮತ್ತು ಯಾವ ವ್ಯಾಪಾರಗಳನ್ನು ನಡೆಸುತ್ತದೆಯೋ ಆ ಕ್ಷೇತ್ರಜ್ಞನು ಯಾರು ಮತ್ತು ಅವನ ಮಹಿಮೆಯೇನು ? ಎಂಬ ಈ ವಿಚಾರಗಳೆಲ್ಲವನ್ನೂ ಪೂರ್ವಕಾಲದ ಮಹಾತ್ಮರಾದ ಭಾರತೀಯ ಋಷಿಗಳು ಬಹುಪ್ರಕಾರದಲ್ಲಿ ಕವನ ಮಾಡಿರುವರು. ಋಕ್‌ಯಜುಸ್ಸಾಮ ಅಥರ್ವಣವೆಂಬ ಚತುರ್ವೇದಗಳು ವಿಧವಿಧವಾದ ಬೇರೆ ಬೇರೆ ಛಂದಸ್ಸುಗಳಲ್ಲಿ ಗಾನರೂಪದಲ್ಲಿ ವರ್ಣಿಸಿರುವುವು ಮತ್ತು ದಾರ್ಶನೀಕರೂ ಕೂಡ ಈ ತತ್ವಗಳನ್ನೇ ಬ್ರಹ್ಮಸೂತ್ರಗಳಲ್ಲಿ ಅಂದರೆ ಬ್ರಹ್ಮನನ್ನೇ ಗುರಿಯನ್ನಾಗಿ ಪಡೆದಿರುವ ವಾಕ್ಯಗಳಲ್ಲಿ ಕಾರ್ಯ್ಯಾಕಾರಣದಿಂದ ಕೂಡಿರುವ ಯುಕ್ತಿಗಳಿಂದ ಸಂದೇಹರಹಿತವಾಗಿ ತೀರ್ಮಾನಿಸಿದ್ದಾರೆ. ಅದೇ ವಿಚಾರಗಳನ್ನು ನಾನು ಈಗ ನಿನಗೆ ನೀನು ತಿಳಿದುಕೊಳ್ಳುವಹಾಗೆ ಉಪದೇಶ ಮಾಡುತ್ತೇನೆ ಕೇಳು.

### ಗಮನಿಸಬೇಕಾದ ಅಂಶಗಳು

(1) ಪರಮಾತ್ಮನಾದ ಶ್ರೀಕೃಷ್ಣನೂ ಕೂಡ ವೇದಗಳು, ಬ್ರಹ್ಮಸೂತ್ರಗಳು ಮತ್ತು ಋಷಿಗಳ ಗ್ರಂಥಗಳು ಇವೇ ಮೊದಲಾದ ಶಾಸ್ತ್ರಗಳ ಸಹಾಯವನ್ನು ಪಡೆದು ಅರ್ಜುನನಿಗೆ ಉಪದೇಶವನ್ನು ಮಾಡಿರುವನು ; ಅಂದರೆ ಶಾಸ್ತ್ರಗಳಿಗೆ ಗೌರವವನ್ನು ಕೊಟ್ಟಿರುವನು. ಆದುದರಿಂದ ಮನುಷ್ಯರಾದ ನಾವು ವಿಜ್ಞಾನ ಶಾಸ್ತ್ರಗಳನ್ನೂ ಮತ್ತು ಪಶ್ಚಿಮ ದೇಶಗಳ ತತ್ವಶಾಸ್ತ್ರಗಳನ್ನೂ ಓದಿ ಎಷ್ಟು ಬುದ್ಧಿವಂತರಾದಾಗ್ಯೂ ನಮ್ಮ ಪೂರ್ವಕಾಲದ ಋಷಿಗಳ ಗ್ರಂಥಗಳಿಗೂ ಮತ್ತು ಪ್ರಸ್ಥಾನತ್ರಯಿ ಎಂಬ ಉಪನಿಷತ್ತು, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳಿಗೆ ಹೆಚ್ಚಾದ ಗೌರವವನ್ನೂ ಕೊಟ್ಟು, ಅವುಗಳಲ್ಲಿ ಬೋಧಿಸಿರುವ ವಿಷಯಗಳನ್ನೂ ತಿಳಿದುಕೊಂಡು, ಈಗಿನಕಾಲದ ತಿರ್ಮಾನಗಳಿಗೂ ಮತ್ತು ನಾಗರೀಕತೆಗೂ ಅವನ್ನು ಸಮನ್ವಯಮಾಡಬೇಕು.

(2) ನಾಲ್ಕನೆಯ ಶ್ಲೋಕದಲ್ಲಿ "ಬ್ರಹ್ಮಸೂತ್ರಪದಶ್ಚೈವ" ಎಂದು ಹೇಳಿದೆ. ಇದರಿಂದ ಕೆಲವು ತಜ್ಞರಿಗೆ "ಭಗವದ್ಗೀತೆಯು ಮೊದಲು ಹುಟ್ಟಿತೆ ಅಥವ ಶ್ರೀವ್ಯಾಸರ "ಬ್ರಹ್ಮಸೂತ್ರ." ಗ್ರಂಥ ಮೊದಲು ಹುಟ್ಟಿತೆ ? ಎಂಬ ಸಂದೇಹವುಂಟಾಗಿದೆ. ಈ ಸಂದೇಹಕ್ಕೆ ಅವಕಾಶವಿಲ್ಲ ; ಏಕೆಂದರೆ ಆಕಾಲದಲ್ಲಿ ಶ್ರೀವ್ಯಾಸರ "ಬ್ರಹ್ಮಸೂತ್ರ" ಗ್ರಂಥವಲ್ಲದೆ ಬೇರೆ ಬ್ರಹ್ಮಸೂತ್ರ ಗ್ರಂಥಗಳಿದ್ದುವು ಆದುದರಿಂದ ಈ ಶ್ಲೋಕದ "ಬ್ರಹ್ಮಸೂತ್ರಪದಶ್ಚೈವ" ಎಂಬ ಪದಗಳಿಗೆ ವ್ಯಾಸರ "ವೇದಾಂತ ಸೂತ್ರಗಳು .ಅಥವ ಬ್ರಹ್ಮಸೂತ್ರಗಳು" ಅರ್ಥವನ್ನು ಮಾಡಬೇಕಾದ ಅವಶ್ಯಕತೆ ಇರುವುದಿಲ್ಲ. ಬ್ರಹ್ಮನನ್ನೇ ಗುರಿಯನ್ನಾಗಿ ಪಡೆದಿರುವ ಯುಕ್ತಿಯಿಂದ ಸಿದ್ಧಾಂತ ಮಾಡಲ್ಪಟ್ಟ ಸೂತ್ರಗಳಿಗೆ "ಬ್ರಹ್ಮಸೂತ್ರ" ಎಂದು ಅರ್ಥ ; ಅಷ್ಟೆ.

# ಭಗವದ್ಗೀತಾ ಅಧ್ಯಾಯ ೧೩. ಪಾಠ ೨

## ಕ್ಷೇತ್ರದಲ್ಲಿರುವ ದ್ರವ್ಯಗಳು ಮತ್ತು ವಿಕಾರಗಳು (ಶ್ಲೋಕಗಳು ೫—೬)

ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ |
ಇಂದ್ರಿಯಾಣಿ ದಶೈಕಂ ಚ ಪಂಚಚೇಂದ್ರಿಯ ಗೋಚರಾಃ || ೫ ||
ಇಚ್ಛಾ ದ್ವೇಷ ಸ್ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ |
ಏತತ್‌ಕ್ಷೇತ್ರಂ ಸಮಾಸೇನ ಸವಿಕಾರ ಮುದಾಹೃತಂ || ೬ ||

### ಈ ಶ್ಲೋಕಗಳಲ್ಲಿರುವ ವಾಕ್ಯಗಳ ಅರ್ಥ.

1. ಮಹಾಭೂತಾನಿ, ಅಹಂಕಾರಃ, ಬುದ್ಧಿಃ, ಅವ್ಯಕ್ತಮೇವ ಚ, ಇಂದ್ರಿಯಾಣಿ ದಶೈಕಂಚ, ಪಂಚ ಚ ಇಂದ್ರಿಯ ಗೋಚರಾಃ, ಇಚ್ಛಾದ್ವೇಷಃ, ಸುಖಂದುಃಖಂ, ಸಂಘಾತಶ್ಚೇತನಾ

ಧೃತಿಃ ಏತತ್ ಕ್ಷೇತ್ರಂ=ಮಹಾಭೂತಗಳು, ಅಹಂಕಾರವು, ಬುದ್ಧಿಯು, ಮತ್ತು ಅವ್ಯಕ್ತವು, ಮತ್ತು ಹತ್ತು ಇಂದ್ರಿಯಗಳು, ಮತ್ತು ಇಂದ್ರಿಯಗಳಿಗೆ ಗೋಚರವಾಗತಕ್ಕ ಐದು ವಿಷಯಗಳು ಇಚ್ಛೆಯೂ ದ್ವೇಷವೂ, ಸುಖವೂ ದುಃಖವೂ ಸಂಘಾತಶ್ಚೇತನಾ ಧೃತಿಯು ಇವೆಲ್ಲವೂ ಕ್ಷೇತ್ರವು.

2. (ಏತತ್ ಕ್ಷೇತ್ರಂ) ಸವಿಕಾರಂ ಉದಾಹೃತಂ=(ಈ ಕ್ಷೇತ್ರವು) ಅದರ ವಿಕಾರಗಳೊಡನೆ ಸಂಗ್ರಹವಾಗಿ ಈಗ ಹೇಳಲ್ಪಟ್ಟಿದೆ.

**ಕೆಲವು ಪದಗಳ ವಿಶೇಷಾರ್ಥಗಳು.**

1 **ಮಹಾಭೂತಾನಿ**=ಪೃಥ್ವಿ, ಅಪ್ಪು ಅಥವ ಜಲ, ಅಗ್ನಿ ಅಥವ ತೇಜಸ್ಸು, ವಾಯು, ಆಕಾಶ ಇವುಗಳೇ ಪಂಚ ಮಹಾಭೂತಗಳು.

2. **ಅಹಂಕಾರಃ**=ಮನಸ್ಸಿಗೂ, ಇಂದ್ರಿಯಗಳಿಗೂ, ಪಂಚತನ್ಮಾತ್ರೆಗಳಿಗೂ ಕಾರಣವಾದ ತತ್ವವು ಮತ್ತು ಸೂಕ್ಷ್ಮ ಸ್ಥೂಲ ಶರೀರಗಳನ್ನು ಆತ್ಮನೊಡನೆ ಒಂದುಗೂಡಿಸಿ "ನಾನು ಇಂದ್ರಿಯ, ಮನ, ಬುದ್ಧಿಗಳ ಸಂಯೋಗದಿಂದ ಉಂಟಾಗಿರುವ ಶರೀರ" ಎಂಬ ಅನುಭವಕ್ಕೆ ಕಾರಣವಾದ ತತ್ವವು. ಈ ಅಹಂಕಾರ ತತ್ವವು ಪದಾರ್ಥಗಳನ್ನೂ, ವ್ಯಕ್ತಿಗಳನ್ನೂ ಬೇರೆ ಬೇರೆಯಾಗಿ ವಿಂಗಡಿಸುತ್ತದೆ.

3. **ಬುದ್ಧಿಃ**=ಮಹತ್ತತ್ವ ಎಂದು ಒಂದು ಅರ್ಥ. ಪ್ರತಿ ಮನುಷ್ಯನಲ್ಲಿ ಆಲೋಚನಾತಿಗಳನ್ನು ಮಾಡುವ ಬುದ್ಧಿ ತತ್ವ ಎಂಬುದು ಇನ್ನೊಂದು ಅರ್ಥ.

4. **ಅವ್ಯಕ್ತ**=ಸಕಲ ವಸ್ತುಗಳಿಗೂ ಕಾರಣವಾದ ಮೂಲ ಪ್ರಕೃತಿ ಎಂಬುದು ಒಂದು ಅರ್ಥ. ತ್ರಿಗುಣಗಳಿಂದ ಕೂಡಿದ ಅಥವ ಅವುಗಳಿಗೆ ಆಶ್ರಯವಾದ ದ್ರವ್ಯ–ಶಕ್ತಿಗಳಿಗೆಲ್ಲ ಮೂಲಾಧಾರವಾದ ವ್ಯಕ್ತವಲ್ಲದ **ಮಹಾ ಇರುವಿಕೆ** ಎಂಬುದು ಇನ್ನೊಂದು ಅರ್ಥ. ತ್ರಿಗುಣಮಯವಾದ **ಮಾಯೆಯೇ** ಅವ್ಯಕ್ತ ಎಂದು ಇನ್ನು ಕೆಲವರ ಅಭಿಪ್ರಾಯ. ಈ ಅವ್ಯಕ್ತದ ಸ್ವರೂಪವನ್ನು ವರ್ಣಿಸುವುದಕ್ಕೆ ಆಗುವುದಿಲ್ಲವೆಂದು ಹೇಳುತ್ತಾರೆ.

5. **ಇಂದ್ರಿಯಾಣಿದಶಃ**=ಇಂದ್ರಿಯಗಳನು ಐದು ಜ್ಞಾನೇಂದ್ರಿಯಗಳೆಂದೂ, ಐದು ಕರ್ಮೇಂದ್ರಿಯಗಳೆಂದೂ ಭಾಗ ಮಾಡಿದ್ದಾರೆ. ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು ಇವುಗಳು ಜ್ಞಾನೇಂದ್ರಿಯಗಳು. ಕೈಗಳು, ಕಾಲುಗಳು, ಬಾಯಿ, ಆಸನ, ಉಪಸ್ಥ ಇವು ಕರ್ಮೇಂದ್ರಿಯಗಳು. ಆದ್ದರಿಂದ ಒಟ್ಟು ಹತ್ತು ಬಾಹ್ಯೇಂದ್ರಿಯಗಳಿವೆ. ಚಕ್ಷು, ಶ್ರೋತ್ರ, ತ್ವಕ್, ರಸನ, ಘ್ರಾಣ, ಪಾಣಿ, ಪಾದ, ವಾಕ್, ವಾಯು ಮತ್ತು ಉಪಸ್ಥ ಎಂಬುದಾಗಿ ಸಂಸ್ಕೃತ ಭಾಷೆಯಲ್ಲಿ ಈ ಹತ್ತು ಇಂದ್ರಿಯಗಳನ್ನು ಕರೆದಿದ್ದಾರೆ.

6. **ಏಕಂಚ**=ಈ ಹತ್ತು ಇಂದ್ರಿಯಗಳಲ್ಲದೆ ಒಂದೇ ಆದ ಮನಸ್ಸು ಮುಖ್ಯವಾದ ಅಂತರಿಂದ್ರಿಯವು. ಎಲ್ಲಾ ಇಂದ್ರಿಯಗಳೂ ಮನಸ್ಸೆಂಬ ಇಂದ್ರಿಯದ ಆಶ್ರಯವನ್ನು ಪಡೆದು ಅದರಲ್ಲಿ ಅವುಗಳ ಪ್ರವೃತ್ತಿಗಳೆಲ್ಲಾ ಸೇರುತ್ತವೆ.

7. **ಪಂಚ ಇಂದ್ರಿಯ ಗೋಚರಾಃ**=ಐದು ಜ್ಞಾನೇಂದ್ರಿಯಗಳಿಗೆ ವಿಷಯಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಅತಿ ಸೂಕ್ಷ್ಮವಾದ ಐದು ತನ್ಮಾತ್ರೆಗಳು. ಈ ಐದು ತನ್ಮಾತ್ರೆಗಳೂ ಹಿಂದೆ ಹೇಳಿದ ಐದು ಮಹಾಭೂತಗಳಿಗೆ ಕಾರಣಗಳಾದ ತತ್ವಗಳು.

8 **ಇಚ್ಛಾದ್ವೇಷಃ**=ನಾವು ಹಿಂದೆ ಅನುಭವಿಸಿರುವ ಅಥವ ಇತರರು ಅನುಭವಿಸುತ್ತಿರುವ ಸುಖಗಳನ್ನು ಪುನಃ ಈಗ ಅಥವ ಮುಂದೆ ನಾವು ಪಡೆಯಬೇಕೆಂಬ ಆಶೆಯೇ "ಇಚ್ಛೆ" ಎನಿಸಿಕೊಳ್ಳುತ್ತದೆ. ಹಾಗೆಯೇ ನಾವು ಹಿಂದೆ ಅನುಭವಿಸಿದ ಮತ್ತು ಇತರರು ಅನುಭವಿಸುತ್ತಿರುವ ಕಷ್ಟಗಳು, ಪುನಃ ಈಗ ಅಥವ ಮುಂದೆ ಖಂಡಿತವಾಗಿ ನಮಗೆ ಬರಕೂಡದು ಎಂಬ ಮನೋಭಾವನೆಯೇ "ದ್ವೇಷ" ಎನಿಸಿಕೊಳ್ಳುತ್ತದೆ. ಸುಖಗಳನ್ನುಂಟುಮಾಡುವ ಪದಾರ್ಥಗಳು ಪ್ರಾಣಿಗಳು, ಮನುಷ್ಯರು, ಸನ್ನಿವೇಶಗಳು, ಕಾರ್ಯಗಳು ಇವುಗಳಲ್ಲಿ 'ಇಚ್ಛೆ'ಯುಂಟಾಗುತ್ತದೆ. ಕಷ್ಟಗಳನ್ನುಂಟುಮಾಡುವ ಪದಾರ್ಥಗಳು, ಪ್ರಾಣಿಗಳು, ಮನುಷ್ಯರು, ಸನ್ನಿವೇಶಗಳು ಮತ್ತು ಕಾರ್ಯಗಳಲ್ಲಿ 'ದ್ವೇಷ ವುಂಟಾಗುತ್ತದೆ.

9. **ಸುಖಂದುಃಖಂ**=ನಮಗೆ ಯಾವಾಗಲೂ ಇರಬೇಕೆಂದು ತೋರುವ ಅನುಕೂಲವೇದನೆ ಅಥವ ಅನುಭವವೇ ಸುಖವು. ಸಕ್ಕರೆಯನ್ನು ತಿನ್ನುವುದರಿಂದ ಉಂಟಾಗುವ ಅನುಭವವು ಸುಖಕ್ಕೆ ಒಂದು ಉದಾಹರಣೆ. ಒಡನೆಯೆ ತೊಲಗಬೇಕು ಮತ್ತು ನಮಗೆ ಯಾವಾಗಲೂ ಬರಕೂಡದು ಎಂದು ತೋರುವ ಪ್ರತಿಕೂಲವೇದನೆಯೇ ದುಃಖವು ; ಚೇಳು ಕುಟುಕುವುದರಿಂದ ಉಂಟಾಗುವ ವೇದನೆಯು ದುಃಖಕ್ಕೆ ಒಂದು ಉದಾಹರಣೆ.

10. **ಸಂಘಾತಃ ಚೇತನಾಧೃತಿಃ**= ಈ ಮೂರು ಪದಗಳನ್ನೂ ಒಟ್ಟಾಗಿ ಸೇರಿಸಿದರೆ ಒಂದು ಅರ್ಥವಾಗುತ್ತದೆ. ಇವುಗಳನ್ನು ಬಿಡಿಸಿ ಒಂದೊಂದು ಪದಕ್ಕೂ ಬೇರೆ ಬೇರೆ ಅರ್ಥಗಳನ್ನೂ ಹೇಳಬಹುದು. "ಸಂಘಾತ"ವೆಂದರೆ ಈ ದ್ರವ್ಯಗಳೆಲ್ಲವೂ ಸೇರಿರುವ ಶರೀರವು; ಆದುದರಿಂದ "ಸಂಘಾತಶ್ಚೇತನಾಧೃತಿಃ" ಎಂದರೆ ಜ್ಞಾನದ ಅಲೆಗಳಿಗೆ ಆಧಾರವಾಗಿರುವ ಪ್ರಾಣಿಯ ಶರೀರ ಎಂದು ಅರ್ಥಮಾಡಬಹುದು. "ಸಂಘಾತಶ್ಚೇತನಾಧೃತಿಃ" ಎಂಬಲ್ಲಿ ಮೂರು ಪದಗಳನ್ನೂ ಪ್ರತ್ಯೇಕ ಮಾಡಿದರೆ ಆಗ "ಸಂಘಾತಃ" ಎಂದರೆ ರಕ್ತ, ಮೂಳೆ, ಹೃದಯಾದಿಗಳಿಂದ ಕೂಡಿದ ದೇಹವು; "ಚೇತನ" ಎಂದರೆ ಅಂತಃಕರಣ ಸಂಬಂಧದಿಂದ ಕಂಡುಬರುವ ಜ್ಞಾನಶಕ್ತಿಯು; ಮತ್ತು "ಧೃತಿ" ಎಂದರೆ ಧೈರ್ಯವು ಎಂದು ಅರ್ಥಮಾಡಬಹುದು.

### ಈ ಶ್ಲೋಕಗಳ ತಾತ್ಪರ್ಯ

ಈ ಅಧ್ಯಾಯದ ಮೂರನೆಯ ಶ್ಲೋಕದಲ್ಲಿ ಕೆಳಗಿನ ಆರು ಪ್ರಶ್ನೆಗಳಿವೆ. (೧) ಈ ಕ್ಷೇತ್ರವು ಯಾವುದು? (೨) ಇದು ಯಾವ ಬಗೆಯಾಗಿ ಇದೆ? (೩) ಇದು ಯಾವ ದ್ರವ್ಯಗಳಿಂದ ಕೂಡಿದೆ? (೪) ಇದು ಯಾವ ವಿಕಾರಗಳನ್ನು ಪಡೆದಿರುವುದು? (೫) ಇದು ಯಾವ ಪ್ರಯೋಜನಕ್ಕಾಗಿ ಹುಟ್ಟಿದೆ? ಮತ್ತು (೬) ಕ್ಷೇತ್ರಜ್ಞನು ಯಾರು ಮತ್ತು ಅವನ ಪ್ರಭಾವಗಳೇನು? ಈ ಅಧ್ಯಾಯದ ಐದನೆಯ ಮತ್ತು ಆರನೆಯ ಶ್ಲೋಕಗಳಲ್ಲಿ (ಅಂದರೆ ಈ ಪಾಠದ ಶ್ಲೋಕಗಳಲ್ಲಿ) ಮೊದಲು ನಾಲ್ಕು ಪ್ರಶ್ನೆಗಳಿಗೆ ಮಾತ್ರ ಉತ್ತರವನ್ನು ಕೊಟ್ಟಿದೆ. ಈ ಅಧ್ಯಾಯದ ಏಳು, ಎಂಟು, ಒಂಭತ್ತು, ಹತ್ತು, ಹನ್ನೊಂದನೆಯ ಶ್ಲೋಕಗಳಲ್ಲಿ ಐದನೆಯ ಪ್ರಶ್ನೆಗೆ ಉತ್ತರವನ್ನು ಕೊಟ್ಟಿದೆ. ಈ ಅಧ್ಯಾಯದ ಹನ್ನೆರಡು, ಹದಿಮೂರು, ಹದಿನಾಲ್ಕು, ಹದಿನೈದು, ಹದಿನಾರು, ಹದಿನೇಳು ಮತ್ತು ಹದಿನೆಂಟನೆಯ ಶ್ಲೋಕಗಳಲ್ಲಿ ಆರನೆಯ ಪ್ರಶ್ನೆಗೆ ಉತ್ತರವನ್ನು ಕೊಟ್ಟಿದೆ.

ಮೊದಲನೆಯ ಶ್ಲೋಕದಲ್ಲಿ ಸೂಚಿಸಿರುವ ಒಬ್ಬ ವ್ಯಕ್ತಿಯ ಶರೀರವೂ ಮತ್ತು ಎರಡನೆಯ ಶ್ಲೋಕದಲ್ಲಿ ಸೂಚಿಸಿರುವ ಅನೇಕಾನೇಕ ಶರೀರಗಳ ಸಮುದಾಯರೂಪವಾಗಿರುವ ಜಗತ್ತೂ ಇವೆರಡೂ ಸೇರಿ "ಕ್ಷೇತ್ರ"ವೆಂದು ಕರೆಯಲ್ಪಡುತ್ತದೆ. ವೈಯಕ್ತಿಕ ಕ್ಷೇತ್ರವು ಪ್ರತ್ಯೇಕವಾದದ್ದು; ಅಂದರೆ "ವ್ಯಷ್ಟಿ"ಯಾದದ್ದು. ಜಗತ್ತಿನ ರೂಪದ ಕ್ಷೇತ್ರವು ಸಾಮೂಹಿಕವಾಗಿರುವುದು; ಅಂದರೆ "ಸಮಷ್ಟಿ" ಯಾದದ್ದು. ಹೀಗೆ "ಕ್ಷೇತ್ರವು" ವ್ಯಷ್ಟಿಸ್ವರೂಪವಾಗಿಯೂ, ಸಮಷ್ಟಿಸ್ವರೂಪವಾಗಿಯೂ ಎರಡು ಬಗೆಯಾಗಿ ವಿಂಗಡಿಸಲ್ಪಟ್ಟಿದೆ. ಹಾಗಾದರೆ, ಈ ವ್ಯಷ್ಟಿ ಮತ್ತು ಸಮಷ್ಟಿ ಎಂಬ ಎರಡು ಸ್ವರೂಪಗಳಲ್ಲಿಯೂ ಇರುವ "ಕ್ಷೇತ್ರ"ದಲ್ಲಿ ಕಂಡುಬರುವ ದ್ರವ್ಯಗಳಾವುವು? ಐದು ಮಹಾಭೂತಗಳು, ಅಹಂಕಾರ, ಬುದ್ಧಿ, ಅವ್ಯಕ್ತ, ಹತ್ತು ಇಂದ್ರಿಯಗಳು, ಒಂದೇ ಆದ ಮನಸ್ಸು. ಐದು ಇಂದ್ರಿಯ ಗೋಚರಗಳು, ಎಂಬ ಇಪ್ಪತ್ತುನಾಲ್ಕು ದ್ರವ್ಯಗಳೂ ಸೇರಿ "ಕ್ಷೇತ್ರ"ವಾಗುತ್ತದೆ ಎಂದು ಉತ್ತರವನ್ನು ಕೊಟ್ಟಿದೆ. ಇನ್ನು ಕ್ಷೇತ್ರದ ವಿಕಾರಗಳಾವುವು ಎಂಬುದನ್ನು ಅರಿಯಬೇಕಾಗಿದೆ. ಪ್ರಾಣಿಗಳಲ್ಲಿ, ಮುಖ್ಯವಾಗಿ ಮನುಷ್ಯರಲ್ಲಿ ಕಂಡುಬರುವ "ಇಚ್ಛೆ, ದ್ವೇಷ, ಸುಖ, ದುಃಖ, ಸಂಘಾತದಿಂದುಂಟಾಗುವ ಚೇತನ ಅಥವ ಲೋಕಜ್ಞಾನ ಮತ್ತು ಧೃತಿ ಅಥವ ಧೈರ್ಯ" ಎಂಬ ಚಿತ್ತವಿಕಾರಗಳು ಅಥವ ಜ್ಞಾನವನ್ನುಂಟುಮಾಡುವ ಅಲೆಗಳು ಕ್ಷೇತ್ರದ ಅಥವ ಶರೀರದ ವಿಕಾರಗಳು. ಕ್ಷೇತ್ರವು ಯಾವ ಪ್ರಯೋಜನಕ್ಕಾಗಿ ಹುಟ್ಟಿದೆ ಮತ್ತು ಕ್ಷೇತ್ರಜ್ಞನ ವಿಚಾರವೇನು ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಮುಂದಿನ ಹದಿಮೂರು ಶ್ಲೋಕಗಳಲ್ಲಿ ತಿಳಿಯುತ್ತೇವೆ. ಆದರೆ ಈ ಎರಡು ಪ್ರಶ್ನೆಗಳು "ಕ್ಷೇತ್ರಜ್ಞ"ನಿಗೆ ಸಂಬಂಧಪಟ್ಟವುಗಳು; ಆದುದರಿಂದ ಈ ಎರಡು ಶ್ಲೋಕಗಳಲ್ಲಿ ಕ್ಷೇತ್ರದ ವಿಚಾರವು ಮಾತ್ರ ಸಂಗ್ರಹವಾಗಿ ಹೇಳಲ್ಪಟ್ಟಿದೆ.

### ಗಮನಿಸಬೇಕಾದ ವಿಷಯಗಳು

(a) ಈ ಗೀತಾಶ್ಲೋಕಗಳಲ್ಲಿ ಐದು ಮಹಾಭೂತಗಳೂ, ಅಹಂಕಾರ, ಬುದ್ಧಿ, ಅವ್ಯಕ್ತ, ಹತ್ತು ಇಂದ್ರಿಯಗಳು, ಒಂದೇ ಆದ ಮನಸ್ಸು, ಐದು ಇಂದ್ರಿಯ ಗೋಚರಗಳು, ಇವು ಕ್ಷೇತ್ರದಲ್ಲಿ ಇವೆಯೆಂದು ಹೇಳಿದೆ. ಸಾಂಖ್ಯದರ್ಶನದಲ್ಲಿ ಪ್ರಕೃತಿ, ಮಹತ್ತು, ಅಹಂಕಾರ, ಮನಸ್ಸು, ಐದು ಜ್ಞಾನೇಂದ್ರಿಯಗಳು ಐದು ಕರ್ಮೇಂದ್ರಿಯಗಳು, ಐದು ತನ್ಮಾತ್ರೆಗಳು, ಐದು ಪಂಚಮಹಾಭೂತಗಳು ಎಂಬ ತತ್ವಗಳಿಂದ ಕೂಡಿ ಈ ಜಗತ್ತು ಮತ್ತು ಅದರಲ್ಲಿರುವ ವೈಯಕ್ತಿಕ ಶರೀರಗಳೂ ಉಂಟಾಗಿವೆ ಎಂದು ಹೇಳಿದೆ. ಐದು ಮಹಾಭೂತಗಳು, ಅಹಂಕಾರ, ಮನಸ್ಸು, ಹತ್ತು ಇಂದ್ರಿಯಗಳು ಎಂಬ ಹದಿನೇಳು ತತ್ವಗಳು ಗೀತೆಯಲ್ಲಿಯೂ ಇದೆ ಮತ್ತು ಸಾಂಖ್ಯದರ್ಶನದಲ್ಲಿಯೂ ಇದೆ. ಸಾಂಖ್ಯದರ್ಶನದ "ಮಹತ್ತು" ಮತ್ತು ಗೀತೆಯ "ಬುದ್ಧಿಯೂ" ಒಂದೇ; ಸಾಂಖ್ಯದರ್ಶನದ "ಪ್ರಕೃತಿಯೂ" ಗೀತೆಯ "ಅವ್ಯಕ್ತವೂ" ಒಂದೇ; ಮತ್ತು ಸಾಂಖ್ಯದರ್ಶನದಲ್ಲಿ "ಐದು ತನ್ಮಾತ್ರೆಗಳು" ಎಂದು ಹೇಳಿರುವುದನ್ನೇ ಗೀತೆಯಲ್ಲಿ "ಐದು ಇಂದ್ರಿಯ ಗೋಚರಗಳು" ಎಂದು ಹೇಳಿದೆ. ಆದುದರಿಂದ ಭಗವದ್ಗೀತೆಯ ಕ್ಷೇತ್ರದಲ್ಲಿಯೂ ಇಪ್ಪತ್ತುನಾಲ್ಕು ದ್ರವ್ಯಗಳಿವೆ; ಸಾಂಖ್ಯದರ್ಶನದಲ್ಲಿಯೂ ಇಪ್ಪತ್ತುನಾಲ್ಕು ತತ್ವಗಳ ವರ್ಣನೆ ಇದೆ. ಇಪ್ಪತ್ತುನಾಲ್ಕು ತತ್ವಗಳಲ್ಲದ ಇಪ್ಪತ್ತೈದನೆಯ ತತ್ವವನ್ನು ಸಾಂಖ್ಯದರ್ಶನದಲ್ಲಿ "ಪುರುಷ"ನೆಂದು ಕರೆದಿದೆ ಮತ್ತು ಭಗವದ್ಗೀತೆಯಲ್ಲಿ "ಕ್ಷೇತ್ರಜ್ಞ"ನೆಂದು ಕರೆದಿದೆ.

[Re-printed from Mysore Vysya Patrika]
(November 1958)

# ಭಗವದ್ಗೀತಾ ಅಧ್ಯಾಯ ೧೩. ಪಾಠ ೨ ಮತ್ತು ೩

(b) ಪಶ್ಚಿಮ ದೇಶಗಳ ಆಧುನಿಕ ವಿಜ್ಞಾನಶಾಸ್ತ್ರದ ಪರಿಣಾಮವೇನು ? ಅನಾದಿಯಾಗಿ ದೇಶ ಕಾಲ (Space-Time) ಅಥವ ಈಥರ್ (Ether) ಎಂಬ ಅವ್ಯಕ್ತವಾದ, ಅಖಂಡವಾದ, ಅತಿ ಸೂಕ್ಷ್ಮವಾದ, ಜ್ಞಾನರಹಿತವಾದ ಮಹಾ ಇರುವಿಕೆಯು (Great Existence) ಇದೆ. ಅದರಲ್ಲಿ ಮೊದಲು ನ್ಯೂಟ್ರಾನ್, ಇಲೆಕ್ಟ್ರಾನ್, ಪ್ರೋಟಾನ್ (Nuetrons, Electrons, Protons) ಎಂಬ ವಿದ್ಯುತ್ ಶಕ್ತಿಯನ್ನು ಪಡೆದಿರುವ ಪರಮಾಣುಗಳು ಎಲ್ಲೆಲ್ಲಿಯೂ ಹುಟ್ಟುತ್ತವೆ. ಇವುಗಳ ಸಂಯೋಗದಿಂದ, ಚಲನೆಗಳಿಂದ ಮತ್ತು ವಿದ್ಯುತ್‌ಶಕ್ತಿಯಿಂದ ಸುಮಾರು ತೊಂಭತ್ತು, ತೊಂಭತ್ತೊಂದು ಅಣುಗಳು (Atoms) ಹುಟ್ಟುತ್ತವೆ. ಈ ಅಣುಗಳ ಸಂಯೋಗದಿಂದ ಮತ್ತು ಶಕ್ತಿಗಳಿಂದ ಕ್ರಮೇಣ ನಕ್ಷತ್ರಗಳು, ನಕ್ಷತ್ರಗಳಲ್ಲಿ ಸೂರ್ಯನು, ಗ್ರಹಗಳು, ಗ್ರಹಗಳಲ್ಲಿ ಭೂಮಿಯು, ಭೂಮಿಯಲ್ಲಿ ಸಮುದ್ರಭಾಗ ಮತ್ತು ಪೃಥ್ವೀಭಾಗ ಎಂದು ಎರಡು ಭಾಗಗಳು, ಇವೆರಡರಲ್ಲಿಯೂ ಬೆಟ್ಟ ಮೊದಲಾದ ಅಚೇತನ ಪದಾರ್ಥಗಳು, ಜೀವದ ಅಣುಗಳು, ಸಸ್ಯಗಳು ಮತ್ತು ಪ್ರಾಣಿಗಳು ಮೊದಲಾದ ಅಲ್ಪಜೀವಿಗಳು ಮತ್ತು ಭೂಭಾಗದಲ್ಲಿ ಬುದ್ಧಿಯನ್ನು ಪಡೆದಿರುವ ಮನುಷ್ಯರು ಒಂದು ನಿಯತ ಕ್ರಮದಲ್ಲಿ ಒಂದಾದ ಮೇಲೆ ಒಂದು ಬೆಳೆಯುತ್ತಲೇ ಇರುವುವು. ಆದುದರಿಂದ ಜೀವವಿರುವ ವಸ್ತುಗಳೂ ಮತ್ತು ಜ್ಞಾನದ ಅಲೆಗಳಿಗೆ ಆಶ್ರಯವಾದ ಮನಸ್ಸನ್ನು ಪಡೆದಿರುವ ಪ್ರಾಣಿಗಳೂ ಪ್ರಪಂಚದ ಪರಿಣಾಮಗಳಲ್ಲಿ ಬಹುಕಾಲದವರೆಗೆ ಇರಲಿಲ್ಲ ; ಈಚೀಚೆಗೆ ಅವು ಹುಟ್ಟಿವೆ ಎಂದು ವಿಜ್ಞಾನಶಾಸ್ತ್ರಜ್ಞರು ಹೇಳುತ್ತಾರೆ.

(c) ಸಾಂಖ್ಯದರ್ಶನದ ಪರಿಣಾಮವಾದ ಕ್ರಮವನ್ನು ತಿಳಿಯೋಣ. ಪ್ರಳಯಕಾಲದಲ್ಲಿ ಸತ್ವ, ರಜಸ್ಸು, ತಮಸ್ಸು, ಎಂಬ ತ್ರಿಗುಣಗಳಿಂದ ಕೂಡಿದ ಮೂಲಪ್ರಕೃತಿಯು ಅನಾದಿಯಾಗಿ, ಅವ್ಯಕ್ತವಾಗಿ, ಅನಿರ್ವಚನೀಯವಾಗಿ, ರೂಪಾದಿರಹಿತವಾಗಿ, ಅಖಂಡವಾಗಿ ಯಾವಾಗಲೂ ಇದೆ. ಪುರುಷನ ಸಾನಿಧ್ಯದಿಂದ ಈ ಗುಣಗಳಲ್ಲಿ ಹೆಚ್ಚುಕಮ್ಮಿಯಾದರೆ ಒಡನೆಯೆ ಸೃಷ್ಟಿಗೆ ಆರಂಭವಾಗುತ್ತದೆ. ಮೊದಲು ಮೂಲಪ್ರಕೃತಿಯ ಒಂದು ಭಾಗವು ಮಹತ್ತತ್ವವಾಗಿ ಪರಿಣಾಮವಾಗುತ್ತದೆ ; ಮಹತ್ತತ್ವದ ಒಂದು ಭಾಗವು ಅಹಂಕಾರ ತತ್ವವಾಗುತ್ತದೆ ; ಅಹಂಕಾರ ತತ್ವದಲ್ಲಿ ಒಂದು ಭಾಗವು ಮನಸ್ ತತ್ವವಾಗಿಯೂ, ಇನ್ನೊಂದು ಭಾಗವು ಇಂದ್ರಿಯ ತತ್ವಗಳಾಗಿಯೂ, ಮತ್ತೊಂದು ಭಾಗವು ಪಂಚತನ್ಮಾತ್ರೆಗಳಾಗಿಯೂ ಪರಿಣಾಮವಾಗುತ್ತದೆ ; ಪಂಚತನ್ಮಾತ್ರೆಗಳಲ್ಲಿ ಕೆಲವು ಸಂಯೋಗವಾಗಿ ಪಂಚಮಹಾಭೂತ ತತ್ವಗಳು ಹುಟ್ಟುತ್ತವೆ. ಹೀಗೆ ಅದ್ವಿತೀಯವಾದ ಅಖಂಡ ಮೂಲಪ್ರಕೃತಿಯಿಂದ ಸೃಷ್ಟಿಯಲ್ಲಿ ಇಪ್ಪತ್ತುನಾಲ್ಕು ತತ್ವಗಳುಂಟಾಗುತ್ತವೆ ; ಆದನ್ನೇ ಸಮಷ್ಟಿ ಸೃಷ್ಟಿ " ಎಂದು ಕರೆದಿದೆ ಈ ಇಪ್ಪತ್ತುನಾಲ್ಕು ತತ್ವಗಳ ವಿಧವಿಧವಾದ ಅನಂತಾನಂತ ಸಂಯೋಗಗಳಿಂದ ಸಹಸ್ರಾರು ಬ್ರಹ್ಮಾಂಡಗಳು ಮತ್ತು ಆಯಾ ಲೋಕಗಳಲ್ಲಿ ಕೋಟ್ಯಾನುಕೋಟಿ ಜೀವಿಗಳ ಶರೀರಗಳೂ ಪ್ರಳಯಕಾಲ ಆರಂಭವಾಗುವವರೆಗೆ ಬೆಳೆಯುತ್ತಲೇ ಇವೆ ; ಇದನ್ನೇ " ವ್ಯಷ್ಟಿ ಸೃಷ್ಟಿ " ಎಂದು ಕರೆದಿದೆ.

(d) ಇನ್ನು ಆಧುನಿಕ ವಿಜ್ಞಾನಶಾಸ್ತ್ರದ ಪರಿಣಾಮವಾದವೂ ಮತ್ತು ಸಾಂಖ್ಯದರ್ಶನದ ಪರಿಣಾಮವಾದವೂ ಒಂದಕ್ಕೊಂದು ವಿರೋಧವಿಲ್ಲ ಮತ್ತು ಮೊದಲನೆಯದು ಎರಡನೆಯದನ್ನು ಪೂರ್ಣಮಾಡುತ್ತದೆ ಎಂಬುದನ್ನು ನಾವು ಗಮನಿಸಬೇಕು. ಸಾಂಖ್ಯದರ್ಶನದಲ್ಲಿ ಪಂಚಮಹಾಭೂತಗಳನ್ನು ಸಮಷ್ಟಿ ಸೃಷ್ಟಿಯಲ್ಲಿ ಕೊನೆಯ ಪರಿಣಾಮವನ್ನಾಗಿ ಸೂಚಿಸಿ, ಆಮೇಲೆ 'ಈ ಇಪ್ಪತ್ತುನಾಲ್ಕು ತತ್ವಗಳ ಸಂಯೋಗಗಳಿಂದ ಬ್ರಹ್ಮಾಂಡಗಳ, ಲೋಕಗಳ, ಅವುಗಳೊಳಗಿನ ಶರೀರಗಳ ಸೃಷ್ಟಿಯನ್ನು ಸೂಚಿಸಿರುವರು ; ಆದರೆ ಬ್ರಹ್ಮಾಂಡಾದಿಗಳ ವ್ಯಷ್ಟಿ ಸೃಷ್ಟಿಯನ್ನು ವಿಶದವಾಗಿ, ಸಯುಕ್ತಿಕವಾಗಿ ವರ್ಣಿಸಿಲ್ಲ. ವಿಜ್ಞಾನಶಾಸ್ತ್ರಜ್ಞರು " ದೇಶ—ಕಾಲ—ಶಕ್ತಿ—ಇಲೆಕ್ಟ್ರಾನ್—ಪ್ರೋಟಾನ್ " ಎಂಬ ಅತ್ಯಂತ ಸೂಕ್ಷ್ಮವಾದ ಪದಾರ್ಥ.—

ಶಕ್ತಿಗಳನ್ನು ಆಧಾರವಾಗಿಟ್ಟುಕೊಂಡು ನಕ್ಷತ್ರಮಂಡಲಗಳ, ಸೂರ್ಯಮಂಡಲದ. ಭೂಮಿಯಲ್ಲಿರುವ ಪದಾರ್ಥಗಳ ಮತ್ತು ಪ್ರಾಣಿಗಳ ವೈಯಕ್ತಿಕ ಅಥವ ವ್ಯಷ್ಟಿ ಸೃಷ್ಟಿಯ ಪರಿಣಾಮ ಗಳನ್ನು ಸಕಾರಣವಾಗಿ ವಿಶದವಾಗಿ ವಿವರಿಸಿರುವರು. ಸೃಷ್ಟಿ ಕ್ರಮದಲ್ಲಿ "ಸಮಷ್ಟಿ ಸೃಷ್ಟಿ" ಕ್ರಮವನ್ನು ಸಾಂಖ್ಯದರ್ಶನದಲ್ಲಿ ಉತ್ತಮವಾಗಿ ವರ್ಣಿಸಿದೆ; "ವ್ಯಷ್ಟಿ ಸೃಷ್ಟಿ" ಕ್ರಮವನ್ನು ಆಧುನಿಕ ವಿಜ್ಞಾನಶಾಸ್ತ್ರವು ಉತ್ತಮವಾಗಿ ವರ್ಣಿಸಿದೆ. ಆದುದರಿಂದ ನಾವು ಎರಡು ಪರಿಣಾಮ ವಾದಗಳನ್ನೂ ಚೆನ್ನಾಗಿ ತಿಳಿದುಕೊಂಡರೆ ಒಟ್ಟು ಜಗತ್ತಿನ ಸೃಷ್ಟಿಕ್ರಮವನ್ನೂ ಅಥವಾ ಪರಿಣಾಮಗಳನ್ನೂ ಆದಿಯಿಂದ ಕೊನೆಯವರೆಗೆ ಸಂಪೂರ್ಣವಾಗಿ ತಿಳಿದುಕೊಳ್ಳುತ್ತೇವೆ. ಸಾಂಖ್ಯದರ್ಶನದ ಪರಿಣಾಮವಾದ ವನ್ನೂ, ಆಧುನಿಕ ವಿಜ್ಞಾನಶಾಸ್ತ್ರದ ಪರಿಣಾಮ ವಾದವನ್ನೂ ಸಮನ್ವಯಮಾಡಿದರೆ ಜಗತ್ತಿನ ಪರಿಣಾಮಗಳು ಆದಿಯಿಂದ ಕೊನೆಯವರೆಗೆ ಕಾರ್ಯಕಾರಣವಾಗಿ ಅಂದರೆ ಒಂದರಿಂದ ಒಂದು ಹುಟ್ಟುವ ಕ್ರಮವು ಈ ರೀತಿ ಇದೆ:—(a) **ಸಮಷ್ಟಿಸೃಷ್ಟಿ**:- 1. **ಮೂಲಪ್ರಕೃತಿ** ಅಥವ ಅವ್ಯಕ್ತ 2. ಮಹತ್ತು ಅಥವ ಬುದ್ಧಿ 3. ಅಹಂಕಾರ 4. ಮನಸ್ಸು 5. ಐದು ಜ್ಞಾನೇಂದ್ರಿಯಗಳು 6. ಐದು ಕರ್ಮೇಂದ್ರಿಯಗಳು 7. ಐದು ತನ್ಮಾತ್ರೆಗಳು ಅಥವ ಇಂದ್ರಿಯ ಗೋಚರಗಳು 8. ಐದು ಮಹಾಭೂತಗಳು. (b) **ವ್ಯಷ್ಟಿಸೃಷ್ಟಿ**:—9. ಕಾಲ-ದೇಶ-ಶಕ್ತಿ (Time-Space-Energy) ಎಂಬ ಮಹಾ ಇರುವಿಕೆ 10. ನ್ಯೂಟ್ರಾನ್, ಪ್ರೋಟಾನ್, ಇಲೆಕ್ಟ್ರಾನ್ ಎಂಬ ಪರಮಾಣುಗಳು 11. ಶಕ್ತಿಯನ್ನು ಒಳಗೊಂಡ ಸ್ಥೂಲ ಅಣುಗಳು (Atoms) 12. ನಕ್ಷತ್ರಗಳು (ಇವುಗಳಲ್ಲಿ ಸೂರ್ಯನು ಒಂದು ನಕ್ಷತ್ರ) 13. ಗ್ರಹಗಳು (ಇವುಗಳಲ್ಲಿ ಭೂಮಿಯು ಒಂದು ಗ್ರಹ) 14. ಭೂಮಿಯಲ್ಲಿ ನಿರ್ಜೀವ ಪದಾರ್ಥಗಳು 15. ಭೂಮಿಯಲ್ಲಿ ಮೂಲಜೀವಾಣುಗಳು ಮತ್ತು ಕ್ರಿಮಿಗಳು 16. ಭೂಮಿಯಲ್ಲಿ ಸಸ್ಯವೃಕ್ಷಾದಿಗಳು 17. ಭೂಮಿಯಲ್ಲಿ ಇತರ ಪ್ರಾಣಿಗಳು ಮತ್ತು 18. ಭೂಮಿಯಲ್ಲಿ ಮನುಷ್ಯರು.

(e) ಇಲ್ಲಿ ಒಂದು ವಿಶೇಷ ವಿಷಯವನ್ನು ತಿಳಿಯಬೇಕು. ಸಾಂಖ್ಯದರ್ಶನವೇ ಮೊದಲಾದ ಭಾರತೀಯ ದರ್ಶನಗಳಲ್ಲಿ ಪಂಚಮಹಾಭೂತಗಳೂ ಮತ್ತು ಅದರ ವಿಕಾರ ಗಳೂ ಸೇರಿಲ್ಲದ ಮಿಕ್ಕ ಪ್ರಕೃತಿ, ಮಹತ್ತು, ಅಹಂಕಾರ, ಮನ, ಇಂದ್ರಿಯಗಳು ಮತ್ತು ತನ್ಮಾತ್ರೆಗಳು ಎಂಬ ಹತ್ತೊಂಬತ್ತು ತತ್ವಗಳ ಸಂಯೋಗದಿಂದ ಮಾತ್ರ ಸೂಕ್ಷ್ಮ ಶರೀರವು ಉಂಟಾಗುತ್ತದೆ ಎಂದು ಹೇಳಿದೆ. ನಮ್ಮ ಇಂದ್ರಿಯಗಳಿಗೆ ಗೋಚರ ವಲ್ಲದ ಸೂಕ್ಷ್ಮ ಲೋಕಗಳಲ್ಲಿರುವ ದೇವತೆಗಳು, ಪಿತೃಗಳು, ಮುಂತಾದ ಅದೃಶ್ಯ ವ್ಯಕ್ತಿಗಳು ಈ ಸೂಕ್ಷ್ಮದೇಹಗಳನ್ನು ಪಡೆದಿದ್ದಾರೆ; ಅವರು ನಮ್ಮ ಹಾಗೆ ಇಪ್ಪತ್ತುನಾಲ್ಕು ತತ್ವಗಳಿಂದ ಮುಖ್ಯವಾಗಿ ಪಂಚಮಹಾಭೂತಗಳಿಂದ ಕೂಡಿದ ಸೂಕ್ಷ್ಮದೇಹ ಗಳನ್ನು ಒಳಗೊಂಡ ಸ್ಥೂಲದೇಹಗಳನ್ನು ಪಡೆದಿಲ್ಲ. ದೇವತಾದಿ ಗಳಲ್ಲಿ ಪಂಚಮಹಾಭೂತಗಳ ಸಂಯೋಗವಿಲ್ಲದಿರುವುದರಿಂದ ಅವರ ಶರೀರಗಳು ನಮಗೆ ಪ್ರತ್ಯಕ್ಷವಾಗಿ ಕಾಣುವುದಿಲ್ಲ. ಹಾಗೆಯೇ ಭೂಮಿಯಲ್ಲಿರುವ ಮನುಷ್ಯರು ಪ್ರಾಣಿಗಳು ಸತ್ತು ಹೋದರೆ ಪಂಚಮಹಾಭೂತಗಳಿಂದ ಉಂಟಾಗಿರುವ ಅವರ ಸ್ಥೂಲದೇಹಗಳು ನಾಶವಾಗುತ್ತವೆಯೇ ವಿನಃ ಅವರ ಸೂಕ್ಷ್ಮದೇಹಗಳು ನಾಶವಾಗುವುದಿಲ್ಲ. ಈ ಕಾಲದಲ್ಲಿ ಕ್ಷೇತ್ರಜ್ಞನು ತನ್ನ ಸೂಕ್ಷ್ಮದೇಹದ ಮೂಲಕ ಸೂಕ್ಷ್ಮವಾದ ಪರಲೋಕಾನುಭವಗಳನ್ನು ಪಡೆಯುವನು.

(f) ಸಾಂಖ್ಯದರ್ಶನದಲ್ಲೂ, ಭಗವದ್ಗೀತೆಯ ಈ ಎರಡು ಶ್ಲೋಕಗಳಲ್ಲಿಯೂ ಇಪ್ಪತ್ತುನಾಲ್ಕು ತತ್ವಗಳು ಅಥವ ದ್ರವ್ಯಗಳು ಸೂಚಿಸಲ್ಪಟ್ಟಿವೆ. ಆದರೆ ಈ ಗೀತೆಯ ಶ್ಲೋಕಗಳಲ್ಲಿ "ಇಚ್ಛೆ, ದ್ವೇಷ, ಸುಖ, ದುಃಖ, ಸಂಘಾತಃ ಚೇತನ, ಸಂಘಾತಃ ಧೃತಿಃ" ಎಂಬ ಹೆಚ್ಚು ವಿಕಾರಗಳನ್ನೂ ಕೂಡ ಸೇರಿಸಿದೆ. ಈ ವಿಕಾರ ಗಳು ಅಂತಃಕರಣದಲ್ಲಿ ನಡೆಯುತ್ತಿರುವ ಒಳಗಿನ ವೃತ್ತಿಗಳು. ಈ ವಿಕಾರಗಳು ಅಥವ ಚಿತ್ತವೃತ್ತಿಗಳು ಕ್ಷೇತ್ರಜ್ಞ ಅಥವ ಪುರುಷನಿಗೆ ಸೇರಿವೆಯೆ? ಇಲ್ಲದೆ ಕ್ಷೇತ್ರ ಅಥವ ಪ್ರಕೃತಿಗೆ ಸೇರಿದೆಯೆ? ಪಶ್ಚಿಮದೇಶದ ವಿಜ್ಞಾನಶಾಸ್ತ್ರಜ್ಞರು ಕ್ಷೇತ್ರಜ್ಞ ಅಥವ ಪುರುಷನು ಇರುವನು ಎಂಬುದನ್ನು ಒಪ್ಪದೆ ಇರುವುದ ರಿಂದ ಅವರು ಅಂತಃಕರಣದ ಈ ವಿಕಾರಗಳನ್ನು ಕ್ಷೇತ್ರ ಅಥವ ಪ್ರಕೃತಿಯಲ್ಲಿ ಸೇರಿಸುತ್ತಾರೆ. ಇದಕ್ಕೆ ವಿರೋಧವಾಗಿ ವೈಶೇಷಿಕ ದರ್ಶನದಲ್ಲಿ "ಇಚ್ಛಾದ್ವೇಷಾದಿಗಳು" ಕ್ಷೇತ್ರಜ್ಞ ಅಥವ ಆತ್ಮನಿಗೆ ಸೇರಿದ್ದು; ಕ್ಷೇತ್ರಕ್ಕೆ ಸೇರಿಲ್ಲವೆಂದು ಹೇಳಿದೆ. ವೇದಾಂತ ದರ್ಶನದ ಪ್ರಚಾರಕರಲ್ಲಿಯೂ ಕೂಡ ಈ ವಿಚಾರದಲ್ಲಿ ಅಭಿಪ್ರಾಯ ಬೇಧವಿದೆ. "ಇಚ್ಛಾದ್ವೇಷಾದಿಗಳೂ ಕೂಡ ಜ್ಞಾನಕ್ಕೆ ವಿಷಯವಾಗಿ ಜ್ಞಾನಕ್ಕೆ ಗೋಚರವಾಗುವುದರಿಂದ ಅವು "ಕೇವಲ ಜ್ಞಾನಸ್ವರೂಪನಾದ" ಕ್ಷೇತ್ರಜ್ಞನಿಗೆ, ಪುರುಷನಿಗೆ, ಆತ್ಮನಿಗೆ ಅಥವ ಬ್ರಹ್ಮನಿಗೆ ಸೇರಿದ್ದಲ್ಲ; ಅವು ಸಂಪೂರ್ಣವಾಗಿ ಕ್ಷೇತ್ರದ ವಿಕಾರಗಳೇ ಆಗಿವೆ. ಅಗ್ನಿಯ ಸಾನ್ನಿಧ್ಯದಿಂದ ಕಬ್ಬಿಣವೂ ಕೂಡ ಜ್ಯೋತಿಸ್ಸನ್ನು ಪಡೆಯುವ ಹಾಗೆ ಆತನ ಸಾನ್ನಿಧ್ಯದಿಂದ ಅಂತಃಕರಣವೆಂಬ ಕ್ಷೇತ್ರದಲ್ಲಿ ಈ ಚಿತ್ತವಿಕಾರ ಗಳು ಮತ್ತು ಅವುಗಳ ಅನುಭವಗಳೂ ಉಂಟಾಗುತ್ತವೆ. ಇದು ವೇದಾಂತಿಗಳಲ್ಲಿ ಒಂದು ಅಭಿಪ್ರಾಯ "ಇಚ್ಛಾದ್ವೇಷಾದಿ" ವಿಕಾರಗಳಲ್ಲಿ ಎರಡು ಭಾಗಗಳಿವೆ:—1. ಸೂಕ್ಷ್ಮವಾದ ಅಂತಃಕರಣದಲ್ಲಿ ಉಂಟಾಗುವ ಜ್ಞಾನಾಶ್ರಯವಾದ ಅಲೆಗಳು ಅಥವ

ಚಿತ್ತವೃತ್ತಿಗಳು ಮತ್ತು 2. ಜ್ಞಾನದ ಅಲೆಗಳಿಂದ ಅಥವ ಚಿತ್ತವೃತ್ತಿಗಳಿಂದ ಉಂಟಾಗುವ ಜ್ಞಾನದ ಅನುಭವಗಳು. ಈ ಚಿತ್ತವೃತ್ತಿಗಳ ಅಥವ ಜ್ಞಾನದ ಅಲೆಗಳ ಭಾಗವು ಅಂತಃಕರಣವೆಂಬ ಕ್ಷೇತ್ರಕ್ಕೆ ಸೇರಿವೆ ; ಅವುಗಳಿಂದ ಉಂಟಾಗುವ ಜ್ಞಾನದ **ಅನುಭವಗಳು ಮಾತ್ರ** ಕ್ಷೇತ್ರಜ್ಞನಿಗೆ ಅಥವ ಜೀವಾತ್ಮನಿಗೆ ಸೇರಿವೆ. ಏಕೆಂದರೆ ಮೃತಶರೀರದಲ್ಲಿ ಹಸಿವು ಮತ್ತು ಊಟಮಾಡುವ ತೃಪ್ತಿಯು ಉಂಟಾಗುವುದಿಲ್ಲ ; ಆದುದರಿಂದ ಹಸಿವು ಮತ್ತು ಊಟದ ತೃಪ್ತಿ ಎಂಬ ಅನುಭವಗಳು ಆತ್ಮನಿಗೆ ಸೇರಬೇಕು ; ಶರೀರಕ್ಕೆ ಎಂದು ಹೇಳಬೇಕಾಗುತ್ತದೆ. ಅಲ್ಲಿ ಯೋಗಿಯು ಸಮಾಧಿವೇಳೆಯಲ್ಲಿ ಕೇವಲ ಆತ್ಮಜ್ಞಾನವನ್ನು ಪಡೆದಿರುವಾಗ ಮಾತ್ರ ಹಸಿವಿನ ಅನುಭವವನ್ನೂ ಊಟದ ತೃಪ್ತಿಯನ್ನೂ ಪಡೆದು ಇರುವುದಿಲ್ಲ ; ಆದುದರಿಂದ ಹಸಿವು ಮತ್ತು ಊಟದ ತೃಪ್ತಿ ಎಂಬ ಅನುಭವಗಳು ಶರೀರಕ್ಕೆ ಸೇರಿರಬೇಕು ; ಆತ್ಮನಿಗೆ ಅಲ್ಲ ಎಂದು ಹೇಳಬೇಕಾಗುತ್ತದೆ. ಹೀಗಿರುವುದರಿಂದ ತೀರ್ಮಾನವೇನು ? ಹಸಿವು, ಊಟದ ತೃಪ್ತಿ ಮೊದಲಾದ ಎಲ್ಲಾ ಚಿತ್ತವೃತ್ತಿಗಳೂ ಮತ್ತು ಅನುಭವಗಳೂ ಕ್ಷೇತ್ರ ಮತ್ತು ಕ್ಷೇತ್ರಜ್ಞ ಇವೆರಡರ ಸಂಯೋಗವು ಉಂಟಾಗಿರುವ ಕಾಲದಲ್ಲಿ ಮಾತ್ರ ಪ್ರಾಣಿಗಳು ಮತ್ತು ಮನುಷ್ಯರಲ್ಲಿ ಕಂಡುಬರುತ್ತವೆ. ಆಗ ಈ ಚಿತ್ತವೃತ್ತಿಗಳು ಅಥವ ಜ್ಞಾನದ ಅಲೆಗಳು ಕ್ಷೇತ್ರವಾದ ಅಂತಃಕರಣದಲ್ಲಿ ಇವೆ; ಅವುಗಳಿಂದ ಉಂಟಾಗುವ ಜ್ಞಾನಾನುಭವವು ಕ್ಷೇತ್ರಜ್ಞನಲ್ಲಿ ಅಥವ ವೈಯಕ್ತಿಕ ಜೀವಾತ್ಮನಲ್ಲಿ ಸೇರುತ್ತವೆ. ಇದು ವೇದಾಂತಿಗಳಲ್ಲಿ ಎರಡನೆಯ ಅಭಿಪ್ರಾಯ. ಇವರ ವಾದವು ಹೀಗಿದೆ. ಮೃತಶರೀರದಲ್ಲಿ ಹಸಿವು ಮತ್ತು ಊಟಮಾಡುವ ತೃಪ್ತಿಯುಂಟಾಗುವುದಿಲ್ಲ ; ಆದುದರಿಂದ ಹಸಿವು ಮತ್ತು ಊಟದ ತೃಪ್ತಿ ಎಂಬ ಅನುಭವಗಳು ಆತ್ಮನಿಗೆ ಸೇರಬೇಕು ಎಂದು ಹೇಳಬೇಕಾಗುತ್ತದೆ. ಈ ಶರೀರಕ್ಕೆ ಅಲ್ಲ. ಯೋಗಿಯು ಸಮಾಧಿವೇಳೆಯಲ್ಲಿ ಕೇವಲ ಆತ್ಮಜ್ಞಾನವನ್ನು ಪಡೆದಿರುವಾಗ ಮಾತ್ರ ಹಸಿವಿನ ಅನುಭವವನ್ನೂ ಊಟದ ತೃಪ್ತಿಯನ್ನೂ ಪಡೆದು ಇರುವುದಿಲ್ಲ. ಆದುದರಿಂದ ಹಸಿವು ಮತ್ತು ಊಟದ ತೃಪ್ತಿಯ ಅನುಭವಗಳು ಶರೀರಕ್ಕೆ ಸೇರಬೇಕು ಎಂದು ಹೇಳಬೇಕಾಗುತ್ತದೆ, ಆತ್ಮನಿಗೆ ಅಲ್ಲ. ಹೀಗಿರುವುದರಿಂದ ತೀರ್ಮಾನವೇನು ? ಹಸಿವು, ಊಟದ ತೃಪ್ತಿ ಮೊದಲಾದ ಎಲ್ಲಾ ಚಿತ್ತವೃತ್ತಿಗಳೂ ಮತ್ತು ಅನುಭವಗಳೂ ಕ್ಷೇತ್ರ ಮತ್ತು ಕ್ಷೇತ್ರಜ್ಞ ಇವೆರಡರ ಸಂಯೋಗ ಉಂಟಾಗಿರುವ ಜೀವಿತಕಾಲದಲ್ಲಿ ಮಾತ್ರ ಪ್ರಾಣಿಗಳಲ್ಲಿಯೂ ಮತ್ತು ಮನುಷ್ಯನಲ್ಲಿಯೂ ಕಂಡುಬರುತ್ತವೆ; ಈ ಚಿತ್ತವೃತ್ತಿಗಳು ಅಥವ ಜ್ಞಾನದ ಅಲೆಗಳು ಕೇವಲ ಆತ್ಮನಲ್ಲಿಯೂ ಇಲ್ಲ ಮತ್ತು ಕೇವಲ ಶರೀರದಲ್ಲಿಯೂ ಇಲ್ಲ. ಆತ್ಮನು ದೇಹಧಾರಿಯಾಗಿ ಪ್ರಾಣಿಯಾಗಿರುವಾಗ ಮಾತ್ರ, ಈ ಚಿತ್ತವೃತ್ತಿಗಳು ಅಥವ ಜ್ಞಾನದ ಅಲೆಗಳು ಕ್ಷೇತ್ರವಾದ ಅಂತಃಕರಣದಲ್ಲಿ ಇವೆ, ಅವುಗಳಿಂದ ಉಂಟಾಗುವ ಜ್ಞಾನಾನುಭವವು ಕ್ಷೇತ್ರಜ್ಞನನ್ನು ಅಥವ ವೈಯಕ್ತಿಕ ಜೀವಾತ್ಮನಲ್ಲಿ ಸೇರುತ್ತವೆ.

# ಭಗವದ್ಗೀತಾ ಅಧ್ಯಾಯ ೧೩. ಪಾಠ ೩

## ಜ್ಞಾನವೂ ಮತ್ತು ಅಜಾನ್ಞವೂ :(ಶ್ಲೋಕಗಳು ೭ ರಿಂದ ೧೧)

ಅಮಾನಿತ್ವ ಮದಂಭಿತ್ವ ಮಹಿಂಸಾ ಕ್ಷಾಂತಿರಾರ್ಜವಂ |
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯ ಮಾತ್ಮವಿನಿಗ್ರಹಃ
॥ ೭ ॥

(ಏತತ್ ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋ(ಽ) ನ್ಯಥಾ—೧೧)

**ಅರ್ಥ** :—ಅಮಾನಿತ್ವವು, ಅದಂಭಿತ್ವವು, ಅಹಿಂಸೆಯು, ಕ್ಷಾಂತಿಯು, ಆರ್ಜವವು, ಆಚಾರೋಪಾಸನವು, ಶೌಚವು, ಸ್ಥೈರ್ಯವು, ಆತ್ಮವಿನಿಗ್ರಹವು ಇವೆಲ್ಲವೂ ಜ್ಞಾನವೆಂದು ಹೇಳಲ್ಪಟ್ಟಿದೆ ; ಇವುಗಳಿಗೆ ವಿರೋಧವಾದುವುಗಳು ಅಜ್ಞಾನ ಎಂದು ಹೇಳಲ್ಪಟ್ಟಿದೆ.

ಇಂದ್ರಿಯಾರ್ಥೇಷು ವೈರಾಗ್ಯ ಮನಹಂಕಾರ ಏವ ಚ |
ಜನ್ಮ ಮೃತ್ಯುಜರಾ ವ್ಯಾಧಿದುಃಖ ದೋಷಾನು ದರ್ಶನಂ
॥ ೮ ॥

(ಏತತ್ ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋ(ಽ) ನ್ಯಥಾ—೧೧).

**ಅರ್ಥ** :—ಇಂದ್ರಿಯಾರ್ಥಗಳಲ್ಲಿ ವೈರಾಗ್ಯವು, ಅಹಂಕಾರವಿಲ್ಲದಿರುವುದು, ಜನ್ಮ ಮೃತ್ಯು ಜರೆ ವ್ಯಾಧಿ ದುಃಖ ಎಂಬ ದೋಷಗಳನ್ನು ಸ್ಮರಿಸುತ್ತಿರುವುದು ಇವೆಲ್ಲವೂ ಜ್ಞಾನವೆಂದು ಹೇಳಲ್ಪಟ್ಟಿದೆ ; ಇವುಗಳಿಗೆ ವಿರೋಧವಾದುವುಗಳು ಅಜ್ಞಾನ ಎಂದು ಹೇಳಲ್ಪಟ್ಟಿದೆ.

ಅಸಕ್ತಿರನಭಿಷ್ವಂಗಃ ಪುತ್ರದಾರ ಗೃಹಾದಿಷು |
ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ||೯||
(ಏತತ್ ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋ(ಽ)ನ್ಯಥಾ).

**ಅರ್ಥ :**—ಸಂಗವಿಲ್ಲದಿರುವುದು, ಪುತ್ರ ಹೆಂಡತಿ ಮನೆ ಮೊದಲಾದವುಗಳಲ್ಲಿ ಅಭಿಮಾನವಿಲ್ಲದಿರುವುದು, ಇಷ್ಟಗಳೂ ಅನಿಷ್ಟಗಳೂ ಸಂಭವಿಸುವಾಗ ಯಾವಾಗಲೂ ಒಂದೇ ಸಮನಾದ ಚಿತ್ತವಿರುವುದು ಇವೆಲ್ಲವೂ ಜ್ಞಾನವೆಂದು ಹೇಳಲ್ಪಟ್ಟಿದೆ ; ಇವುಗಳಿಗೆ ವಿರೋಧವಾದವುಗಳು ಅಜ್ಞಾನ ಎಂದು ಹೇಳಲ್ಪಟ್ಟಿದೆ.

ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ |
ವಿವಿಕ್ತದೇಶ ಸೇವಿತ್ವಮರತಿರ್ಜನ ಸಂಸದಿ ||೧೦||
(ಏತತ್ ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋ(ಽ)ನ್ಯಥಾ)

**ಅರ್ಥ :**—ಇತರ ಸಂಬಂಧವಿಲ್ಲದ ನನ್ನಲ್ಲಿ ಮಾತ್ರ ವ್ಯಭಿಚಾರವಿಲ್ಲದ ಭಕ್ತಿಯು, ಏಕಾಂತ ಅಥವ ವಿವಿಕ್ತ ಸ್ಥಳಗಳಿಗೆ ಹೋಗುವುದು, ಜನಸಮೂಹದಲ್ಲಿ ಇರಬೇಕೆಂದು ಆಸೆಪಡದಿರುವುದು ಇವೆಲ್ಲವೂ ಜ್ಞಾನವೆಂದು ಹೇಳಲ್ಪಟ್ಟಿದೆ; ಇವುಗಳಿಗೆ ವಿರೋಧವಾದವುಗಳು ಅಜ್ಞಾನ ಎಂದು ಹೇಳಲ್ಪಟ್ಟಿದೆ.

ಅಧ್ಯಾತ್ಮ ಜ್ಞಾನ ನಿತ್ಯತ್ವಂ ತತ್ವಜ್ಞಾನಾರ್ಥದರ್ಶನಂ |
ಏತತ್ ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋ(ಽ)ನ್ಯಥಾ ||೧೧||

**ಅರ್ಥ .**—ಆತ್ಮಜ್ಞಾನದಲ್ಲಿ ಮನಸ್ಸನ್ನು ನಿಲ್ಲಿಸುವುದು, ತತ್ವಜ್ಞಾನಾರ್ಥದರ್ಶನವು ಇವು ಜ್ಞಾನವೆಂದು ಹೇಳಲ್ಪಟ್ಟಿದೆ ; ಇವುಗಳಿಗೆ ವಿರೋಧವಾದುವುಗಳು ಅಜ್ಞಾನವೆಂದು ಹೇಳಲ್ಪಟ್ಟಿದೆ.

**ಜ್ಞಾನಾಭ್ಯಾಸಗಳ (ಜ್ಞಾನದ) ಮತ್ತು ಅಜ್ಞಾನ ಅಭ್ಯಾಸಗಳ (ಅಜ್ಞಾನದ) ವಿವರಣೆ.**

ಈ ಅಧ್ಯಾಯದ ಐದು ಮತ್ತು ಆರನೆಯ ಶ್ಲೋಕಗಳಲ್ಲಿ ಕ್ಷೇತ್ರದ ಸ್ವರೂಪವನ್ನೂ ಮತ್ತು ಕ್ಷೇತ್ರದ ವಿಕಾರಗಳ ಸ್ವರೂಪಗಳನ್ನೂ ತಿಳಿದೆವು. ಕ್ಷೇತ್ರದ ವಿಕಾರಗಳಾದ ಚಿತ್ತವಿಕಾರಗಳಲ್ಲಿ ಕೆಲವನ್ನು "ಜ್ಞಾನ" ಎಂದೂ ಮತ್ತು ಅವುಗಳಿಗೆ ವಿರೋಧವಾದುವುಗಳನ್ನು "ಅಜ್ಞಾನ" ಎಂದೂ ಮೇಲಿನ ಶ್ಲೋಕಗಳಲ್ಲಿ ಕರೆದಿದೆ. ಇಲ್ಲಿ "ಜ್ಞಾನ" ಎಂದರೆ ಆತ್ಮಜ್ಞಾನ ಸಾಧನಗಳು ಎಂದು ಅರ್ಥ ; "ಅಜ್ಞಾನ" ಎಂದರೆ ಆತ್ಮಜ್ಞಾನವನ್ನು ನಾಶಮಾಡುವ ಅಭ್ಯಾಸಗಳು ಎಂದು ಅರ್ಥ. "ಅಜ್ಞಾನ" ಎಂಬ ತಾಮಸಿಕ ಮತ್ತು ರಾಜಸೀಕ ಅಭ್ಯಾಸಗಳು ಶರೀರಾದಿಗಳ ಅಭಿಮಾನದಿಂದ ಉಂಟಾಗಿ ಆತ್ಮನನ್ನು ಸಂಸಾರದ ಜೈಲಿನಲ್ಲಿ ಹೆಚ್ಚು ಹೆಚ್ಚಾಗಿ ಬಂಧಿಸುತ್ತವೆ. "ಜ್ಞಾನ" ವೆಂಬ ಸಾತ್ವಿಕ ಅಭ್ಯಾಸಗಳು ಶರೀರ ಸಂಬಂಧದಿಂದ ಕೂಡಿದ್ದಾಗ್ಯೂ ಅವು ಆತ್ಮದ ಪ್ರೇರಣೆಯಿಂದ ಉಂಟಾಗಿ ಸಂಸಾರಬಂಧವನ್ನು ಕತ್ತರಿಸುತ್ತಾ ಆತ್ಮಸಾಕ್ಷಾತ್ಕಾರವನ್ನೂ, ಭಗವಂತನ ಸಾಕ್ಷಾತ್ಕಾರವನ್ನೂ, ಬ್ರಹ್ಮಸಾಕ್ಷಾತ್ಕಾರವನ್ನೂ ಉಂಟುಮಾಡುವ ಜ್ಞಾನವನ್ನು ಕ್ರಮೇಣ ವೃದ್ಧಿಪಡಿಸುತ್ತವೆ. ಆದರೆ ಈ ಸಾತ್ವಿಕವಾದ ಕ್ಷೇತ್ರವಿಕಾರಗಳೂ ಕೂಡ ಬದ್ಧದೆಸೆಯಲ್ಲಿರುವ ಆತ್ಮನಿಗೆ ಸೇರಿದ್ದೇ ವಿನಹ ಮುಕ್ತಆತ್ಮನ ಅಥವ ಶುದ್ಧಆತ್ಮನ ಪ್ರವೃತ್ತಿಗಳಲ್ಲವೆಂಬುದನ್ನು ಮರೆಯಕೂಡದು. ಶುದ್ಧಾತ್ಮನ ನಿಜಸ್ವರೂಪವು ಜ್ಞಾನಾನಂದಮಯತ್ವವು ಮತ್ತು ನಿತ್ಯತ್ವವು; ಇವುಗಳಲ್ಲದ ಚಿತ್ತಪ್ರವೃತ್ತಿಗಳೆಲ್ಲವೂ ಆತ್ಮನ ಬದ್ಧದೆಶೆಗೆ ಸೇರಿದ್ದು. ಕ್ಷೇತ್ರದ ವಿಕಾರಗಳು ಒಳ್ಳೆಯವುಗಳಾಗಲೀ ಅಥವ ಕೆಟ್ಟವುಗಳಾಗಲೀ ಎಲ್ಲವೂ ಸಂಸಾರದೆಸೆಯಲ್ಲಿ ಇರತಕ್ಕಂಥಾವುಗಳು ; ಅಂದರೆ ಆತ್ಮನಿಗೆ ಶರೀರ ಸಂಬಂಧವಿರುವಾಗಲೇ ಉಂಟಾಗತಕ್ಕವುಗಳು.

ಕ್ಷೇತ್ರದ ಈ ಸಾತ್ವಿಕ ಚಿತ್ತವೃತ್ತಿಗಳನ್ನು ಅಥವ ಪ್ರವೃತ್ತಿಗಳನ್ನು ಶ್ರೀಕೃಷ್ಣನು ಇಲ್ಲಿ "ಜ್ಞಾನ" ಎಂದು ಕರೆದಿರುವನು ಮತ್ತು ಇವುಗಳಿಗೆ ವಿರೋಧವಾದ ವೃತ್ತಿಗಳನ್ನು ಅಥವ ಪ್ರವೃತ್ತಿಗಳನ್ನು ಅಜ್ಞಾನ ಎಂದು ಕರೆದಿರುವನು. ಇಲ್ಲಿ 'ಜ್ಞಾನ' ಎಂದರೆ ಬರಿಯ ತಿಳುವಳಿಕೆ ಎಂದು ಅರ್ಥವಲ್ಲ. 'ಜ್ಞಾನ' ಎಂದರೆ ಆತ್ಮಸಾಕ್ಷಾತ್ಕಾರವನ್ನೂ ಭಗವಂತನ ಸಾಕ್ಷಾತ್ಕಾರವನ್ನೂ ಉಂಟುಮಾಡತಕ್ಕ ನೈತಿಕ ಅಭ್ಯಾಸಗಳು ಮತ್ತು ಯೋಗಸಾಧನೆಗಳು. ಇವುಗಳನ್ನು ಜ್ಞಾನಿಯು ತನ್ನ ದಿನಚರಿಯಲ್ಲಿ ಅಭ್ಯಾಸಮಾಡಬೇಕು. ಕ್ಷೇತ್ರವೇನು, ಕ್ಷೇತ್ರಜ್ಞನೇನು ಇವುಗಳ ಸ್ವರೂಪದ ಅರಿವಿನ ಆಧಾರದಿಂದ ಅಂದರೆ ವಿವೇಕದಿಂದ ದಿನಚರಿಯಲ್ಲಿ ಅನುಷ್ಠಿಸಬೇಕಾದ ಉತ್ತಮ ಅಭ್ಯಾಸಗಳೇ ಜ್ಞಾನವು. ಕ್ಷೇತ್ರದ ಸ್ವರೂಪವನ್ನು ತಿಳಿಸಿದ ಒಡನೆಯೇ ಶ್ರೀಕೃಷ್ಣನು ಜ್ಞಾನದ ಸ್ವರೂಪವನ್ನು ವಿಶದವಾಗಿ ತಿಳಿಸುತ್ತಾನೆ; ಏಕೆಂದರೆ ಅವುಗಳೂ ಕೂಡ ಸಂಸಾರದೆಶೆಯಲ್ಲಿರುವ ಕ್ಷೇತ್ರಜ್ಞನಿಗೆ ಸಂಬಂಧಪಟ್ಟ ಕ್ಷೇತ್ರದ ವಿಕಾರಗಳು. ಕೆಳಗೆ ವಿವರಿಸಿರುವ ಇಪ್ಪತ್ತು ಜ್ಞಾನಗಳು ಅಥವ ಜ್ಞಾನಾಭ್ಯಾಸಗಳು ಮನುಷ್ಯನನ್ನು ಸಂಸಾರಬಂಧನದಿಂದ ಬಿಡುಗಡೆಮಾಡಿ ಅವನನ್ನು ಕಾಪಾಡತಕ್ಕವುಗಳು ಮತ್ತು ಅವನಿಗೆ ಆತ್ಮ-ಪರಮಾತ್ಮ ಸಾಕ್ಷಾತ್ಕಾರವನ್ನು ಉಂಟುಮಾಡತಕ್ಕವುಗಳು.

Re-printed from Mysore Vysya Patrika
(December 1958)

M. V. P. Press, Mysore.

# ಭಗವದ್ಗೀತಾ ಅಧ್ಯಾಯ ೧೩. ಪಾಠ ೩

ಕ್ಷೇತ್ರ–ಕ್ಷೇತ್ರಜ್ಞರ ಸ್ವರೂಪಗಳನ್ನು ತಿಳಿಯದೆ, ಕ್ಷೇತ್ರವನ್ನೂ ಮತ್ತು ಅದರ ವಿಕಾರಗಳನ್ನೂ ಕ್ಷೇತ್ರಜ್ಞನೆಂದು ತಿಳಿದು ಮನುಷ್ಯರು ಮಾಡುತ್ತಿರುವ ಸ್ವಾರ್ಥತೆಯಿಂದ ಕೂಡಿದ ತಾಮಸಿಕ ಮತ್ತು ರಾಜಸಿಕ ಪ್ರವೃತ್ತಿಗಳು ಅಥವ ಅಭ್ಯಾಸಗಳೇ “ಅಜ್ಞಾನವು”. ಇನ್ನು ಈ ಇಪ್ಪತ್ತು ಜ್ಞಾನಾಭ್ಯಾಸಗಳನ್ನು ಮತ್ತು ಅಜ್ಞಾನಾಭ್ಯಾಸಗಳು ಹೇಗೆ ಇವುಗಳಿಗೆ ವಿರೋಧವಾಗಿವೆ ಎಂಬುದನ್ನು ವಿಶದವಾಗಿ ಸ್ಪಷ್ಟಪಡಿಸುತ್ತೇವೆ.

### 1. “ಅಮಾನಿತ್ವಮ್” ಅಂದರೇನು ?

ಸಾಧಾರಣ ಮನುಷ್ಯನು ತನಗೆ ಶರೀರದಲ್ಲಿ ಬಲವಿದ್ದರೆ, ಯೌವನದ ಸೌಂದರ್ಯವಿದ್ದರೆ, ಐಶ್ವರ್ಯವು ಇದ್ದರೆ, ಅಧಿಕಾರವಿದ್ದರೆ ಅಥವ ವಿದ್ಯೆ ಇದ್ದರೆ ತನ್ನ ನಿಜವಾದ ಯೋಗ್ಯತೆಯನ್ನು ತಿಳಿಯದೆ ಅದಕ್ಕೆ ಹೆಚ್ಚು ಬೆಲೆಯನ್ನು ಕೊಡುತ್ತಾ ಗರ್ವದಿಂದ ತನ್ನನ್ನು ತಾನೇ ಶ್ಲಾಘಿಸಿಕೊಳ್ಳುವನು. ಇಷ್ಟೇ ಅಲ್ಲ ; ತನಗಿಂತಲೂ ಉತ್ತಮವಾದ ದೈವಿಕ ಯೋಗ್ಯತೆಯನ್ನು ಪಡೆದಿರುವ ಮಹಾ ಪುರುಷರನ್ನೂ ಕೂಡ ಅಲಕ್ಷ್ಯ ಮಾಡುತ್ತಾನೆ, ಅಗೌರವದಿಂದ ಕಾಣುತ್ತಾನೆ ಮತ್ತು ಅವರನ್ನು ಕುರಿತು ಅವಮಾನ ಮಾಡುವ ಮಾತುಗಳನ್ನು ಆಡುತ್ತಾನೆ. ಈ ಅಜ್ಞಾನ ಪೂರ್ವಕವಾದ ಕೆಟ್ಟ ಅಭ್ಯಾಸವನ್ನೇ “ಮಾನಿತ್ವ” ಎಂದು ಕರೆಯುತ್ತಾರೆ. ಆದರೆ ಜ್ಞಾನಿಯು ಮಾತ್ರ ಹೀಗೆ ಮಾಡುವುದಿಲ್ಲ. ಅವನು ತನ್ನನ್ನು ತಾನೇ ಮೆಚ್ಚುವುದಿಲ್ಲ ; ತನ್ನನ್ನು ತಾನೇ ಶ್ಲಾಘಿಸಿ ಕೊಳ್ಳುವುದಿಲ್ಲ ಮತ್ತು ತನಗಿಂತ ಹೆಚ್ಚಾದ ಯೋಗ್ಯತೆಯನ್ನು ಪಡೆದಿರುವವರಲ್ಲಿ ನಮ್ರತೆಯನ್ನು ತೋರಿಸುವನು. ಅವನಲ್ಲಿ ಹೆಮ್ಮೆ ಅಥವ ಗರ್ವ ಕಂಡುಬರುವುದಿಲ್ಲ ; ಅದಕ್ಕೆ ಬದಲಾಗಿ ಅವನು ದೊಡ್ಡವರಲ್ಲಿ ವಿನಯದಿಂದ, ನಮ್ರತೆಯಿಂದ ನಡೆದು ಕೊಳ್ಳುತ್ತಾನೆ ; ಅವರನ್ನು ಗೌರವದಿಂದ ಕಾಣುತ್ತಾನೆ. ಈ ವಿಧವಾದ ಜ್ಞಾನಿಯ ಸದ್ಗುಣವೇ “ಅಮಾನಿತ್ವವು”

### 2. “ಅದಂಭಿತ್ವಂ” ಎಂದರೇನು ?

ಸ್ವಪ್ರತಿಷ್ಠೆಯಿಂದ ಮನುಷ್ಯನು ಕೆಲಸಗಳನ್ನು ಮಾಡಿದರೆ ಅದು “ದಂಭಿತ್ವವು” ಅದು ಅಜ್ಞಾನ ; ಏಕೆಂದರೆ, ಅಂಥಾ ಮನುಷ್ಯರು ಸಾಧಾರಣವಾಗಿ ಅಧರ್ಮವಾದ ಕೆಲಸಗಳನ್ನೇ ಮಾಡುತ್ತಾರೆ ಮತ್ತು ಒಂದು ವೇಳೆ ಧರ್ಮ ಕೆಲಸಗಳನ್ನು ಮಾಡಿದಾಗ್ಯೂ ಕೂಡ, ಅವರಿಗೆ ಆ ಧರ್ಮ ಕೆಲಸಗಳ ಮೇಲೆ ಆಸಕ್ತಿ ಇರುವುದಿಲ್ಲ; ಅವರಿಗೆ ತಮ್ಮ ಆತ್ಮಶ್ಲಾಘನೆಯಲ್ಲೇ ಗಮನವಿರುತ್ತದೆ. ಜ್ಞಾನಿಯು ಮಾತ್ರ ಹಾಗಿಲ್ಲದೆ ಯಾವ ಪ್ರತಿಷ್ಠೆಯೂ ಇಲ್ಲದೆ ಯಾವಾಗಲೂ ಧರ್ಮ ಕೆಲಸಗಳನ್ನೇ ಮಾಡುತ್ತಿರುತ್ತಾನೆ. ಅವನು ತನ್ನ ಧರ್ಮವನ್ನು ಪ್ರಕಟಿಸಿಕೊಳ್ಳದೆ, ನಟನೆ ಮಾಡದೆ, ಗರ್ವವಿಲ್ಲದೆ ಆಡಂಬರವಿಲ್ಲದೆ, ಡಾಂಭಿಕ ಪ್ರದರ್ಶನವಿಲ್ಲದೆ, ತನ್ನ ಮಹತ್ವವನ್ನು ಇತರರಿಗೆ ತೋರಿಸದೆ ತಾನು ಮಾಡಬೇಕಾದ ಕರ್ತವ್ಯ ಕರ್ಮಗಳನ್ನು ಆಚರಿಸುವನು. ಈ ವಿಧವಾದ ಜ್ಞಾನಿಯ ಸದ್ಗುಣವೇ “ಅದಂಭಿತ್ವಂ” ಎಂಬ ಜ್ಞಾನಾಭ್ಯಾಸ.

### 3. “ಅಹಿಂಸೆ” ಎಂದರೇನು ?

ಅಜ್ಞಾನಿಯಾದ ಮನುಷ್ಯನು ಕ್ರಿಮಿ ಕೀಟಗಳಿಗೆ ಹಿಂಸೆ ಮಾಡುವನು ; ಪ್ರಾಣಿಗಳಿಗೆ ತೊಂದರೆ ಕೊಡುವನು ; ಸಮಾಜದಲ್ಲಿರುವ ಇತರ ಮನುಷ್ಯರನ್ನು ಪೀಡಿಸುವನು. ಆದರೆ ಜ್ಞಾನಿಗೆ ಇತರರಿಗೆ ಕೆಡಕನ್ನು ಉಂಟುಮಾಡುವ ಪ್ರವೃತ್ತಿಯೇ ಇರುವುದಿಲ್ಲ. ಅವನು ಯಾರಿಗೂ ಅಪಾಯವನ್ನು ತರುವ ಕಾರ್ಯ ಮಾಡುವುದಿಲ್ಲ. ನೆರೆ ಹೊರೆಯವರಿಗೆ ನಷ್ಟವನ್ನು ಉಂಟು ಮಾಡುವುದಿಲ್ಲ ಮತ್ತು ಇತರರ ಮೇಲೆ ಬಲಪ್ರಯೋಗ ಮಾಡುವುದಿಲ್ಲ. ಅವನ ಮನಸ್ಸಿನಲ್ಲಿ ಇತರರಿಗೆ ಕೆಡಕನ್ನು ಮಾಡಬೇಕೆಂಬ ಆಲೋಚನೆಗಳೇ ಹುಟ್ಟುವುದಿಲ್ಲ. ಆದುದರಿಂದ ಹಿಂಸೆಯು ಅಜ್ಞಾನ ; ಅಹಿಂಸೆ ಜ್ಞಾನ.

### 4. “ಕ್ಷಾಂತಿ” ಎಂದರೇನು ?

ಇತರರು ನಮಗೆ ಹಿಂಸೆ ಮಾಡಿದರೆ ನಮಗೆ ಕೋಪ ಬಂದು ಅದಕ್ಕೆ ಪ್ರತಿಯಾಗಿ ನಾವು ಅವರಿಗೆ ಕೆಡಕನ್ನೂ, ಹಿಂಸೆಯನ್ನೂ ಮಾಡಲೇಬೇಕೆನ್ನಿಸುತ್ತದೆ; ಇದು ಅಜ್ಞಾನ. ಆದರೆ ಜ್ಞಾನಿಯು ಮಾತ್ರ ಇತರರು ತನಗೆ ಹಿಂಸೆಯನ್ನು ಮಾಡಿದರೂ ತನ್ನ ಮನಸ್ಸಿನಲ್ಲಿ ಯಾವ ವಿಕಾರವನ್ನೂ ಪಡೆಯುವುದಿಲ್ಲ. ಇತರರ ಹಿಂಸೆಯನ್ನೆಲ್ಲಾ ಸಹಿಸಿಕೊಂಡು, ಅವರಲ್ಲಿ ಹಗೆತನ ಅಥವ

ವೈರವನ್ನೂ ತೋರಿಸದೆ, ಸಹನೆಯಿಂದ ಕೂಡಿದವನಾಗಿ ಅವರೊಡನೆ ತಾಳ್ಮೆಯಿಂದ ವರ್ತಿಸುವನು. ಇಷ್ಟೇ ಅಲ್ಲ ; ಅವರನ್ನು ಕ್ಷಮಿಸುತ್ತಾನೆ ಮತ್ತು ತನ್ನ ಆತ್ಮಗುಣದಿಂದ ಅವರನ್ನು ಸನ್ಮಾರ್ಗಕ್ಕೆ ತರುತ್ತಾನೆ. ಈ ಜ್ಞಾನಾಭ್ಯಾಸವೇ " ಕ್ಷಾಂತಿ " ಇದು ಜ್ಞಾನ. ಈ ಸದ್ಗುಣವು ಕರಗತವಾಗಬೇಕಾದರೆ ಮನುಷ್ಯನು ತಾಳ್ಮೆಯಿಂದ ಕಷ್ಟಗಳನ್ನು ಸಹಿಸಿಕೊಳುವ ಅಭ್ಯಾಸ ಮಾಡಬೇಕು.

### 5. " ಆರ್ಜವಂ " ಎಂದರೇನು ?

ಮನಸ್ಸಿನಲ್ಲಿ ಒಂದು ಅಭಿಪ್ರಾಯವನ್ನು ಇಟ್ಟುಕೊಂಡು, ಬಾಯಿನಲ್ಲಿ ಮತ್ತೊಂದು ಅಭಿಪ್ರಾಯವನ್ನು ಮಾತನಾಡಿ, ಇವೆರಡಕ್ಕೂ ವಿರೋಧವಾಗಿ ಕಾರ್ಯವನ್ನು ಮಾಡುವುದು " ಅಜ್ಞಾನ ". ಹಾಗಿಲ್ಲದೆ ಇತರರ ವಿಚಾರಗಳಲ್ಲಿ ಮನಸ್ಸು, ವಾಕ್ಕು ಮತ್ತು ಶರೀರಗಳ ಪ್ರವೃತ್ತಿಗಳು ಒಂದೇ ವಿಧವಾಗಿ ಇರುವುದು " ಆರ್ಜವ ", ಜ್ಞಾನಿಯಲ್ಲಿ ಕೊಂಕುನಡತೆ ಇಲ್ಲ ; ಅವನು ಕಾಯಾವಾಚಾ ಮನಸ್ಸುಗಳಲ್ಲಿ ಸನ್ಮಾರ್ಗದಲ್ಲಿ ಪ್ರವರ್ತಿಸಿ ಒಂದೇ ವಿಧವಾಗಿ ಇರುವನು. ಅವನು ಸತ್ಯವಾದಿಯಾಗಿದ್ದು, ಕಾರ್ಯದಲ್ಲಿ ಋಜುತ್ವವನ್ನು ತೋರಿಸಿ, ಮನಸ್ಸಿನಲ್ಲಿ ಪ್ರಾಮಾಣಿಕತೆಯನ್ನು ತೋರಿಸುವನು. ಅವನಲ್ಲಿ ಇತರರಿಗೆ ಮೋಸ ಮಾಡಬೇಕೆಂಬ ಆಲೋಚನೆಗಳೇ ಹುಟ್ಟುವುದಿಲ್ಲ. ಆದುದರಿಂದ " ಆರ್ಜವವು " ಜ್ಞಾನ.

### 6. " ಆಚಾರ್ಯೋಪಾಸನಂ " ಎಂದರೇನು ?

ಅಜ್ಞಾನಿಗೆ ವಿದ್ಯೆಯನ್ನು ಕಲಿಯುವುದರಲ್ಲಿ ರುಚಿ ಇರುವುದಿಲ್ಲ ; ಆದುದರಿಂದ ಅವನು ತನ್ನ ಉಪಾಧ್ಯಾಯರಿಗೆ ಗೌರವವನ್ನು ತೋರಿಸುವುದಿಲ್ಲ ; ಇದು ಅಜ್ಞಾನ. ವಿದ್ಯೆಯನ್ನು ಕಲಿಯಬೇಕೆಂಬ ಆಶೆಯು ವಿವೇಕದ ಮೊದನೆಯ ಹಂತ ; ಅಂತಹ ವಿದ್ಯೆಯನ್ನು ಕಲಿಸುವವನು ಗುರು. ಆದುದರಿಂದ ಸದ್ವಿದ್ಯೆಯನ್ನು ಕಲಿಯಬೇಕೆಂಬ ಜ್ಞಾನಿಯು ತನ್ನ ಅಜ್ಞಾನವನ್ನು ಹೋಗಲಾಡಿಸುವ ಉಪಾಧ್ಯಾಯನಲ್ಲಿ, ಗುರುವಿನ ಹೆಚ್ಚಾದ ಗೌರವವನ್ನೂ ಭಕ್ತಿಯನ್ನೂ ತೋರಿಸುತ್ತಾನೆ. ಇಷ್ಟೇ ಅಲ್ಲ ; ತನಗೆ ಆತ್ಮಜ್ಞಾನವನ್ನು ಬೋಧಿಸುವ ಜ್ಞಾನಿಗಳಾದ ಗುರುಗಳನ್ನು ಅಥವ ಆಚಾರ್ಯರುಗಳನ್ನು ಕುರಿತು ನಮಸ್ಕಾರ ಮಾಡುತ್ತಾನೆ. ಪ್ರಶ್ನೆಮಾಡುತ್ತಾನೆ, ಸೇವೆಮಾಡುತ್ತಾನೆ, ಶುಶ್ರೂಷೆಮಾಡುತ್ತಾನೆ ಮತ್ತು ಪೂಜೆ ಮಾಡುತ್ತಾನೆ. ಇದರ ಪರಿಣಾಮವಾಗಿ ಗುರು ಶಿಷ್ಯರ ಮನಸ್ಸು, ಬುದ್ಧಿ ಮತ್ತು ಆತ್ಮ ಒಂದೇ ಆಗುತ್ತದೆ. ಈ ವಿಧವಾದ " ಆಚಾರ್ಯೋಪಾಸನವು " ಒಂದು ಜ್ಞಾನಾಭ್ಯಾಸ ಅಥವ ಜ್ಞಾನ.

### 7. " ಶೌಚಂ " ಎಂದರೇನು ?

ಬಹು ಮಂದಿ ತಮ್ಮ ಶರೀರ, ಬಟ್ಟೆ, ಮನೆ ಮತ್ತು ಅದರ ಸುತ್ತಮುತಲ ಪ್ರದೇಶಗಳನ್ನು ಶುಚಿಯಾಗಿ ಇಟ್ಟುಕೊಳ್ಳುವುದಿಲ್ಲ ಮತ್ತು ಅವರ ಮನಸ್ಸುಗಳಲ್ಲಿಯೂ ಕಲ್ಮಶಗಳು ಇರುವುವು ; ಇದು ಅಜ್ಞಾನ. ಆದರೆ ಜ್ಞಾನಿಯು ಶುದ್ಧನಾಗಿ, ನಿರ್ಮಲನಾಗಿ, ನಿಷ್ಕಳಂಕನಾಗಿರಬೇಕು ; ಏಕೆಂದರೆ, ಆತ್ಮಜ್ಞಾನಕ್ಕೆ ಮತ್ತು ಅದರ ಸಾಧನೆಗೆ ಶುಚಿಯಾದ ಪ್ರಕೃತಿ ಸನ್ನಿವೇಶ, ಶುಚಿಯಾದ ಶರೀರ, ಶುಚಿಯಾದ ವಾಕ್ಕೂ ಮತ್ತು ಶುಚಿಯಾದ ಮನಸ್ಸು ಇರಬೇಕಾದುದು ಅತ್ಯವಶ್ಯಕ. ಶೌಚವು ಬಾಹ್ಯಾಂತರ ಶುದ್ಧಿಯಿಂದ ಕೂಡಿರಬೇಕು. ಶರೀರದ ಮಲಗಳನ್ನು ಮಣ್ಣು, ಸೀಗೆಕಾಯಿಪುಡಿ, ಸೋಪು ; ನೀರು ಇವುಗಳಿಂದ ತೊಳೆಯುವುದು ಮತ್ತು ಬಟ್ಟೆಗಳು, ಪದಾರ್ಥಗಳು, ಮನೆಗಳು ಸುತ್ತಮುತ್ತಲ ಪ್ರದೇಶಗಳು ಇವುಗಳೆಲ್ಲವನ್ನು ಶುಚಿಯಾಗಿ ಇಟ್ಟುಕೊಳ್ಳುವುದು ಬಾಹ್ಯ ಶುದ್ಧಿ. ಮನಸ್ಸಿನೊಳಗಿರುವ ಕಾಮ ಕ್ರೋಧ ಲೋಭ ಮೋಹ ಮದಮಾತ್ಸರ್ಯ ಭಯ ಶೋಕ ಮೊದಲಾದ ರಾಜಸಿಕ ತಾಮಸಿಕ ಕೊಳೆಗಳನ್ನು ಅವುಗಳಿಗೆ ವಿರೋಧವಾದ ಸತ್ವಗುಣ ಮಾನಸಿಕ ಭಾವನೆಗಳಿಂದ ತೊಳೆದು ಶುಚಿಮಾಡುವುದೇ ಅಂತರ ಶುದ್ಧಿ ಅಥವ ಅಂತಃಕರಣದ ಶುದ್ಧಿ ಕೇವಲ ಪ್ರಾಕೃತಿಕ ಶುಚಿಯು ಮೊದಲನೆಯ ಹಂತ ; ಅದು ಅಂತಃಕರಣದ ಶುದ್ಧಿಯಲ್ಲಿ ಪರ್ಯವಸಾನವಾಗಬೇಕು. ಹೀಗೆ ಶರೀರದಲ್ಲಿ, ಕಾರ್ಯಗಳಲ್ಲಿ ಮಾತುಗಳಲ್ಲಿ ಮತ್ತು ಆಲೋಚನೆಗಳಲ್ಲಿ ಶುಚಿತ್ವವಿರುವುದೇ " ಜ್ಞಾನ "ವಾಗುತ್ತದೆ.

### 8. " ಆತ್ಮವಿನಿಗ್ರಹಃ " ಎಂದರೇನು ?

ಇಲ್ಲಿ ' ಆತ್ಮ ' ಎಂದರೆ ಮನಸ್ಸು ಎಂದು ಅರ್ಥ. ಬಹು ಮಂದಿ ಹುಟ್ಟಿದಂದಿನಿಂದ ಸಾಯುವವರೆಗೂ ಪ್ರಾಪಂಚಿಕವಾದ ವಿಚಾರಗಳನ್ನೇ ತಮ್ಮ ಮನಸ್ಸಿನಲ್ಲಿ ಆಲೋಚಿಸುತ್ತಿರುವರು ; ಏಕೆಂದರೆ ಅವರಿಗೆ ತಾವು ಶರೀರ ಮಾತ್ರ ಎಂಬುದೇ ನಂಬಿಕೆ ; ತಾವು ಜ್ಞಾನಸ್ವರೂಪನಾದ " ಆತ್ಮ " ಎಂಬ ಭಾವನೆಯೇ ಇಲ್ಲ. ಇದು ಅಜ್ಞಾನ. ಆದುದರಿಂದ ಜ್ಞಾನಿಯು ಆತ್ಮಸ್ವರೂಪಕ್ಕಿಂತ ಬೇರೆಯಾಗಿರುವ ಪ್ರಾಪಂಚಿಕ ವಿಚಾರಗಳಿಂದ ತನ್ನ ಮನಸ್ಸನ್ನು ತಿರುಗಿಸಿ ಅದನ್ನು ಆತ್ಮ ಸ್ವರೂಪದಲ್ಲಿಯೇ ನಿಲ್ಲಿಸುತ್ತಾನೆ. ಸ್ವಾಭಾವಿಕವಾದ ಕಾರ್ಯಕಾರಣ ಘಟನೆಗಳಿಂದ ಕೂಡಿರುವ ಪ್ರಕೃತಿ ಪರಿಣಾಮಗಳ ಚಿಂತನೆಯಲ್ಲೇ ಹರಿಯುತ್ತಿರುವ ಮನಸ್ಸನ್ನು ತಡೆಗಟ್ಟಿ, ಅದನ್ನು ಸರಿಯಾದ ದಾರಿಯಲ್ಲಿ ಅಂದರೆ ಆಧ್ಯಾತ್ಮ ದಾರಿಯಲ್ಲಿ ತಿರುಗಿಸುವ ಜ್ಞಾನಾಭ್ಯಾಸವೇ ' ಆತ್ಮ ವಿನಿಗ್ರಹ ' ಮನೋನಿಗ್ರಹ, ಆತ್ಮಸಂಯಮ ಜ್ಞಾನ.

### 9. ಸ್ಥೈರ್ಯಂ " ಎಂದರೇನು ?

ಅನೇಕರು ಅಧ್ಯಾತ್ಮ ಶಾಸ್ತ್ರಗಳನ್ನೇ ಓದುವುದಿಲ್ಲ; ಆದುದರಿಂದ ಅವುಗಳಲ್ಲಿ ಪ್ರತಿಪಾದಿಸಿರುವ ತತ್ತ್ವಹಿತ ಪುರುಷಾರ್ಥಗಳನ್ನು ತಿಳಿದಿಲ್ಲ. ಇನ್ನು ಕೆಲವರು ಅಧ್ಯಾತ್ಮ ಶಾಸ್ತ್ರಗಳನ್ನು ಓದುತ್ತಾ ಅವುಗಳಲ್ಲಿರುವ ವಿಷಯಗಳನ್ನು ತಮ್ಮ ಬುದ್ಧಿಯಲ್ಲಿ ಗ್ರಹಿಸಲು ಪ್ರಯತ್ನಿಸುತ್ತಾರೆ; ಆದರೆ ತತ್ವಗಳು ಒಂದಕ್ಕೊಂದು ವಿರೋಧವಾಗಿಯೂ ಅಸಂಗತವಾಗಿಯೂ ಅವರಿಗೆ ತೋರುವುದರಿಂದ ಅವರ ಮನಸ್ಸಿನಲ್ಲಿರುವ ಸಂದೇಹಗಳು ಪರಿಹಾರವಾಗುವುದಿಲ್ಲ ಮತ್ತು ತತ್ವಹಿತ ಪುರುಷಾರ್ಥಗಳಲ್ಲಿ. ಅವರಿಗೆ ನಿಶ್ಚಯವಾದ ತೀರ್ಮಾನವಿರುವುದಿಲ್ಲ, ಇದು ಅಜ್ಞಾನ. ಆದರೆ ಜ್ಞಾನಿಗಳು ಮಾತ್ರ ಈ ವಿಚಾರದಲ್ಲಿ " ಸ್ಥೈರ್ಯವನ್ನು ಪಡೆದಿರುತ್ತಾರೆ ; ಎಂದರೇನು, ಅವರು ಅಧ್ಯಾತ್ಮ ಶಾಸ್ತ್ರಗಳಲ್ಲಿ ಉಪದೇಶ ಮಾಡಿರುವ ತತ್ವಗಳನ್ನು ದೃಢವಾಗಿ ನಂಬುತ್ತಾರೆ ; ಅವುಗಳಲ್ಲಿ ಬೋಧಿಸಿರುವ ಮೋಕ್ಷ ಪುರುಷಾರ್ಥದಲ್ಲಿ ನಿಜವಾದ ಮತ್ತು ಅಧಿಕವಾದ ತ್ವರೆಯನ್ನು ಪಡೆದಿರುತ್ತಾರೆ ಮತ್ತು ಯೋಗಸಾಧನೆಗಳೆಲ್ಲವೂ ತಮಗೆ ಖಂಡಿತವಾಗಿಯೂ ಕ್ರಮೇಣ ಮೋಕ್ಷಾನಂದವನ್ನು ಉಂಟುಮಾಡುವುವು ಎಂಬ ಶ್ರದ್ಧೆಯನ್ನು ಪಡೆದಿರುವರು. ಅವರು ಅಧ್ಯಾತ್ಮ ಶಾಸ್ತ್ರಗಳಲ್ಲಿರುವ ಉಪದೇಶಗಳನ್ನು ಪ್ರಮಾಣವೆಂದು ನಿರ್ಣಯಿಸಿ, ತೀರ್ಮಾನಿಸಿ ಮತ್ತು ಸ್ವೀಕರಿಸಿ, ಅವುಗಳಲ್ಲಿ ವಿಧಿಸಿರುವ ಕಾರ್ಯಗಳನ್ನು ಸಂತೋಷದಿಂದ ಮಾಡುತ್ತಾರೆ ಮತ್ತು ಆಕಾರ್ಯಗಳನ್ನು ಮನೋಜಯದಿಂದ ಬಿಡುತ್ತಾರೆ. ಜ್ಞಾನಿಯು ಎಂದಿಗೂ ಸೋಮಾರಿತನದಿಂದಲಾಗಲೀ, ಭಯದಿಂದಲಾಗಲೀ ತನ್ನ ಧರ್ಮಗಳನ್ನು ಬಿಡುವುದಿಲ್ಲ ; ಅವುಗಳನ್ನು ಉತ್ಸಾಹದಿಂದ ಧೈರ್ಯವಾಗಿ ನಿಷ್ಠೆಯಿಂದ ಆಚರಿಸುತ್ತಾನೆ.

### 10. " ಇಂದ್ರಿಯಾರ್ಥೇಷು ವೈರಾಗ್ಯಂ " ಎಂದರೇನು ?

ಪ್ರಾಣಿಗಳಿಗೂ ಮತ್ತು ಬಹುಮಂದಿ ಮನುಷ್ಯರಿಗೂ ಇಂದ್ರಿಯ ಸುಖಗಳನ್ನು ಅನುಭವಿಸುವುದೇ ಜೀವನದ ಮುಖ್ಯವಾದ ಧ್ಯೇಯ ಅವರು ತಮ್ಮ ಕಾಲವನ್ನೆಲ್ಲಾ ರೂಪರಸ ಗಂಧಾದಿಗಳನ್ನು ತಮ್ಮ ಕಣ್ಣು, ನಾಲಿಗೆ, ಘ್ರಾಣ ಮೊದಲಾದ ಇಂದ್ರಿಯಗಳಿಂದ ಅನುಭವಿಸುತ್ತಾ ಮನಸ್ಸಿನಲ್ಲಿ ಸಂತೋಷಪಡಲು ಪ್ರಯತ್ನಿಸುತ್ತಲೇ ಇರುವರು. ಇದು ಅಜ್ಞಾನ. ಜ್ಞಾನಿಯು ಮಾತ್ರ ಇಂದ್ರಿಯಾರ್ಥಗಳಾದ ವಿಷಯಗಳಲ್ಲಿ ಮೊದಲು ಜಿಗುಪ್ಸೆಯನ್ನು ಪಡೆಯುವನು ; ಏಕೆಂದರೆ ಅವು ಅಲ್ಪವಾದುವುಗಳು, ಅಸ್ಥಿರವಾದುವುಗಳು ಮತ್ತು ದುಃಖ ಮಿಶ್ರವಾದುವುಗಳು. ಇಂದ್ರಿಯಗಳ ಮೂಲಕ ಸುಖವನ್ನುಂಟುಮಾಡುವ ಪದಾರ್ಥಗಳಲ್ಲಿ ಜ್ಞಾನಿಗೆ ಅಭಿಮಾನವಿರುವುದಿಲ್ಲ ಮತ್ತು ಕ್ರಮೇಣ ಅವನು ಅವುಗಳಲ್ಲಿ ಒಂದು ವಿಧವಾದ ವಿಮುಖತೆಯನ್ನೇ ಅಥವ ಅಸಹ್ಯತೆಯನ್ನೇ ಪಡೆಯುತ್ತಾನೆ. ಅವನು ಜೀವಿಸಿರುವಾಗ ಈ ಲೋಕದ ಮತ್ತು ಕಾಲವಾದ ಮೇಲೆ ಪರಲೋಕದ ಶಬ್ದಸ್ಪರ್ಶರೂಪ ರಸ ಗಂಧಾದಿ ಇಂದ್ರಿಯಾರ್ಥಗಳಲ್ಲಿ . ಅಂದರೆ ಭೋಗಗಳಲ್ಲಿ ರಾಗವನ್ನು ಅಂದರೆ ಹೆಚ್ಚಾದ ಆಸೆಯನ್ನು ಪಡೆದಿರುವುದಿಲ್ಲ. ಈ ವಿಧವಾದ ಸಾತ್ವಿಕ ಮನೋಭಾವವೇ " ಇಂದ್ರಿಯಾರ್ಥೇಷು ವೈರಾಗ್ಯಂ " ಎಂಬ ಜ್ಞಾನಾಭ್ಯಾಸ ಅಥವ ಜ್ಞಾನ.

### 11. " ಅನಹಂಕಾರ " ಎಂದರೇನು ?

ಸಾಧಾರಣ ಮನುಷ್ಯನು ತನ್ನನ್ನು ಇಂದ್ರಿಯ, ಮನಸ್ಸು ಬುದ್ಧಿ ಇವುಗಳಿಂದ ಕೂಡಿದ ಶರೀರವೆಂದು ತಿಳಿದು ಸಮಾಜದಲ್ಲಿರುವ ಬಹುಜನರಲ್ಲಿ ತಾನು ಒಬ್ಬ ಪ್ರತ್ಯೇಕನಾದ ವ್ಯಕ್ತಿ ಎಂದು ಭಾವಿಸುತ್ತಾನೆ. ಇದರಿಂದ ಅವನಲ್ಲಿ ಸ್ವಾರ್ಥತೆ ಬೆಳೆದು ಅವನು ಇತರರೊಡನೆ ವ್ಯವಹಾರ ಮಾಡುವಾಗ ಅಹಂಕಾರವನ್ನು ತೋರಿಸುತ್ತಾನೆ. ಅವನು ಅನೇಕ ವೇಳೆ ತನ್ನಲ್ಲಿ ಇಲ್ಲದಿರುವ ಶಾರೀರಿಕ ಮತ್ತು ಮಾನಸಿಕ ಗುಣಗಳು ತನ್ನಲ್ಲಿ ಇರುವುವು ಎಂಬ ಮೋಹವನ್ನು ಪಡೆಯುತ್ತಾನೆ ಮತ್ತು ಹಾಗೆಯೇ ಇತರರೊಡನೆ ವರ್ತಿಸುತ್ತಾನೆ. ಅವನಿಗೆ, ವೈಯಕ್ತಿಕವಾದ ತನ್ನ ಶರೀರದಲ್ಲೂ ಮನಸ್ಸಿನಲ್ಲೂ ಹೆಚ್ಚಾದ ಅಭಿಮಾನ ಮತ್ತು ಮೋಹವಿರುವುದು. ಆದುದರಿಂದ ಶರೀರದ ಮತ್ತು ಮನಸ್ಸಿನ ಪ್ರವೃತ್ತಿಗಳಲ್ಲಿಯೇ ತನ್ನ ಕಾಲವನ್ನೆಲ್ಲಾ ಕಳೆಯುತ್ತಾನೆ. ಈ ವಿಧವಾದ ಸ್ವಾರ್ಥಭಾವನೆಗಳೇ "ಅಹಂಕಾರ" ವೆಂಬ ಅಜ್ಞಾನ. ಆದರೆ ಜ್ಞಾನಿಯು ಮಾತ್ರ ತನ್ನ ದೇಹವನ್ನೂ. ಮನಸ್ಸನ್ನೂ ಆತ್ಮನನ್ನಾಗಿ ತಿಳಿಯದೇ ಇರುವುದರಿಂದ ಅವನಿಗೆ " ಅಹಂಕಾರ " ವೆಂಬ ಮೋಹವಿಲ್ಲ. ಅವನು " ನಾನು, ನನ್ನದು " ಎಂದು ಪದೇ ಪದೇ ಹೇಳುವುದಿಲ್ಲ ; ಅಂದರೇನು, ಅವನಿಗೆ ಸ್ವಾರ್ಥತೆ ಇಲ್ಲ, ಅಹಂಭಾವವಿಲ್ಲ ಮತ್ತು ಸ್ವಾಭಿಮಾನವಿಲ್ಲ. ಯಾವಾಗ ಮನುಷ್ಯನು ತನ್ನ ಶರೀರದೊಂದಿಗೆ ಮತ್ತು ಮನಸ್ಸಿನೊಂದಿಗೆ ಐಕ್ಯಭಾವನೆ ಹೊಂದುತ್ತಾನೆಯೋ ಆಗ ಅವನಿಗೆ ತಾನು ಇತರರಿಗಿಂತ ಬೇರೆಯಾದ ಪ್ರತ್ಯೇಕ ವ್ಯಕ್ತಿ ಎಂದು ತೋರುತ್ತಲೇ ಇರುವುದು ; ಆದುದರಿಂದ ಜ್ಞಾನಿಯು ಇದಕ್ಕೆ ಪ್ರತಿಯಾಗಿ " ನಾನು ಶರೀರವಲ್ಲ ; ಮನಸ್ಸಲ್ಲ ; ಚಿದಾನಂದ ಆತ್ಮನು " ಎಂದು ಭಾವಿಸುತ್ತಾ, ಹೀಗೆಯೇ ಎಲ್ಲರೂ ಆತ್ಮಸ್ವರೂಪರಾಗಿ ಒಂದೇ ಸ್ವರೂಪವುಳ್ಳವರು ಎಂಬ ಜ್ಞಾನವನ್ನು ಪಡೆಯುತ್ತಾನೆ ; ಇದರಿಂದ ಅವನ ಅಹಂಕಾರವು ಮಾಯವಾಗುತ್ತದೆ. ಜ್ಞಾನಿಯ ಈ ವಿಧವಾದ ಆತ್ಮಗುಣವೇ " ಅನಹಂಕಾರ " ವೆಂಬ ಜ್ಞಾನಾಭ್ಯಾಸ ಅಥವ ಜ್ಞಾನ.

## 12 " ಜನ್ಮಮೃತ್ಯು ಜರಾವ್ಯಾಧಿ ದುಃಖ ದೋಷಾನು ದರ್ಶನಂ " ಎಂದರೇನು ?

ನಾವೆಲ್ಲರೂ ನಮ್ಮ ಬಾಳಿನ ನಿಜವಾದ ಸ್ವಭಾವವನ್ನು ಮೋಹದಿಂದ ಮರೆತು, ನಾವು ಇನ್ನೂ ಬಹುಕಾಲ ಬದುಕಿರುತ್ತೇವೆ ಎಂಬ ಭಾವನೆಯನ್ನು ಯಾವಾಗಲೂ ಇಟ್ಟುಕೊಂಡು ಎಂದೆಂದಿಗೂ ಸುಖಪಡಬೇಕೆಂದು ಆಸೆಪಡುತ್ತೇವೆ ಮತ್ತು ಅದಕ್ಕಾಗಿ ಶ್ರಮಪಡುತ್ತೇವೆ. ತೊಂಭತ್ತು ವರುಷದ ಮುದುಕನೂ ಕೂಡ ತಾನು ಇನ್ನೂ ಬಹುಕಾಲ ಇರುತ್ತೇನೆಂದು ಭಾವಿಸುತ್ತಾ ಅದಕ್ಕಾಗಿ ವಸ್ತುಗಳನ್ನು ಶೇಖರಿಸುತ್ತಲೇ ಇರುವನು ಇದು ಅಜ್ಞಾನ ಆದರೆ ಜ್ಞಾನಿಯು ಮಾತ್ರ ತನಗೆ ಸಂಸಾರ ಚಕ್ರದಲ್ಲಿ ಹುಟ್ಟುವಿಕೆ, ಮುಪ್ಪು, ರೋಗ, ದುಃಖ, ಸಾವು ಎಂಬ ದೋಷಗಳು ಒಂದಾದ ಮೇಲೆ ಇನ್ನೊಂದು ಶರೀರದಲ್ಲಿ ಬಂದೇ ಬರುವುವು ಎಂಬುದನ್ನು ದೃಢವಾಗಿ ತಿಳಿದು, ಈ ವಿಚಾರವನ್ನು ಆಡಿಗಡಿಗೆ ನೆನಸಿಕೊಳ್ಳುತ್ತಲೇ ಇರುವನು ಗರ್ಭದಲ್ಲಿರುವ ಕಷ್ಟ, ಗರ್ಭದಿಂದ ಆಚೆಗೆ ಬರುವ ಕಷ್ಟ, ರೋಗಗಳಲ್ಲಿ ಶಕ್ತಿ ವೀರ್ಯ ತೇಜಸ್ಸು ಕುಗ್ಗುವ ಕಷ್ಟ, ಮುಪ್ಪಿನಕಷ್ಟ ಮತ್ತು ಸಾಯುವ ಕಾಲದ ಕಷ್ಟ ಅವನ ಕಣ್ಣು ಮುಂದೆ ಕಾಣುವ ಹಾಗೆ ಅವನ ಮನಸ್ಸಿನಲ್ಲಿ ಸ್ಪಷ್ಟವಾಗಿ ಕಾಣುತ್ತವೆ ಆದ್ದುದರಿಂದ ಅವನಿಗೆ ಶರೀರದಲ್ಲೂ, ಐಹಿಕ ಜೀವನದಲ್ಲೂ ಜಿಗುಪ್ಸೆ ಮತ್ತು ಅಧಿಕವಾದ ಬೇಸರಿಕೆಯುಂಟಾಗಿ ಅವನು ಆತ್ಮ-ಪರಮಾತ್ಮ ಸಾಕ್ಷಾತ್ಕಾರಕ್ಕಾಗಿ ಆಶಿಪಡುತ್ತಾನೆ ಮತ್ತು ಜ್ಞಾನಾಭ್ಯಾಸಗಳಲ್ಲಿ ನಿರತನಾಗಿ ಸಾತ್ವಿಕ ಆನಂದವನ್ನು ಹೆಚ್ಚು ಹೆಚ್ಚಾಗಿ ಪಡೆಯುತ್ತಾನೆ ಆದುದರಿಂದ " ಜನ್ಮಮೃತ್ಯು ಜರಾವ್ಯಾಧಿ ದುಃಖ ದೋಷಾನುದರ್ಶನವು " ಜ್ಞಾನ. ಈ ಅಭ್ಯಾಸದಿಂದ ಮನುಷ್ಯನು ಜೀವನದಲ್ಲಿ ಜಿಗುಪ್ಸೆಹೊಂದಿ ಆತ್ಮಹತ್ಯೆಆದರೆ ಮಾಡಿಕೊಳ್ಳುವುದಿಲ್ಲ ; ಆದರೆ ಮೋಕ್ಷಾನಂದಕ್ಕೆ ಹೋಲಿಸಿದರೆ ಅರ್ಥ, ಕಾಮ, ಧರ್ಮ ಪುರುಷಾರ್ಥಗಳಲ್ಲಿ ಅನೇಕ ದೋಷಗಳಿವೆ ಎಂಬುದನ್ನು ತಿಳಿಯುತ್ತಾನೆ ಮತ್ತು ಈ ಜೀವನದಲ್ಲಿ ಉತ್ಸಾಹದಿಂದ ಸಾತ್ವಿಕ ಸಾಧನೆಗಳನ್ನು ಕೈಗೊಂಡು ಸಾತ್ವಿಕಾನಂದವನ್ನು ಪಡೆಯುತ್ತಾನೆ.

## 13. " ಆಸಕ್ತಿ " ಎಂದರೇನು ?

ಬಹುಮಂದಿ ತಾವು ಶರೀರ ಮಾತ್ರ ಎಂದು ತಿಳಿದು ತನುಗೆ ಸೇರಿದ ಪದಾರ್ಥಗಳಲ್ಲಿ, ಮನೆ ಹೊಲ ಗದ್ದೆಗಳಲ್ಲಿ, ಹಣದಲ್ಲಿ, ಪತ್ನಿ ಪುತ್ರ ಬಂಧುಗಳಲ್ಲಿ " ಅವು ನಮ್ಮದು, ಅವರು ನಮ್ಮವರು " ಎಂಬ ವಿಶೇಷವಾದ ಅಭಿಮಾನವನ್ನು ಇಟ್ಟಿರುವರು ಇದು ಅಜ್ಞಾನ , ಏಕೆಂದರೆ, ಯಾವುದೂ ನಿಜವಾಗಿ ಮತ್ತು ಶಾಶ್ವತವಾಗಿ ನಮ್ಮದಲ್ಲ ಮತ್ತು ಯಾರೂ ನಿಜವಾಗಿ ಮತ್ತು ಶ್ಯಾಶತವಾಗಿ ನಮ್ಮವರಲ್ಲ. ನಾವು ಮೋಹದಿಂದ " ಇವು ನಮ್ಮದು, ಇವರು ನಮ್ಮವರು " ಎಂದು ಭಾವಿಸುತ್ತೇವೆ. ಆದರೆ ಜ್ಞಾನಿಗೆ ಶಾಶ್ವತವಾಗಿ " ತಾನೇ " ಆಗಿರುವ ಆತ್ಮವೊಂದರಲ್ಲಿಯೇ ನಿಜವಾದ ಪ್ರೀತಿಯು, ಮಮತೆಯು ಮತ್ತು ಅನುರಾಗವು. ಆದುದರಿಂದ ಅವನು ಆತ್ಮವಲ್ಲದ ಇತರ ವಸ್ತುಗಳಲ್ಲಿ ಸಂಗವನ್ನು ಇಟ್ಟುಕೊಳ್ಳುವುದಿಲ್ಲ ಅವನಿಗೆ ಸಂಗಕ್ಕೆ ಕಾರಣವಾಗಿರುವ ವಿಷಯಗಳಲ್ಲಿ ಅಭಿಮಾನವಿರುವುದಿಲ್ಲ , ಬಂಧುಗಳು ನಮ್ಮವರು ಎಂಬ ಸಾಮಾನ್ಯ ಪ್ರೀತಿ ಇರುವುದಿಲ್ಲ ಮತ್ತು ಎಲ್ಲಾ ಪದಾರ್ಥಗಳು ತನ್ನದು ಎಂಬ ದುರಾಶೆಇಲ್ಲ. ಮನಸ್ಸಿಗೂ ಪ್ರಪಂಚದ ಪದಾರ್ಥಗಳಿಗೂ ಸಂಯೋಗವಾದಾಗ ಮಾತ್ರ ಸುಖದುಃಖಗಳುಂಟಾಗುತ್ತವೆ. ಮತ್ತು ಅದಿಲ್ಲದಿದ್ದರೆ ಶಾಂತಿಯುಂಟಾಗುತ್ತದೆ ಎಂಬುದನ್ನು ಆಲೋಚನೆ ಮಾಡಿ ಅವನು ತಿಳಿದಿದ್ದಾನೆ. ಆದುದರಿಂದ ಆಡಿಗಡಿಗೆ ಅವನು ತನ್ನ ಮನಸ್ಸನ್ನು ಪ್ರಪಂಚದ ಪದಾರ್ಥಗಳ ಮೋಹದಿಂದ ಬಿಡುಗಡೆ ಹೊಂದುವ ಜ್ಞಾನಾಭ್ಯಾಸವನ್ನು ಮಾಡುತ್ತಲೇ ಇರುವನು ಹೀಗೆ ಕರ್ಮ ಫಲದಲ್ಲಿ ಆಶೆಯನ್ನು ತ್ಯಜಿಸಿ, ಅಭಿಮಾನವನ್ನು ತ್ಯಜಿಸುವ ಜ್ಞಾನಾಭ್ಯಾಸವೇ " ಆಸಕ್ತಿ " ಎಂಬ ಜ್ಞಾನ

## 14. " ಅನಭಿಷ್ವಂಗ ಪುತ್ರದಾರ ಗೃಹಾದಿಷು " ಎಂದರೇನು ?

ಗಂಡನು ಹೆಂಡತಿಯಲ್ಲೂ, ತಾಯಿಯು ಮಕ್ಕಳಲ್ಲೂ " ಅಭಿಷ್ವಂಗ " ಭಾವನೆಯನ್ನು ಇಟ್ಟಿರುವರು ಅಂದರೇನು ? ಗಂಡನು ಹೆಂಡತಿಯು ತನಗಿಂತ ಬೇರೆಯವಳಲ್ಲವೆಂದೂ ಮತ್ತು ತಾಯಿಯು ಮಕ್ಕಳು ತನಗಿಂತ ಬೇರೆಯಲ್ಲವೆಂದೂ ಮೋಹದಿಂದ ಐಕ್ಯ ಭಾವನೆಯನ್ನು ಮಾಡಿಕೊಳ್ಳುವರು. ಅದರಿಂದ ಹೆಂಡತಿಯು ಸುಖವಾಗಿದ್ದರೆ ಗಂಡನು ತಾನು ಸುಖವಾಗಿ ಇರುವುವಾಗಿ ಭಾವಿಸುವನು ; ಅವಳಿಗೆ ಕಷ್ಟದುಃಖಗಳು ಬಂದರೆ ತನಗೂ ಕಷ್ಟದುಃಖಗಳು ಬಂದ ಹಾಗೆ ಭಾವಿಸುವನು. ಹಾಗೆಯೇ ತಾಯಿಮಕ್ಕಳ ವಿಚಾರದಲ್ಲಿಯೂ ಕೂಡ ಮಕ್ಕಳಿಗೆ ಉಂಟಾಗುವ ಸುಖದುಃಖಗಳನ್ನು ತಾಯಿಯು ತಾನು ಅನುಭವಿಸುತ್ತಾಳೆ. ಇದೇ ರೀತಿಯಲ್ಲಿ ಸಾಧಾರಣ ಜನರಿಗೆಲ್ಲಾ ಅವರ ಹೆಂಡತಿ ಮಕ್ಕಳು, ಬಂಧುಗಳು, ಸ್ನೇಹಿತರು, ಮನೆ ಮುಂತಾದವುಗಳಲ್ಲಿ ಹೆಚ್ಚು ಕಮ್ಮಿ " ಅಭಿಷ್ವಂಗ "ವಿರುತ್ತದೆ. ಇದು ಅಜ್ಞಾನ ಆದರೆ ಜ್ಞಾನಿಯು ಮಾತ್ರ "ಅನಭಿಷ್ವಂಗನು". ಅಂದರೆ, ಅವನು ಪುತ್ರ, ಹೆಂಡತಿ, ಮನೆ ಮೊದಲಾದವುಗಳಲ್ಲಿ ಐಕ್ಯ ಭಾವನೆಯನ್ನು ಮಾಡದೆ ಶರೀರವೇ ಬೇರೆ ಆತ್ಮನೇ ಬೇರೆ ಎಂದು ಚೆನ್ನಾಗಿ ಮನನ ಮಾಡಿ,

Re-printed from Mysore Vysya Patrika
(January 1959)

M V. P, Press Mysore

# ಭಗವದ್ಗೀತಾ ಅಧ್ಯಾಯ ೧೩. ಪಾಠ ೩

ಅವರ ಶರೀರದಲ್ಲೂ ಮತ್ತು ಅದರ ಕಾರ್ಯಗಳಿಂದುಂಟಾಗುವ ಸುಖದುಃಖಗಳಲ್ಲೂ ಮನಸ್ಸನ್ನು ಅಂಟಿಸಿಕೊಳ್ಳುವುದಿಲ್ಲ; ಅವರ ಸುಖದುಃಖಗಳಲ್ಲಿ ತಾನೂ ಐಕ್ಯವಾಗುವುದಿಲ್ಲ. ಹೀಗೆ ಅವರಲ್ಲಿ ಹೆಚ್ಚಾದ ಅಭಿಮಾನವನ್ನು ಇಟ್ಟುಕೊಳ್ಳದಿರುವ ಈ ಜ್ಞಾನಾಭ್ಯಾಸದಿಂದ ಆತ್ಮಜ್ಞಾನವನ್ನು ಪಡೆಯಲು ಸಹಾಯವಾಗುತ್ತದೆ. ಆದರೆ ಹೆಂಡತಿ, ಮಕ್ಕಳು, ಮನೆ ಮುಂತಾದವುಗಳಲ್ಲಿ ಉದಾಸೀನನಾಗಿರುವುದು ಅಥವ ಈ ಅಭಿಮಾನಗಳು ಮನಸ್ಸನ್ನು ಆಕ್ರಮಿಸಲು ಅಥವ ಆಕರ್ಷಿಸಲು ಅವಕಾಶ ಕೊಡದಿರುವುದು ಬಹಳ ಕಷ್ಟವಾದ ಅಭ್ಯಾಸ. ಆದುದರಿಂದ ಈ ಜ್ಞಾನಾಭ್ಯಾಸವನ್ನು ಕ್ರಮ ಕ್ರಮವಾಗಿ ಆಚರಿಸಬೇಕು. ಮೊದಲು ಜ್ಞಾನಿಯಾಗಬೇಕೆಂದು ಆಶೆಪಡುವ ಮನುಷ್ಯನು ತನ್ನ ವ್ಯಕ್ತಿ ಸ್ವಾರ್ಥತೆಯಲ್ಲಿ ಮನಸ್ಸನ್ನು ಇಡದೆ ಕುಟುಂಬದವರು, ಬಂಧುಗಳು ಮತ್ತು ಸ್ನೇಹಿತರಲ್ಲಿ ಅಭಿಮಾನವಿಟ್ಟು ಅವರಿಗೆ ಸೇವೆಮಾಡಬೇಕು. ಎರಡನೆಯದಾಗಿ, ಪುತ್ರ ಹೆಂಡತಿ ಕುಟುಂಬ ಬಂಧು ಸ್ನೇಹಿತರಲ್ಲೇ ತನ್ನ ಮನಸ್ಸನ್ನಿಡದೆ ತಾನು ಪ್ರಜೆಯಾಗಿರುವ ಹಳ್ಳಿ, ಪಟ್ಟಣ, ದೇಶ, ಜನಾಂಗ ಮತ್ತು ವಿಶ್ವ ಎಂಬ ಮನುಷ್ಯ ಸಮಾಜಗಳಲ್ಲಿ ಅಭಿಮಾನವನ್ನು ವೃದ್ಧಿಪಡಿಸಿ ಆಯಾ ಜನರಿಗೆ ಸೇವೆಮಾಡಬೇಕು. ಕೊನೆಯದಾಗಿ ಈ ಮನುಷ್ಯ ಸಮಾಜಗಳಲ್ಲಿ ಮಾತ್ರ ಮನಸ್ಸನ್ನು ಇಡದೆ ಆತ್ಮಜ್ಞಾನದಲ್ಲಿ ಮತ್ತು ಪರಮಾತ್ಮ ಸಾಕ್ಷಾತ್ಕಾರದಲ್ಲಿ ಹೆಚ್ಚಾದ ಆಸಕ್ತಿಯನ್ನು ಪಡೆದು "ಅನಭಿಷ್ವಂಗ ಪುತ್ರದಾರಗೃಹಾದಿಷು" ಎಂಬ ಜ್ಞಾನಾಭ್ಯಾಸವನ್ನು ಪರಿಪೂರ್ಣವಾಗಿ ಆಚರಿಸಬೇಕು. ಆಗ ಜ್ಞಾನಿಯು ಪುತ್ರದಾರ ಗೃಹಾದಿಗಳಿಗೆ ಸಂಬಂಧಪಟ್ಟ ಕರ್ತವ್ಯ ಕರ್ಮಗಳನ್ನು ಕರ್ಮಯೋಗವಾಗಿ ಮಾಡುವನು.

**15. "ಇಷ್ಟಾನಿಷ್ಟೋಪಪತ್ತಿಷು ಸಮ ಚಿತ್ತತ್ವಂ" ಎಂದರೇನು ?**

ನಮಗೆ ಇಷ್ಟ ವಸ್ತುಗಳು ಒದಗಿದರೆ ಸಂತೋಷವಾಗುತ್ತದೆ; ಅನಿಷ್ಟಗಳು ಸಂಭವಿಸುವಾಗ ಅತೃಪ್ತಿ ಮತ್ತು ದುಃಖವುಂಟಾಗುತ್ತದೆ. ಇದು ಅಜ್ಞಾನ. ಆದರೆ ಜ್ಞಾನಿಯು ಮಾತ್ರ ತನಗೆ ಬೇಕಾದ ವಸ್ತುಗಳು ಒದಗಿದಾಗ ಉಬ್ಬುವುದಿಲ್ಲ; ಬೇಡವಾದ ಸಂದರ್ಭಗಳು ಬಂದರೆ ಕೋಪಗೊಳ್ಳುವುದಿಲ್ಲ. ಇಷ್ಟ ಪ್ರಾಪ್ತಿಯಾದಾಗ ಮತ್ತು ಅನಿಷ್ಟಪ್ರಾಪ್ತಿಯಾದಾಗ ಅವನು ಮನಸ್ಸನ್ನು ಒಂದೇ ಸಮನಾಗಿ ಇಟ್ಟುಕೊಳ್ಳುವನು. ಎಲ್ಲಾ ಕಾಲದಲ್ಲಿಯೂ ಅವನ ಮನಸ್ಸು ಶಾಂತವಾಗಿ ತನ್ನ ಆತ್ಮನಲ್ಲಿಯೇ ನೆಲೆನಿಂತು ಒಂದೇ ಸಮನಾಗಿ ಇರುವುದು. ಹೀಗೆ ಇಷ್ಟಾನಿಷ್ಟ ಪ್ರಾಪ್ತಿ ಕಾಲದಲ್ಲಿ ಸಮಭಾವ, ಚಿತ್ತಶಾಂತಿ, ಮನಸ್ಥೈರ್ಯ ಇರುವುದೇ "ಸಮ ಚಿತ್ತತ್ವಂ" ಎಂಬ ಜ್ಞಾನಾಭ್ಯಾಸ. ಈ ಸಮ ಚಿತ್ತತ್ವದಿಂದ ಒಳಗೆ ಹುದುಗಿರುವ ಆತ್ಮ ಶಕ್ತಿಯು ವಿಕಾಸವಾಗುತ್ತದೆ.

**16. "ಮಯಿಚ ಅನನ್ಯ ಯೋಗೇನ ಅವ್ಯಭಿಚಾರಿಣಿ ಭಕ್ತಿಃ" ಎಂದರೇನು ?**

ನಾಸ್ತಿಕರು ದೇವರಿಲ್ಲ ಎಂದು ತೀರ್ಮಾನಿಸುತ್ತಾರೆ; ಬಹುಮಂದಿ ಭಗವಂತನು ಇದ್ದರೂ ಇರಬಹುದು ಇಲ್ಲದಿದ್ದರೂ ಇರಬಹುದು, ಆದರೆ ನಮ್ಮ ಪ್ರಪಂಚದ ವ್ಯವಹಾರಗಳಿಗೆ ದೇವರಿಂದ ಯಾವ ಸಹಾಯವಿಲ್ಲವಾದುದರಿಂದ ತಾವು ಅವನ ವಿಚಾರದಲ್ಲಿ ಆಲೋಚಿಸುವುದೂ ಇಲ್ಲ ಮತ್ತು ತಾವು ಅವನನ್ನು ಪೂಜಿಸುವುದೂ ಇಲ್ಲ ಎಂದು ಹೇಳುತ್ತಾರೆ. ಇನ್ನು ಕೆಲವರು ಅನೇಕ ಬೇರೆ ಬೇರೆ ದೇವತೆಗಳನ್ನು ನಂಬಿ ಅವರವರು ತಮ್ಮ ತಮ್ಮ ಧರ್ಮಾರ್ಥ ಕಾಮ ಪುರುಷಾರ್ಥಗಳನ್ನು ಪಡೆಯುವುದಕ್ಕಾಗಿ ವಿಧ ವಿಧವಾಗಿ ಪೂಜೆ ಮಾಡುವರು. ಇವೆಲ್ಲಾ ಅಜ್ಞಾನ. ಜ್ಞಾನಿಯು ಮಾತ್ರ ಒಬ್ಬನೇ ಆದ ಭಗವಂತನಲ್ಲಿ "ಅವನೇ ನನಗೆ ಗತಿ" ಎಂದು ದೃಢವಾಗಿ ನಂಬುತ್ತಾನೆ ಮತ್ತು ಬೇರೆ ಬೇರೆ ದೇವತೆಗಳಲ್ಲಿ ಶ್ರದ್ಧೆ ಇಡದೇ ತಾನು ಭಗವಂತನನ್ನೇ ಹೊಂದಬೇಕೆಂಬ ಆಶೆಯಿಂದ ಅವನನ್ನು ಕುರಿತು ಕೀರ್ತನೆಗಳನ್ನು ಹಾಡುತ್ತಾ, ಸ್ತೋತ್ರಗಳನ್ನು ಹೇಳುತ್ತಾ, ಅಡಿಗಡಿಗೆ ಅವನ ಅರ್ಚಾ ವಿಗ್ರಹಗಳನ್ನು ಪೂಜಿಸುತ್ತಾ, ಅವನ ಶ್ರೇಷ್ಠವಾದ ಮಂತ್ರಗಳನ್ನು ಮನಸ್ಸಿನಲ್ಲಿ ಜಪಿಸುತ್ತಾ ಮತ್ತು ಅವನ ದಿವ್ಯ ಮಂಗಳ ವಿಗ್ರಹಗಳನ್ನು ಧ್ಯಾನ ಮಾಡುತ್ತಾ ಕಾಲವನ್ನು ಸಂತೋಷದಿಂದ ಕಳೆಯುವನು. ಇಷ್ಟೇ ಅಲ್ಲ, ಭಗವಂತನಲ್ಲಿ

ಅನುರಕ್ತನಾಗಿ ಶ್ರದ್ಧೆಯಿಂದಲೂ ಭಕ್ತಿಯಿಂದಲೂ ಅವನ ಮಕ್ಕಳಾದ ಸಮಾಜದ ಜನಗಳಿಗೂ ಮತ್ತು ಪ್ರಾಣಿಗಳಿಗೂ ಕಲ್ಯಾಣ ವುಂಟಾಗುವ ಕಾರ್ಯಗಳಲ್ಲಿ ನಿರತನಾಗುತ್ತಾನೆ. ಒಟ್ಟಿನಲ್ಲಿ, ಮಿಕ್ಕ ದೇವತೆಗಳಲ್ಲಿ ಶ್ರದ್ಧೆಯನ್ನು ಬಿಟ್ಟಿರುವ, ತಪ್ಪು ದಾರಿಗೆ ಹೋಗದ ಅಂದರೆ ಮೋಕ್ಷ ಪುರುಷಾರ್ಥವಲ್ಲದ ಬೇರೆ ಪುರುಷಾರ್ಥಗಳಲ್ಲಿ ವಿಶೇಷ ಆಸೆಯನ್ನು ಇಡದೇ ಇರುವ ಮತ್ತು ಒಬ್ಬನೇ ಆದ ಭಗವಂತನಲ್ಲಿ ಏಕಾಂತವಾದ ಮತ್ತು ನಿಶ್ಚಲ ವಾದ ಭಕ್ತಿಯನ್ನು ಹೃದಯದಲ್ಲಿ ಬೆಳಸಿರುವ "ಮಯಿ ಚ ಅನನ್ಯಯೋಗೇನ ಅವ್ಯಭಿಚಾರಿಣಿ ಭಕ್ತಿಃ" ಎಂಬ ಭಾವನೆಯೇ ಜ್ಞಾನಾಭ್ಯಾಸ ಅಥವಾ ಜ್ಞಾನ. ಜ್ಞಾನಿಗೆ ಭಗವಂತನಲ್ಲಿ ಚಾಂಚಲ್ಯರಹಿತವಾದ ಭಕ್ತಿ ಇರಬೇಕು ಮತ್ತು ಅವನು ಅರ್ಥ, ಕಾಮ ಮತ್ತು ಧರ್ಮ ಪುರುಷಾರ್ಥಗಳನ್ನು ಹೊಂದಲು ಬೇರೆ ಬೇರೆ ದೇವತೆಗಳನ್ನು ಪೂಜಿಸಬಾರದು ಸಚ್ಚಿದಾನಂದ ಸ್ವರೂಪವಾದ ಒಬ್ಬನೇ ಆದ ಭಗವಂತನ ಜ್ಞಾನವನ್ನು ಪಡೆದು ಅವನನ್ನು ಹೊಂದಲು ಆವನಲ್ಲಿಯೇ ಭಕ್ತಿಮಾಡಿ ಅವನನ್ನೇ ಆಶ್ರಯಿಸಿ ಅವನಲ್ಲಿ ಪ್ರಪತ್ತಿ ಮಾಡಬೇಕು.

## 17. "ವಿವಿಕ್ತ ದೇಶ ಸೇವಿತ್ವಂ" ಅಂದರೇನು

ಸಾಧಾರಣವಾದ ಜನರಿಗೆ ನಿರ್ಜನವಾದ ಪ್ರದೇಶಗಳಿಗೆ ಹೋಗುವುದಕ್ಕೆ ಭಯ; ಹಾಗೆ ಭಯವಿಲ್ಲದಿದ್ದರೂ ಅಲ್ಲಿಗೆ ಹೋಗಲು ಬೇಜಾರು; ಏಕೆಂದರೆ ಅವರಿಗೆ ಅಲ್ಲಿ ಇಂದ್ರಿಯ ಸುಖಗಳು ದೊರೆಯುವುದಿಲ್ಲ ಮತ್ತು ಹೊತ್ತು ಕಳೆಯುವುದಕ್ಕೆ ಕಷ್ಟವಾಗುತ್ತದೆ. ಇದು ಅಜ್ಞಾನ. ಆದರೆ ಜ್ಞಾನಿಯು ಮಾತ್ರ ವಿವಿಕ್ತವಾದ ಅಥವ ಏಕಾಂತವಾದ ಸ್ಥಳಗಳಿಗೆ ಆಡಿ ಗಡಿಗೆ ಹೋಗಿ ವಾಸಮಾಡಲು ಆಸೆಪಡುತ್ತಾನೆ; ಏಕೆಂದರೆ ಆ ಏಕಾಂತವಾದ ಮತ್ತು ಸೌಂದರ್ಯಯುತವಾದ ಸ್ಥಳಗಳಲ್ಲಿ ಅವನಲ್ಲಿ ಸತ್ವಗುಣವು ವೃದ್ಧಿಯಾಗಿ ಅವನು ಆತ್ಮಧ್ಯಾನವನ್ನೂ ಭಗವಂತನ ಸ್ತೋತ್ರ ಮನನ ಧ್ಯಾನಾದಿಗಳನ್ನೂ ಅಲ್ಲಿ ನಿರ್ವಿಘ್ನ ವಾಗಿ ಮಾಡಬಹುದು. ಆದುದರಿಂದ ಜ್ಞಾನಿಯು ಅಶುಚಿ ಇಲ್ಲದ, ಹಾವು, ಹುಲಿ, ಕರಡಿ ಮುಂತಾದ ದುಷ್ಟಜಂತುಗಳು ಇಲ್ಲದ, ಅಯೋಗ್ಯ ಜನರು ಇಲ್ಲದ ಅರಣ್ಯ, ನದಿಯ ದಡ, ಸರೋವರ ಮತ್ತು ಸಮುದ್ರದ ಪಕ್ಕ, ಊರಿನ ಹೊರಗೆ ಇರುವ ದೇವಾಲಯ, ಸುಂದರವಾದ ತೋಪು ಅಥವ ತೋಟ, ಬೆಟ್ಟ ಗಳ ತುದಿ, ವಿಶಾಲವಾದ ಮೈದಾನ ಅಥವ ಹುಲ್ಲುಗಾವಲು, ಬೆಟ್ಟದ ಗುಹೆಗಳು ಮುಂತಾದ ಜಾಗಗಳನ್ನು ಹುಡುಕಿ, ಅಲ್ಲಿಗೆ ಅಡಿಗಡಿಗೆ ಹೋಗಿ ಅಧ್ಯಾತ್ಮ ಅಭ್ಯಾಸಗಳನ್ನು ಮಾಡುವನು. ಅಂಥಾ ಸ್ಥಳಗಳು ಅನುಕೂಲವಾಗಿ ಸಿಕ್ಕದಿದ್ದರೆ ಅಥವ ಅಲ್ಲಿಗೆ ಹೋಗಲು ಅನುಕೂಲವಿಲ್ಲದಿದ್ದಾಗ ಜ್ಞಾನಿಯು ತನ್ನ ಊರಿ ನಲ್ಲೇ ಅಥವ ಮನೆಯಲ್ಲೇ ಬೇರೆಯಾದ ಅಥವ ಪ್ರತ್ಯೇಕವಾದ ಸ್ಥಾನಗಳನ್ನು ಏರ್ಪಾಡುಮಾಡಿಕೊಂಡು ಅಲ್ಲಿ ಅಧ್ಯಾತ್ಮ ಅಥವ ಯೋಗಾಭ್ಯಾಸಗಳನ್ನು ಮಾಡುವನು. ಹೀಗೆ ಅಧ್ಯಾತ್ಮ ಅಭ್ಯಾಸ ಗಳನ್ನು ಮಾಡುವುದಕ್ಕಾಗಿ ಏಕಾಂತವಾದ ಸ್ಥಳಗಳಿಗೆ ಅಡಿಗಡಿಗೆ ಹೋಗುವುದೇ "ವಿವಿಕ್ತ ದೇಶ ಸೇವಿತ್ವಂ" ಎಂಬ ಜ್ಞಾನಾ ಭ್ಯಾಸ. ಆ ಪ್ರದೇಶಗಳಿಗೆ ಹೋದಾಗ ನಮ್ಮ ಮನಸ್ಸು ಚಾಂಚಲ್ಯವಿಲ್ಲದೆ ಸ್ಥಿರವಾಗಿರುತ್ತದೆ.

## 18. "ಜನಸಂಸದಿ ಅರತಿ" ಎಂದರೇನು ?

ಸಾಧಾರಣ ಜನರು ಹಣವನ್ನು ಸಂಪಾದಿಸಲು ಕ್ಲಿಪ್ತಕಾಲ ಗಳಲ್ಲಿ ತಾವು ಕೈಗೊಂಡಿರುವ ವೃತ್ತಿಗಳ ಕಾರ್ಯಗಳನ್ನು ಪ್ರತಿ ದಿನವೂ ಬೆಳಗಿನಿಂದ ಸಾಯಂಕಾಲದವರೆಗೂ ಮಾಡುತ್ತಲೇ ಇರುವರು. ಆದರೆ ಮಿಕ್ಕ ಕಾಲಗಳನ್ನು ಬೇಜಾರಿಲ್ಲದೆ ಕಳೆಯು ವುದಕ್ಕಾಗಿ ಬಂಧುಗಳು ಮತ್ತು ಸ್ನೇಹಿತರು ಇವರೊಡನೆ ಕಲೆತು ಕೆಲಸಕ್ಕೆ ಬಾರದ ಮಾತುಗಳನ್ನು ಆಡುವರು. ಅಥವ ನೃತ್ಯ, ಸಂಗೀತ, ನಾಟಕ, ಸಿನೀಮ, ಹಬ್ಬ, ದೇವಾಲಯ ಪೂಜೆ, ಉತ್ಸವಗಳು, ಬೈಲಾಟಗಳು ಮುಂತಾದ ಬಹುಜನರ ಗುಂಪಿ ನಿಂದ ಕೂಡಿದ ವ್ಯವಹಾರಗಳಲ್ಲಿ ಕಾಲಕಳೆಯುವರು. ಈ ಸಂದರ್ಭಗಳು ಒದಗದಿದ್ದರೆ ಬೇಜಾರುಪಡುವರು; ಅವುಗಳು ಒದಗಿದರೆ ಬಹು ಸಂತೋಷಪಡುವರು, ಇದು ಅಜ್ಞಾನ. ಆದರೆ ಜ್ಞಾನಿಯು ಅಡಿಗಡಿಗೆ ಜನಸಮೂಹದಲ್ಲಿ ಇಲ್ಲದೆ ತಾನು ಒಬ್ಬನೇ ಇರಲು ಆಸೆಪಡುವನು. ಏಕೆಂದರೆ ಆಗ ಅವನು ನಿರ್ವಿಘ್ನವಾಗಿ ಆತ್ಮಮನನ ಮತ್ತು ಭಗವಂತನ ಧ್ಯಾನಮಾಡ ಬಹುದು. ಮೌನವ್ರತವನ್ನು ಅನುಷ್ಠಿಸಿ ಶಾಂತಿಯ ಆನಂದ ವನ್ನು ಪಡೆಯಬಹುದು. ಎವನಿಗೆ ಅಜ್ಞರಾದ ಪ್ರಾಕೃತ ಜನರ ಗುಂಪಿನಲ್ಲಿ ಕೆಲಸಕ್ಕೆ ಬಾರದ ಮಾತುಗಳನ್ನು ಆಡುವುದು ಇಷ್ಟ ವಿಲ್ಲ; ಅಯೋಗ್ಯರ ಸಮುದಾಯದಲ್ಲಿ ಆಟಗಳನ್ನು ಆಡುವುದ ರಲ್ಲಿ ಅವನಿಗೆ ಆಸಕ್ತಿಯಿಲ್ಲ. ಅವನಿಗೆ ಜನರ ಹರಟೆ ಕೂಟ ಗಳಲ್ಲಿ ಸೇರುವುದರಲ್ಲಿ ಸಂತೋಷವಿಲ್ಲ. ಜ್ಞಾನಿಗೆ ಜನರ ಗುಂಪಿನ ಅಲ್ಪವ್ಯವಹಾರಗಳಲ್ಲಿ ಅರುಚಿ; ಪಟ್ಟಣದ ಅವಸರದ ಓಡಾಟಗಳಲ್ಲಿ ಜಿಗುಪ್ಸೆ, ಪುಂಡುಜನರ ಗುಂಪಿನಲ್ಲಿ ಅಸಹ್ಯತೆ; ಮತ್ತು ವಿನೋದಗಳಲ್ಲಿಯೇ ಕಾಲಕಳೆಯುವ ಜನರ ಸಹವಾಸ ದಲ್ಲಿ ಅಪ್ರೀತಿ. ಏಕೆಂದರೆ ಈ ಗುಂಪುಗಳ ಮಧ್ಯದಲ್ಲಿ ಇದ್ದರೆ, ಅವನಲ್ಲಿ ಆತ್ಮಜ್ಞಾನವು ವೃದ್ಧಿಯಾಗುವುದಿಲ್ಲ. ಅದಕ್ಕೆ ಬದ ಲಾಗಿ ಆತ್ಮಜ್ಞಾನದ ಬೆಳವಣಿಗೆಗೆ ಅಡ್ಡಿಯಾಗುತ್ತದೆ. ಈ ವಿಧಗಳಲ್ಲಿ ಜನಸಂಸದಿಯಲ್ಲಿ ಸಂತೋಷಪಡದಿರುವುದೇ "ಜನ ಸಂಸದಿ ಅರತಿ" ಎಂಬ ಜ್ಞಾನಾಭ್ಯಾಸ.

## 19. " ಅಧ್ಯಾತ್ಮಜ್ಞಾನ ನಿತ್ಯತ್ವಂ "ಎಂದರೇನು ?

ಸಾಧಾರಣ ಜನರಿಗೆ ಆತ್ಮನಲ್ಲಿ ನಂಬಿಕೆಯಿಲ್ಲ ಮತ್ತು ತಾವು " ಆತ್ಮಾ " ಎಂಬ ತಿಳುವಳಿಕೆ ಇಲ್ಲ. ಆದುದರಿಂದ ಅವರು ಆತ್ಮಚಿಂತನೆಯನ್ನೇ ಮಾಡುವುದಿಲ್ಲ. ಇದು ಅಜ್ಞಾನ. ಆದರೆ ಜ್ಞಾನಿಯು ಯಾವಾಗಲೂ ಆತ್ಮಸಂಬಂಧವಾದ ಜ್ಞಾನವನ್ನು ಪಡೆದಿರುವನು; ಅವನಲ್ಲಿ ಅಧ್ಯಾತ್ಮ ಜ್ಞಾನವು ನಿತ್ಯವಾಗಿ ಅಂದರೆ ಯಾವಾಗಲೂ ಇರುವುದು. ಏಕೆಂದರೆ ಅಧ್ಯಾತ್ಮ ಜ್ಞಾನವೇ ನಿತ್ಯವಾದದ್ದು ಎಂಬುದು ಅವನಿಗೆ ಗೊತ್ತು ಮತ್ತು ಪರಮಾತ್ಮಜ್ಞಾನವೇ ತನಗೆ ಶಾಶ್ವತವಾದ ಪುರುಷಾರ್ಥವೆಂದು ಅವನು ತಿಳಿದಿರುವನು. ಆದುದರಿಂದ ಜ್ಞಾನಿಯು ಯಾವಾಗಲೂ ಸತ್ಯಸ್ವರೂಪವನ್ನು ಅಂದರೆ ಆತ್ಮಸ್ವರೂಪವನ್ನೂ, ಭಗವಂತನ ಸ್ವರೂಪವನ್ನೂ, ಅದಕ್ಕೂ ತನಗೂ ಇರುವ ಸಂಬಂಧವನ್ನೂ ಶ್ರವಣ, ಮನನ ಮತ್ತು ಧ್ಯಾನ ಮಾಡುತ್ತಲೇ ಇರುವನು. ಇದೇ " ಅಧ್ಯಾತ್ಮಜ್ಞಾನ ನಿತ್ಯತ್ವಂ " ಎಂಬ ಜ್ಞಾನಾಭ್ಯಾಸ.

## 20. "ತತ್ವಜ್ಞಾನ ಅರ್ಥದರ್ಶನಂ" ಎಂದರೇನು ?

ಬಹುಮಂದಿ ವಿದ್ಯೆಯನ್ನೇ ಕಲಿಯುವುದಿಲ್ಲ; ವಿದ್ಯೆಯನ್ನು ಕಲಿತವರೂ ಕೂಡ ಲೌಕಿಕ ಮತ್ತು ವ್ಯಾವಹಾರಿಕ ವಿದ್ಯೆಯಲ್ಲೇ ತೃಪ್ತರಾಗುತ್ತಾರೆ. ಅವರು ತತ್ವಜ್ಞಾನವನ್ನು ತಿಳಿಸುವ ಶಾಸ್ತ್ರಗಳನ್ನು ಕಲಿಯುವುದಿಲ್ಲ. ಹಾಗೆ ಒಂದು ವೇಳೆ ಶಾಸ್ತ್ರಗಳ ಪರಿಚಯವನ್ನು ಪಡೆದರೂ ಕೂಡ ಅವರಿಗೆ ಶಾಸ್ತ್ರಗಳ ಉಪದೇಶಗಳ ನಿಜವಾದ ಅರಿವು ಉಂಟಾಗುವುದಿಲ್ಲ ; ಏಕೆಂದರೆ ಅವರು ಅವೆಲ್ಲವನ್ನೂ ತಮ್ಮ ಅಶಿಕ್ಷಿತ ಬುದ್ಧಿಯಲ್ಲಿ ಮಾತ್ರ ತಿಳಿಯಲು ಪ್ರಯತ್ನಿಸುತ್ತಾರೆ. ಅವುಗಳನ್ನು ಪ್ರತ್ಯಕ್ಷಿಸಬೇಕು ಎಂಬ ಆಸೆಯೂ ಇಲ್ಲ ಮತ್ತು ಯೋಚನೆಯೂ ಇಲ್ಲ. ಆದುದರಿಂದಲೇ ಅವರಿಗೆ ಶಾಸ್ತ್ರದ ಉಪದೇಶಗಳು ಪರಸ್ಪರ ವಿರುದ್ಧವಾಗಿಯೂ, ಅಸಂಗತವಾಗಿಯೂ ಕಾಣುವುವು. ಅಂಥವರಿಗೆ ಯಾವಾಗಲೂ ಶರೀರವೇ ಆತ್ಮ ಎಂಬ ಭಾವನೆಯುಂಟಾಗುವುದು. ಇದು ಅಜ್ಞಾನ. ಆದರೆ ಜ್ಞಾನಿಯು ತತ್ವಜ್ಞಾನವೇ ಪ್ರಯೋಜನವಾಗಿರುವ ಜ್ಞಾನದಲ್ಲಿ ಆಸಕ್ತಿಯನ್ನು ಪಡೆದಿದ್ದಾನೆ ; ತತ್ವಜ್ಞಾನದಿಂದುಂಟಾಗುವ ಆತ್ಮಲಾಭ ಎಂಬ ಫಲದಲ್ಲಿ ತನ್ನ ಧ್ಯೇಯವನ್ನು ನಿಲ್ಲಿಸಿದ್ದಾನೆ; ಅದಕ್ಕಾಗಿ ತತ್ವಜ್ಞಾನದ ಸಾಧನೆಯಲ್ಲಿ ಪ್ರವೃತ್ತಿಯುಳ್ಳವನಾಗಿದ್ದಾನೆ. ಈ ಕಾರಣಗಳಿಂದ ಅವನು ತತ್ವಜ್ಞಾನಕ್ಕೆ ವಿಷಯವಾಗಿರುವ ಆತ್ಮ, ಪರಮಾತ್ಮ, ಬ್ರಹ್ಮ ಎಂದು ಹೇಳಿಸಿಕೊಳ್ಳುವ ಸತ್ಯಸ್ವರೂಪವನ್ನು ಪ್ರತ್ಯಕ್ಷಿಸುತ್ತಾನೆ, ಅರಿಯುತ್ತಾನೆ, ಗ್ರಹಿಸುತ್ತಾನೆ ಮತ್ತು ಅನುಭವಿಸುತ್ತಾನೆ. ಜ್ಞಾನದ ಅಂತವನ್ನೂ, ಧ್ಯೇಯವನ್ನೂ ತನ್ನ ಒಳನೋಟ ಅಥವ ದೃಷ್ಟಿಯಿಂದ ಕಾಣುತ್ತಾನೆ.

### ಗಮನಿಸಬೇಕಾದ ವಿಷಯ

ಆತ್ಮ-ಪರಮಾತ್ಮ ಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಮುಮುಕ್ಷುವು ಅಜ್ಞಾನವನ್ನು ತ್ಯಜಿಸಬೇಕು ಮತ್ತು ಜ್ಞಾನವನ್ನು ಸ್ವೀಕರಿಸಬೇಕು ; ಅಂದರೆ, ಅಜ್ಞಾನ, ಅಭ್ಯಾಸಗಳನ್ನು ಬಿಡಬೇಕು ಮತ್ತು ಜ್ಞಾನ ಅಭ್ಯಾಸಗಳನ್ನು ಆಚರಿಸಬೇಕು. ಆದರೆ ಮನುಷ್ಯನು ಈ ಇಪ್ಪತ್ತು ಜ್ಞಾನಾಭ್ಯಾಸಗಳನ್ನು ತನ್ನ ಕುಟುಂಬ ಮತ್ತು ಸಮಾಜವನ್ನು ಬಿಟ್ಟು ಏಕಾಂಗಿಯಾಗಿದ್ದುಕೊಂಡು ಸನ್ಯಾಸಿಯಾಗಿ ಆಚರಿಸಬೇಕೇ ಅಥವ ಅವನು ಊರಿನಲ್ಲಿ ತನ್ನ ಕುಟುಂಬದಲ್ಲಿ ಗೃಹಸ್ಥನಾಗಿದ್ದು, ಸಮಾಜದಲ್ಲಿ ಪ್ರಜೆಯಾಗಿ, ತನ್ನ ಕರ್ತವ್ಯ ಕರ್ಮಗಳನ್ನು ನಡೆಸುತ್ತಾ ಈ ಜ್ಞಾನಾಭ್ಯಾಸಗಳನ್ನು ನಡೆಸಬೇಕೇ ಎಂಬ ಸಂದೇಹವನ್ನು ಈಗ ಪರಿಹರಿಸಬೇಕಾಗಿದೆ.

ಈ ಇಪ್ಪತ್ತು ಜ್ಞಾನಾಭ್ಯಾಸಗಳಲ್ಲಿ ಅಮಾನಿತ್ವಂ, ಅದಂಭಿತ್ವಂ, ಅಹಿಂಸೆ, ಕ್ಷಾಂತಿ, ಆರ್ಜವಂ. ಆಚಾರ್ಯೋಪಾಸನಂ, ಅನಹಂಕಾರ, ಅಸಕ್ತಿ ಎಂಬ ಎಂಟು ಅಭ್ಯಾಸಗಳನ್ನು ಮನುಷ್ಯನು ಸಮಾಜದಲ್ಲಿ ಇದ್ದುಕೊಂಡೇ ಆಚರಿಸಬೇಕಾಗುತ್ತದೆ ; ಏಕೆಂದರೆ ಅವನು ಇತರರೊಡನೆ ಹೇಗೆ ವರ್ತಿಸಬೇಕು ಎಂಬುದನ್ನು ಈ ಅಭ್ಯಾಸಗಳು ತಿಳಿಸುತ್ತವೆ. ಶೌಚಂ, ಸ್ಥೈರ್ಯಂ ; ಆತ್ಮವಿನಿಗ್ರಹಃ, ಜನ್ಮಮೃತ್ಯುಜರಾವ್ಯಾಧಿ ದುಃಖದೋಷಾನುದರ್ಶನಂ, ನಿತ್ಯಂಚ ಸಮಚಿತ್ತತ್ವಂ ಇಷ್ಟಾ ನಿಷ್ಟೋಪಪತ್ತಿಷು, ಮಯಿಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣಿ ಎಂಬ ಆರು ಜ್ಞಾನಾಭ್ಯಾಸಗಳನ್ನು ಸಮಾಜದಲ್ಲಿದ್ದುಕೊಂಡೂ ಮಾಡಬಹುದು ಮತ್ತು ಕಾಡಿನಲ್ಲಿದ್ದು ಏಕಾಂಗಿಯಾಗಿಯೂ ಅಭ್ಯಾಸ ಮಾಡಬಹುದು.

ಇಂದ್ರಿಯಾರ್ಥೇಷು ವೈರಾಗ್ಯಂ, ಅನಭಿಷ್ವಂಗ ಪುತ್ರದಾರ ಗೃಹಾದಿಷು, ವಿವಿಕ್ತದೇಶ ಸೇವಿತ್ವಂ, ಅರತಿರ್ಜನಸಂಸದಿ, ಅಧ್ಯಾತ್ಮ ಜ್ಞಾನನಿತ್ಯತ್ವಂ, ತತ್ವಜ್ಞಾನಾರ್ಥ ದರ್ಶನಂ ಎಂಬ ಆರು ಜ್ಞಾನಾಭ್ಯಾಸಗಳನ್ನು ಕಾಡಿನಲ್ಲಿ ಏಕಾಂಗಿಯಾಗಿ ಇರುವ ಮನುಷ್ಯನು ಮಾತ್ರ ಅನುಷ್ಟಿಸುವುದು ಸುಲಭವೆಂದು ಕೆಲವರು ಹೇಳುತ್ತಾರೆ- ಆದರೆ ಇದು ನಿಜವಲ್ಲ ; ಏಕೆಂದರೆ ಏಕಾಂಗಿಯಾದವನಿಗೆ ಇಂದ್ರಿಯ ವಿಷಯಗಳ ಸಂಯೋಗವಿಲ್ಲದಿದ್ದರೂ ವಿಷಯಗಳ ಮೇಲಿನ ಅನುರಾಗವೂ ಮತ್ತು ಚಪಲವೂ ಅವನ ಮನಸ್ಸಿನಲ್ಲಿ ಯಾವಾಗಲೂ ಇರುವುದರಿಂದ ಅವನಿಗೆ ಶಾಂತಿ

ಇರುವುದಿಲ್ಲ. ಈ ವಿಚಾರವನ್ನೇ ಶ್ರೀಕೃಷ್ಣನು ಮೂರನೆಯ ಅಧ್ಯಾಯದಲ್ಲಿ "ಕರ್ಮೇಂದ್ರಿಯಾಣಿ ಸಂಯಮ್ಯಯ ಆಸ್ತೇ ಮನಸಾಸ್ಮರ್ರ I ಇಂದ್ರಿಯಾರ್ಥಾನ್ ವಿಮೂಢಾತ್ಮಾಮಿಥ್ಯಾ ಚಾರಸ್ಸ ಉಚ್ಯತ II" (ಕರ್ಮೇಂದ್ರಿಯಗಳನ್ನು ಅಡಗಿಸಿ ಇಟ್ಟುಕೊಂಡರೂ ಒಬ್ಬನು ವಿಷಯುಗಳನ್ನು ಮನಸ್ಸಿನಲ್ಲಿ ಸ್ಮರಿಸುತ್ತಿರುವನಾದರೆ, ಅಂತಹ ಮೂಢನು ಮಿಥ್ಯಾಚಾರ ಉಳ್ಳವನೆಂದೇ ಎಣಿಸಲ್ಪಡುವನು) ಎಂಬ ಶ್ಲೋಕದಲ್ಲಿ ವಿವರಿಸಿದ್ದಾನೆ. ಆದುದರಿಂದ ಈ ಮೇಲಿನ ಆರು ಜ್ಞಾನಾಭ್ಯಾಸಗಳನ್ನು ಕೂಡ ಜ್ಞಾನಿಯು ಕುಟುಂಬದಲ್ಲೂ ಸಮಾಜದಲ್ಲೂ ಇದ್ದುಕೊಂಡೇ ಆಚರಿಸಬೇಕು. ಹೆಂಡತಿ ಮಕ್ಕಳ ವಿಚಾರದಲ್ಲಿ ಕರ್ತವ್ಯ ಕರ್ಮಗಳನ್ನು ಫಲಾಪೇಕ್ಷೆರಹಿತವಾಗಿ, ಅಕರ್ತೃತ್ವಾನುಸಂಧಾನಯುತವಾಗಿ, ಭಗವತ್ಕೈಂಕರ್ಯರೂಪವಾಗಿ ಆಚರಿಸಬೇಕು. ಇಂದ್ರಿಯಾರ್ಥಗಳಲ್ಲಿ ಆಸೆಪಡದೆ ಜೀವನಧಾರಣಕ್ಕಾಗಿ, ಕರ್ತವ್ಯ ಕರ್ಮಗಳನ್ನು ನಡೆಸಲು ಅವಶ್ಯಕವಾದ ಶಕ್ತಿಯನ್ನು ಪಡೆಯುವುದಕ್ಕಾಗಿ, ಜ್ಞಾನಾಭ್ಯಾಸಗಳನ್ನು ಆಚರಿಸಲು ಸತ್ವಗುಣವನ್ನು ವೃದ್ಧಿಪಡಿಸುವುದಕ್ಕಾಗಿ ಜ್ಞಾನಿಯೂ ಕೂಡ ಧಾರಕ ಪೋಷಕ ವಸ್ತುಗಳನ್ನು ಉಪಯೋಗಿಸಲೇಬೇಕು; ಆದರೆ ಅವನು ಭೋಗ್ಯವಿಲಾಸ ವಸ್ತುಗಳನ್ನು ತ್ಯಜಿಸಲೇಬೇಕು. ಸಮಾಜದ ಕರ್ತವ್ಯಗಳನ್ನು ನಡೆಸುತ್ತಾ ಕುಟುಂಬದಲ್ಲಿದ್ದಾಗ್ಯೂ, ಅವನು ತನಗೆ ಎಷ್ಟೆಷ್ಟು ಅವಕಾಶಗಳು ದೊರಕುತ್ತವೆಯೋ ಆ ಕಾಲಗಳಲ್ಲೆಲ್ಲಾ ವಿವಿಕ್ತವಾದ, ನಿರ್ಜನವಾದ, ಏಕಾಂತವಾದ ಪ್ರದೇಶಗಳಿಗೆ ಹೋಗಿ ಅಲ್ಲಿ "ಅಧ್ಯಾತ್ಮಜ್ಞಾನ ನಿತ್ಯತ್ವಂ" ಮತ್ತು "ತತ್ವಜಾನಾರ್ಥದರ್ಶನಂ" ಎಂಬ ಜ್ಞಾನಾಭ್ಯಾಸಗಳನ್ನು ಮಾಡಬೇಕು ಮತ್ತು ಜನಸಂಸದಿಯಿಂದುಂಟಾಗುವ ಸಂತೋಷಗಳನ್ನು ಕಮ್ಮಿ ಮಾಡುತ್ತಾ ಇರಬೇಕು. ಒಟ್ಟಿನಲ್ಲಿ ಜ್ಞಾನಿಯು ಕಾಡಿನಲ್ಲಿ ಏಕಾಂಗಿಯಾಗಿ ಸನ್ಯಾಸಿಯಾಗಿ ವಾಸಮಾಡಬೇಕಾಗಿಲ್ಲ; ಅವನು ಗೃಹಸ್ಥನಾಗಿ ಸಮಾಜದಲ್ಲೇ ಇದ್ದು ಕರ್ತವ್ಯ ಕರ್ಮಗಳನ್ನು ಕರ್ಮಯೋಗವಾಗಿ ನಡೆಸುತ್ತಾ ಈ ಇಪ್ಪತ್ತು ಜ್ಞಾನಾಭ್ಯಾಸಗಳನ್ನು ಅಥವ ಜ್ಞಾನವನ್ನು ದಿನಚರಿಯಲ್ಲಿ ಆಚರಿಸುತ್ತಲೇ ಇರಬೇಕೆಂಬುದೇ ಈ ಶ್ಲೋಕಗಳಲ್ಲಿರುವ ಅಭಿಪ್ರಾಯ. ಈ ಅಭ್ಯಾಸಗಳಿಂದ ಶಾಂತಿಯೂ, ಆತ್ಮಾನಂದವೂ ಮತ್ತು ಭಗವದಾನಂದವೂ ಕ್ರಮೇಣ ವೃದ್ಧಿಯಾಗುತ್ತದೆ.

# ಭಗವದ್ಗೀತಾ ಅಧ್ಯಾಯ ೧೩. ಪಾಠ ೪

## ಜ್ಞೇಯದ ಸ್ವರೂಪ (೧೨ ರಿಂದ ೧೮)

**ಶ್ಲೋಕಗಳು ಮತ್ತು ಅವುಗಳ ವಾಕ್ಯಗಳ ಸಾಮಾನ್ಯ ಮತ್ತು ವಿಶೇಷ ಅರ್ಥಗಳು**

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಞಾತ್ವಾ(ಽ)ಮೃತಮಶ್ನುತೇ I**
**ಅನಾದಿ ಮತ್ಪರಂಬ್ರಹ್ಮ ನಸತ್ತನ್ನಾ ಸದುಚ್ಯತೇ II ೧೨ II**

1. ಯತ್‌ಜ್ಞೇಯಂ, ಯತ್‌ಜ್ಞಾತ್ವಾ (ಮುಮುಕ್ಷುಃ) ಅಮೃತಂ ಅಶ್ನುತೇ = ಯಾವುದು ಜ್ಞೇಯವೋ, ಯಾವುದನ್ನು ತಿಳಿದ ನಂತರ (ಮುಮುಕ್ಷುವು) ಅಮೃತತ್ವವನ್ನು ಹೊಂದುತ್ತಾನೆಯೋ ಅದನ್ನು ಹೇಳುತ್ತೇನೆ.

ಯಾವುದು ಜ್ಞಾನಿಯಿಂದ ತಿಳಿಯಲ್ಪಡಲು ಯೋಗ್ಯವಾನುದೋ ಅದು "ಜ್ಞೇಯ". ಹಾಗೆ ತಿಳಿಯಲ್ಪಡಬೇಕಾದ ಸ್ವರೂಪ ಯಾವುದು ? ಈ ವಿಚಾರದಲ್ಲಿ ಆಚಾರ್ಯರುಗಳು ಬೇರೆ ಬೇರೆ ಅಭಿಪ್ರಾಯಗಳನ್ನು ಸೂಚಿಸಿರುವರು. "ಜ್ಞೇಯ"ವೇ ನಿರ್ಗುಣಬ್ರಹ್ಮ ಎಂಬುದು ಮೊದಲನೆಯ ಅಭಿಪ್ರಾಯ. "ಜ್ಞೇಯ"ವು ಮುಕ್ತನಾದ ಪ್ರತ್ಯಗಾತ್ಮ ಅಥವ ಕರ್ಮವಶ್ಯನಲ್ಲದ ತನ್ನ ನಿಜಸ್ವರೂಪದಲ್ಲಿರುವ ಜೀವಾತ್ಮ ಎಂಬುದು ಎರಡನೆಯ ಅಭಿಪ್ರಾಯ. "ಜ್ಞೇಯ"ವು ಸತ್ಯಸ್ವರೂಪನಾದ ಸಗುಣ ಬ್ರಹ್ಮನೇ ಆಗಿದ್ದಾನೆ ಎಂಬುದು ಮೂರನೆಯ ಅಭಿಪ್ರಾಯ.

"ಅಮೃತ" ವೆಂದರೆ ನಾಶರಹಿತವಾದ ಸ್ಥಿತಿ ಎಂಬುದು ಸಾಮಾನ್ಯವಾದ ಅರ್ಥ. ಆದರೆ ಈ ಸ್ಥಿತಿ ಯಾವುದು ಎಂಬ ವಿಚಾರದಲ್ಲಿ ಬೇರೆ ಬೇರೆ ಅಭಿಪ್ರಾಯಗಳಿವೆ. ನಿರ್ಗುಣ ಬ್ರಹ್ಮನ ಸಾಕ್ಷಾತ್ಕಾರವನ್ನು ಪಡೆಯುವುದೇ ಅಮೃತವೆಂಬುದು ಮೊದಲನೆಯ ಅಭಿಪ್ರಾಯ. ಅಮೃತವೆಂದರೆ ಪ್ರಕೃತಿಬಂಧನದಿಂದ ಮುಕ್ತಿಯನ್ನು ಪಡೆದಿರುವ ಪ್ರತ್ಯಗಾತ್ಮನ ನಿಜಸ್ವರೂಪ ಸಾಕ್ಷಾತ್ಕಾರವನ್ನು ಪಡೆಯುವುದು ; (ಮುಂದುವರಿಯುವುದು)

Re-printed from Mysore Vysya Patreka
(Februaray 1959)

M. V. P. Press, Mysore.

ಆಮೇಲೆ ಅವನಿಗೆ ಹುಟ್ಟು ಸಾವುಗಳಿರುವುದಿಲ್ಲ; ಇದು ಎರಡನೆಯ ಅಭಿಪ್ರಾಯ. ಅಮೃತವೆಂದರೆ ಪರಮಪದದಲ್ಲಿ ಅಥವ ವೈಕುಂಠದಲ್ಲಿ ಮುಕ್ತನು ಸಗುಣ ಬ್ರಹ್ಮನ ಸಾಕ್ಷಾತ್ಕಾರವನ್ನು ಪಡೆಯುವುದು; ಇದು ಮೂರನೆಯ ಅಭಿಪ್ರಾಯ.

ಜ್ಞಾತ್ವಾ ಎಂಬ ಪದಕ್ಕೆ ಬುದ್ಧಿಯಲ್ಲಿ ತಿಳಿಯುವುದು ಎಂಬುದು ಸಾಮಾನ್ಯ ಅರ್ಥ; ಯೋಗ ಸಮಾಧಿ ಕಾಲದಲ್ಲಿ ಸಾಕ್ಷಾತ್ಕರಿಸುವುದು ಎಂಬುದು ವಿಶೇಷಾರ್ಥ. ಆದುದರಿಂದ ಈ ವಾಕ್ಯದ ವಿಶಾಲವಾದ ಅರ್ಥವೇನು ? ಯಾವುದನ್ನು ಸಾಕ್ಷಾತ್ಕರಿಸಿದರೆ ನಾಶರಹಿತವಾದ ನಿರ್ಗುಣ ಬ್ರಹ್ಮಸಾಕ್ಷಾತ್ಕಾರವನ್ನು ಅಥವಾ ಪ್ರತ್ಯಗಾತ್ಮ ಸ್ವರೂಪ ಸಾಕ್ಷಾತ್ಕಾರವನ್ನು ಅಥವ ಸಗುಣ ಬ್ರಹ್ಮ ಸಾಕ್ಷಾತ್ಕಾರವನ್ನು ಜ್ಞಾನಿಯು ಪಡೆದು ಜನ್ಮ ಮರಣಗಳಿಂದ ಮುಕ್ತನಾಗುವನೋ ಅಂಥಾ ಜ್ಞೇಯದ ಸ್ವರೂಪವನ್ನು ನಿನಗೆ ಹೇಳುತ್ತೇನೆ. (ಕೆಲವರು " ಜ್ಞೇಯ " ವೆಂದರೆ ನಿರ್ಗುಣಬ್ರಹ್ಮ ಎಂದು ತಿಳಿಯುತ್ತಾರೆ; ಇನ್ನು ಕೆಲವರು ಶುದ್ಧ ಪ್ರತ್ಯಗಾತ್ಮವೆಂದು ತಿಳಿಯುತ್ತಾರೆ; ಇನ್ನು ಕೆಲವರು ಸಗುಣಬ್ರಹ್ಮ ಎಂದು ತಿಳಿಯುತ್ತಾರೆ.)

(2) (ತತ್) ಅನಾದಿ ಮತ್ಪರಂ ಬ್ರಹ್ಮ = (ಅದು) " ಅನಾದಿಮತ್ಪರಬ್ರಹ್ಮ " ವಾಗಿರುವುದು. ಈ ವಾಕ್ಯವನ್ನು ಮೂರು ವಿಧಗಳಾಗಿ ಪದವಿಭಾಗಮಾಡಿ ಅರ್ಥಗಳನ್ನು ಹೇಳಿದ್ದಾರೆ :–(i) "(ತತ್) ಅನಾದಿಮತ್–ಪರಂಬ್ರಹ್ಮಪಿ ಎಂಬುದು ಮೊದಲನೆಯ ಪದವಿಭಾಗ. ಆಗ ಈ ವಾಕ್ಯಕ್ಕೆ ಆ " ಆದಿಯನ್ನೇ ಅಥವ ಆರಂಭಕಾಲವನ್ನೇ ಪಡೆಯದ ಪರಬ್ರಹ್ಮ ಅವ ಎಲ್ಲದಕ್ಕಿಂತಲೂ ಮೇಲಾದ ನಿರ್ಗುಣಬ್ರಹ್ಮ " ಎಂದು ಅರ್ಥವಾಗುತ್ತದೆ. (ii) "(ತತ್) ಅನಾದಿ–ಮತ್ಪರಂ–ಬ್ರಹ್ಮ " ಎಂಬುದು ಎರಡನೆಯ ಪದ ವಿಭಾಗ ಆಗ ಈ ವಾಕ್ಯಕ್ಕೆ " (ಅದು) ಆದಿ ಇಲ್ಲದ, ನನ್ನನ್ನೇ (ಪರಮಾತ್ಮನನ್ನೇ) ಅದಕ್ಕೆ ಪರನನ್ನಾಗಿ ಅಂದರೆ ಅಂತರಾತ್ಮನನ್ನಾಗಿ ಅಥವ ಯಜಮಾನನನ್ನಾಗಿ ಉಳ್ಳ ಮತ್ತು ಬೃಹತ್ತಾದ ಗುಣದಿಂದ ಕೂಡಿದವನಾಗಿ ಬ್ರಹ್ಮನೆಂದು ಕರೆಯಲ್ಪಡುವ ಪ್ರತ್ಯಗಾತ್ಮನು " ಎಂದು ಅರ್ಥವಾಗುತ್ತದೆ. (iii) " (ತತ್) ಪರಂಬ್ರಹ್ಮ ಅನಾದಿಮತ್" ಎಂಬುದು ಮೂರನೆಯ ಪದವಿಭಾಗ. ಆಗ ಈ ವಾಕ್ಯಕ್ಕೆ " (ಅದು) ಅಂದರೆ ಜ್ಞೇಯವು ಬೃಹತ್ತಾದ ಸಗುಣಬ್ರಹ್ಮನೇ ಆಗಿರುವನು; ಅವನು ಜನನ ಮರಣಗಳನ್ನು ಪಡೆಯುವ ಪ್ರಾಕೃತಿಕದೇಹಾದಿಗಳು ಮತ್ತು ಅವುಗಳಿಗೆ ಸಂಬಂಧಪಟ್ಟ ಕರ್ಮಗಳು ಇಲ್ಲದವನು " ಎಂದು ಅರ್ಥ ಮಾಡಬಹುದು. ಆದುದರಿಂದ ಬ್ರಹ್ಮ ಎಂಬ ಪದವು ನಿರ್ಗುಣಬ್ರಹ್ಮನನ್ನು ತಿಳಿಸುತ್ತದೆ ಎಂಬುದು ಮೊದಲನೆಯದು. ಈ ಅಧ್ಯಾಯದಲ್ಲಿ ಅದು ಶುದ್ಧ ಪ್ರತ್ಯಗಾತ್ಮನನ್ನು ತಿಳಿಸುತ್ತದೆ ಎಂಬುದು ಎರಡನೆಯ ಮತ. ಮತ್ತು ಅದು ಸಗುಣಬ್ರಹ್ಮನನ್ನು ತಿಳಿಸುತ್ತದೆ ಎಂಬುದು ಮೂರನೆಯ ಮತ. ಒಟ್ಟಿದಲ್ಲಿ ನಿರ್ಗುಣಬ್ರಹ್ಮ, ಶುದ್ಧಪ್ರತ್ಯಗಾತ್ಮ ಮತ್ತು ಸಗುಣಬ್ರಹ್ಮವೆಂಬ ಮೂರು ತತ್ವಗಳೂ ಆಯಾ ಮತಗಳ ಅಭಿಪ್ರಾಯಗಳ ಪ್ರಕಾರ ಆದಿ ಇಲ್ಲದವುಗಳು ಮತ್ತು ಬ್ರಹ್ಮವೆಂದು ಕರೆಯಲ್ಪಡುತ್ತವೆ.

(3) " (ತತ್) ಸತ್‌ನಉಚ್ಯತೇ ಅಸತ್‌ನಉಚ್ಯತೇ = (ಅದು) ಸತ್ ಎಂದೂ ಹೇಳಲ್ಪಡುವುದಿಲ್ಲ ಮತ್ತು ಅಸತ್ ಎಂದೂ ಹೇಳಲ್ಪಡುವುದಿಲ್ಲ. ಇಲ್ಲಿರುವ " ಸತ್–ಅಸತ್ " ಎಂಬ ಪದಗಳಿಗೂ ಬೇರೆ ಬೇರೆ ಅರ್ಥಗಳನ್ನು ಹೇಳಿದ್ದಾರೆ. (i) ಇಂದ್ರಿಯಗಳ ಮೂಲಕ ಯಾವುದನ್ನೂ " ಇದೆ " ಎಂದು ತಿಳಿಯುತ್ತೇವೆಯೋ ಅದು " ಸತ್ ", ಯಾವುದನ್ನು ಇಂದ್ರಿಯಾದಿಗಳ ಮೂಲಕ " ಇಲ್ಲ " ಎಂದು ತಿಳಿಯುತ್ತೇವೆಯೋ ಅದು " ಅಸತ್ " ಆದರೆ ಜ್ಞೇಯವು ಅಂದರೆ, ನಿರ್ಗುಣಬ್ರಹ್ಮವು ಇಂದ್ರಿಯಾದಿಗಳಿಗೆ ಗೋಚರವಾಗುವುದಿಲ್ಲವಾದುದರಿಂದ ಅದನ್ನು ನಾವು ಪ್ರತ್ಯಕ್ಷದಲ್ಲಿ ತಿಳಿಯುವಹಾಗೆ " ಇದೆ " ಎಂದ ಹೇಳುವುದಕ್ಕಾಗುವುದಿಲ್ಲ. ಮತ್ತು ಅದು " ಇಲ್ಲ ಎಂಬ ಬುದ್ಧಿಗೆ ವಿಷಯವಾಗುವುದಿಲ್ಲವಾದುದರಿಂದ ಅದನ್ನು " ಇಲ್ಲ " ಎಂದು ಹೇಳುವುದಕ್ಕಾಗುವುದಿಲ್ಲ. ಇದು ಮೊದಲನೆಯ ಅಭಿಪ್ರಾಯ. (ii) " ಸತ್ " ಎಂದರೆ ಸದ್ವಸ್ತು ; ಅಸತ್ ಎಂದರೆ ಅಸದ್ವಸ್ತು. ಸದ್ವಸ್ತುಗಳು ಕಾರ್ಯವಾದ ಅವಸ್ಥೆಯಲ್ಲಿ ದೇವ ಮನುಷ್ಯ ಮೊದಲಾದ ನಾಮರೂಪಗಳನ್ನು ಪಡೆದಿರುತ್ತವೆ.

ಕಾರಣವೆಶೆಯಲ್ಲಿ ಅಂದರೆ ವಸ್ತುಗಳಿಗೆ ಪ್ರಳಯಾವಸ್ಥೆಯಲ್ಲಿ ನಾಮರೂಪಗಳು ಇಲ್ಲದಿರುವದರಿಂದ ಅದು ಅಸದ್ವಸ್ತು ಎನಿಸಿಕೊಳ್ಳುತ್ತವೆ. ಆದರೆ ಪ್ರತ್ಯಗಾತ್ಮನು ತನ್ನ ನಿಜಸ್ವರೂಪದಲ್ಲಿ ಈ ವಿಧವಾದ "ಸತ್ತೂ" ಅಲ್ಲ ಮತ್ತು "ಅಸತ್ತೂ" ಅಲ್ಲ; ಏಕೆಂದರೆ ಅವನು ನಾಮರೂಪಗಳನ್ನು ಪಡೆದಿರುವ ಶರೀರಕ್ಕಿಂತ ಬೇರೆಯಾದವನು ಮತ್ತು ನಾಮರೂಪವನ್ನು ಪಡೆಯದಿರುವ ಪ್ರಕೃತಿಗಿಂತ ಬೇರೆಯಾದವನು. ಇದು ಎರಡನೆಯ ಅಭಿಪ್ರಾಯ.(iii) ಶ್ರುತಿಯಲ್ಲಿ ಸಗುಣಬ್ರಹ್ಮನು "ಸತ್" ಅಲ್ಲ ಎಂದು ಹೇಳಿದೆ; ಅಂದರೇನು, ಅವನು ವಿಧ ವಿಧಗಳಾದ ಆಕಾರಗಳನ್ನು ಪಡೆದಿರುವ ಪೃಥ್ವೀ, ಜಲ, ತೇಜಸ್ಸು ಅಲ್ಲ. ಅವನ ಸ್ವರೂಪವು ಅವುಗಳಿಗಿಂತ ಬೇರೆಯಾಗಿಯೇ ಇರುವುದು. ಮತ್ತು ಅವನು "ಅಸತ್ತು" ಅಲ್ಲ ಎಂದೂ ಹೇಳಿದೆ; ಏಕೆಂದರೆ, ಅವನ ಸ್ವರೂಪವು ಯಾವ ಆಕಾರವನ್ನೂ ಪಡೆಯದಿರುವ ವಾಯು ಆಕಾಶಗಳಲ್ಲು ಅವುಗಳಿಗಿಂತ ಬೇರೆಯೇ ಆಗಿದೆ. ಇದು ಮೂರನೆಯ ಅಭಿಪ್ರಾಯ. ಒಟ್ಟಿನಲ್ಲಿ, ನಿರ್ಗುಣಬ್ರಹ್ಮ, ಶುದ್ಧ ಪ್ರತ್ಯಗಾತ್ಮ ಮತ್ತು ಸಗುಣಬ್ರಹ್ಮ ಈ ಮೂರು ತತ್ವಗಳೂ ಆಯಾ ಮತಗಳ ಅಭಿಪ್ರಾಯಗಳ ಪ್ರಕಾರ "ಸತ್" ಅಲ್ಲ ಮತ್ತು "ಅಸತ್" ಅಲ್ಲ ಎಂದು ಹೇಳಲ್ಪಟ್ಟಿದೆ.

**ಸರ್ವತಃ ಪಾಣಿಪಾದಂ ತತ್ಸರ್ವತೋಽ (ಽ) ಕ್ಷಿಶಿರೋಮುಖಂ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೩ ॥**

4. ತತ್‌ಸರ್ವತಃ ಪಾಣಿಪಾದಂ ಸರ್ವತಃ ಅಕ್ಷಿಶಿರೋಮುಖಂ ಸರ್ವತಃ ಶ್ರುತಿ ಮತ್ = ಆಜ್ಞೇಯವು ಎಲ್ಲೆಲ್ಲಿಯೂ ಕೈಕಾಲುಗಳನ್ನೂ, ಎಲ್ಲ ಕಡೆಗಳಲ್ಲಿಯೂ ಕಣ್ಣು, ತಲೆ, ಮುಖಗಳನ್ನೂ ಮತ್ತು ಎಲ್ಲೆಲ್ಲಿಯೂ ಕಿವಿಯನ್ನು ಉಳ್ಳದ್ದಾಗಿದೆ. ಅಂದರೇನು ? (i) ಆ ನಿರ್ಗುಣ ಬ್ರಹ್ಮವು ಎಲ್ಲಾ ಕಡೆಗಳಲ್ಲಿಯೂ ಕ್ಷೇತ್ರದ ಭಾಗಗಳಾದ ಕೈ, ಕಾಲು, ಕಣ್ಣು, ತಲೆ, ಮುಖ, ಕಿವಿಗಳನ್ನು ಪಡೆದಿರುವ ಹಾಗೆ ತೋರುತ್ತದೆ. ಇದು ಮೊದಲನೆಯ ಅಭಿಪ್ರಾಯ (ii) ಆ ಶುದ್ಧ ಪ್ರತ್ಯಗಾತ್ಮನು ತನ್ನ ನಿಜ ಸ್ವರೂಪದಲ್ಲಿ ಕೈ, ಕಾಲು, ನೇತ್ರ, ತಲೆ, ಮುಖ, ಕಿವಿ ಇವುಗಳ ಮೂಲಕ ಮಾಡಬಲ್ಲ ಎಲ್ಲಾ ಕೆಲಸಗಳನ್ನೂ ತಾನಾಗಿಯೇ ಅವುಗಳ ಸಹಾಯವಿಲ್ಲದೆಯೇ ಮಾಡ ಬಲ್ಲನು. ಇದು ಎರಡನೆಯ ಅಭಿಪ್ರಾಯ. (iii) ಆ ಸಗುಣ ಬ್ರಹ್ಮನು ಎಲ್ಲಾ ಸ್ಥಳಗಳಲ್ಲಿಯೂ ಕೈಗಳನ್ನೂ, ಕಾಲುಗಳನ್ನೂ, ಕಣ್ಣುಗಳನ್ನೂ, ತಲೆಗಳನ್ನೂ, ಮುಖಗಳನ್ನೂ, ಕಿವಿಗಳನ್ನೂ ತನ್ನ ವಿಶ್ವರೂಪದಲ್ಲಿ ಪಡೆದಿರುವನು. ಇದು ಮೂರನೆಯ ಅಭಿಪ್ರಾಯ. ಒಟ್ಟಿನಲ್ಲಿ, ನಿರ್ಗುಣ ಬ್ರಹ್ಮನಾಗಲೀ, ಪ್ರತ್ಯಗಾತ್ಮನಾಗಲೀ ಮತ್ತು ಸಗುಣ ಬ್ರಹ್ಮನಾಗಲೀ ಆಯಾ ಮತಗಳ ಅಭಿಪ್ರಾಯಗಳ ಪ್ರಕಾರ ಕೈಕಾಲು ಕಣ್ಣು ತಲೆ ಮುಖ ಕಿವಿಗಳನ್ನು ಎಲ್ಲೆಲ್ಲಿಯೂ ಪಡೆದಿದೆ. ಅಥವ ಪಡೆದಿದ್ದಾನೆ, ಎಂದು ಅರ್ಥ ಮಾಡಿದ್ದಾರೆ.

(5) (ತತ್) ಲೋಕೇ ಸರ್ವಂ ಆವೃತ್ಯತಿಷ್ಠತಿ = ಆಜ್ಞೇಯವು ಪ್ರಪಂಚದಲ್ಲಿ ಎಲ್ಲವನ್ನೂ ಆವರಿಸಿ ಇರುತ್ತದೆ. ಅಂದರೇನು ? (i) ಆ ನಿರ್ಗುಣ-ಬ್ರಹ್ಮವು ಜಗತ್ತಿನಲ್ಲಿ ಪ್ರಾಣಿ ಸಮೂಹದಲ್ಲಿ ಎಲ್ಲವನ್ನೂ ಚೆನ್ನಾಗಿ ವ್ಯಾಪಿಸಿಕೊಂಡು ಇರುವುದು ; ಇದು ಮೊದಲನೆಯ ಅಭಿಪ್ರಾಯ. (ii) ಆ ಶುದ್ಧ ಪ್ರತ್ಯಗಾತ್ಮನು ಲೋಕದಲ್ಲಿರುವ ಯಾವ ಪದಾರ್ಥವನ್ನಾಗಲೀ ವ್ಯಾಪಿಸಿಕೊಂಡು ಇರುತ್ತಾನೆ ; ಇದು ಎರಡನೆಯ ಅಭಿಪ್ರಾಯ. (iii) ಆ ಸಗುಣಬ್ರಹ್ಮನು ಪ್ರಪಂಚದಲ್ಲಿರುವ ಎಲ್ಲಾ ಪದಾರ್ಥಗಳನ್ನೂ ಒಳಗೂ ಹೊರಗೂ ಆವರಿಸಿ ವ್ಯಾಪಿಸಿದ್ದಾನೆ ; ಇದು ಮೂರನೆಯ ಅಭಿಪ್ರಾಯ. ಅಂತುಜ್ಞೇಯು ಸಕಲ ವಸ್ತುಗಳನ್ನೂ ಪ್ರವೇಶಿಸಿದೆ.

**ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃಚ ॥ ೧೪ ॥**

(6) (ತತ್) ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ = ಆಜ್ಞೇಯವು ಎಲ್ಲಾ ಇಂದ್ರಿಯಗಳ ಗುಣಗಳಿಂದ ಪ್ರಕಾಶವಾಗಿರುವುದು ಆದರೆ ಎಲ್ಲಾ ಇಂದ್ರಿಯಗಳನ್ನೂ ಕೂಡ ಬಿಟ್ಟು ಇರುವುದು. ಅಂದರೇನು ? (i) ನಿರ್ಗುಣಗಳನ್ನೂ ಬ್ರಹ್ಮವು ಎಲ್ಲಾ ಇಂದ್ರಿಯಗಳ ಅಂದರೆ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ ಇವುಗಳ ಗುಣಗಳಿಂದ ಕೂಡಿರುವಂತೆ ತೋರುವುದು ; ಆದರೆ ಅದು ನಿಜವಾಗಿ ಯಾವ ಇಂದ್ರಿಯಗಳನ್ನೂ ಮತ್ತು ಅವುಗಳ ಗುಣಗಳನ್ನೂ ಪಡೆದಿಲ್ಲ ; ಅವುಗಳ ಸಂಬಂಧವಿಲ್ಲದೆಯೇ ಇರುವುದು. ಇದು ಮೊದಲನೆಯ ಅಭಿಪ್ರಾಯ. (ii) ಪ್ರತ್ಯಗಾತ್ಮನು ಬದ್ಧದೆಶೆಯಲ್ಲಿ ಸಕಲವಾದ ಇಂದ್ರಿಯ ಪ್ರವೃತ್ತಿಗಳಿಂದ ವಿಷಯಗಳನ್ನು ತಿಳಿದುಕೊಳ್ಳುವ ಶಕ್ತಿಯುಳ್ಳವನು. ಅವನು ಕರ್ಮವಶ್ಯವಲ್ಲದ ತನ್ನ ನಿಜ ಶುದ್ಧಸ್ವರೂಪದಲ್ಲಿ ಯಾವ ಇಂದ್ರಿಯಗಳ ಸಂಬಂಧವನ್ನೂ ಪಡೆಯದಿದ್ದರೂ ಅವುಗಳ ಅಪೇಕ್ಷೆ ಇಲ್ಲದೆಯೇ ಸ್ವಭಾವದಿಂದಲೇ ಎಲ್ಲವನ್ನೂ ಅರಿಯುವ ಶಕ್ತಿಯುಳ್ಳವನು. ಇದು ಎರಡನೆಯ ಅಭಿಪ್ರಾಯ. (iii) ಸಗುಣಬ್ರಹ್ಮನು ಎಲ್ಲಾ ಇಂದ್ರಿಯಗಳೂ ಮತ್ತು ಶಬ್ದಾದಿ ಗುಣಗಳೂ ಇವುಗಳನ್ನು ಪ್ರಕಾಶಪಡಿಸುವನು ; ಆದರೆ ಅವನು ಪ್ರಕೃತಿಯಿಂದ ಉಂಟಾಗಿರುವ ಈ ಎಲ್ಲಾ ಇಂದ್ರಿಯಗಳನ್ನೂ

ಪಡೆದಿಲ್ಲ. ಇದು ಮೂರನೆಯ ಅಭಿಪ್ರಾಯ. ಒಟ್ಟಿನಲ್ಲಿ ಜ್ಞೇಯವು ನಿರ್ಗುಣಬ್ರಹ್ಮವಾಗಲಿ, ಶುದ್ಧ ಪ್ರತ್ಯಗಾತ್ಮನಾಗಲಿ ಅಥವ ಸಗುಣಬ್ರಹ್ಮನಾಗಲಿ ಆಯಾ ಮತಗಳ ಅಭಿಪ್ರಾಯಗಳ ಪ್ರಕಾರ ಯಾವ ಇಂದ್ರಿಯಗಳನ್ನು ಪಡೆಯದಿದ್ದಾಗ್ಯೂ ಇಂದ್ರಿಯಗಳ ಗುಣಗಳನ್ನು ಪ್ರಕಾಶಿಸುವ ಹಾಗೆ ತೋರುತ್ತದೆ ಅಥವ ಪ್ರಕಾಶಿಸುತ್ತಾನೆ.

(7) (ತತ್) ಅಸಕ್ತಂ ನಿರ್ಗುಣಂ ಸರ್ವಭೃತ್ ಏವ ಚ ಗುಣಭೋಕ್ತೃ = ಆ ಜ್ಞೇಯವು ಅಸಕ್ತವಾಗಿದ್ದಾಗ್ಯೂ, ನಿರ್ಗುಣವಾಗಿದ್ದಾಗ್ಯೂ ಎಲ್ಲವನ್ನೂ ಧರಿಸುವುದು ಮತ್ತು ಗುಣಗಳನ್ನೂ ಅನುಭವಿಸುತ್ತಿರುವುದು. ಅಂದರೇನು ? (i) ನಿರ್ಗುಣಬ್ರಹ್ಮವು ನಿಜವಾಗಿ ಯಾವುದೊಂದರಲ್ಲಿಯೂ ಅಭಿಮಾನವನ್ನು ಪಡೆದಿಲ್ಲ ಮತ್ತು ಎಲ್ಲಾ ಗುಣಗಳನ್ನೂ ಮೀರಿದೆ; ಆದಾಗ್ಯೂ ಅದು ತೋರಿಕೆಯ ಜಗತ್ತಿನಲ್ಲಿ ಇರುವವೆಲ್ಲಕ್ಕೂ ಅವಲಂಬನವಾಗಿದೆ. ಅದು ಎಲ್ಲೆಲ್ಲಿಯೂ " ಇದೆ " ಎಂಬ ಬುದ್ಧಿಯಿಂದ ಕೂಡಿದೆ. ಹಾಗೆಯೇ ನಿರ್ಗುಣಬ್ರಹ್ಮವು ಸತ್ವರಜಸ್ತಮೋ ಗುಣಗಳಿಂದ ಕೂಡಿಲ್ಲದೆ ನಿರ್ಗುಣವಾಗಿದ್ದಾಗ್ಯೂ ಆ ಗುಣಗಳನ್ನು ಅನುಭವಿಸುವ ಹಾಗೆ ತೋರುವುದು. ಇದು ಮೊದಲನೆಯ ಅಭಿಪ್ರಾಯ. (ii) ಶುದ್ಧ ಪ್ರತ್ಯಗಾತ್ಮನು ನಿಜಸ್ವರೂಪದಲ್ಲಿ ದೇವಾದಿ ಶರೀರಗಳಲ್ಲಿ ಅಭಿಮಾನವನ್ನು ಪಡೆದಿಲ್ಲದಿದ್ದಾಗ್ಯೂ ಈ ದೇವಾದಿಶರೀರಗಳನ್ನು ಧರಿಸುವ ಶಕ್ತಿಯುಳ್ಳವನು. ಮತ್ತು ಅವನಿಗೆ ಸ್ವಭಾವದಲ್ಲಿ ಸತ್ವರಜಸ್ತಮೋಗುಣಗಳು ಇಲ್ಲದಿದ್ದಾಗ್ಯೂ ಅವನು ಪ್ರಕೃತಿಯ ಆಯಾಗುಣಗಳನ್ನು ಅನುಭವಿಸುವ ಸಾಮರ್ಥ್ಯವುಳ್ಳವನು ಇದು ಎರಡನೆಯ ಅಭಿಪ್ರಾಯ. (iii) ಸಗುಣಬ್ರಹ್ಮನಿಗೆ ಪುಣ್ಯಪಾಪಗಳ ವಾಸನೆ ಇರುವುದಿಲ್ಲ ; ಆದಾಗ್ಯೂ ಸಮಸ್ತವನ್ನೂ ಹೊತ್ತುಕೊಂಡಿರುವನು. ಮತ್ತು ಅವನಿಗೆ ಪ್ರಾಕೃತಿಕ ಸತ್ವರಜಸ್ತಮೋಗುಣಗಳಿಲ್ಲದಿದಾಗ್ಯೂ ಅವನು ಜ್ಞಾನ, ಬಲ, ಆನಂದ ಮೊದಲಾದ ಅನೇಕ ಕಲ್ಯಾಣಗುಣಗಳನ್ನು ಅನುಭವಿಸುತ್ತಿರುವನು. ಇದು ಮೂರನೆಯ ಅಭಿಪ್ರಾಯ. ಹೀಗೆ ಆಯಾ ಮತಗಳ ಅಭಿಪ್ರಾಯಗಳ ಪ್ರಕಾರ ಜ್ಞೇಯವು ನಿರ್ಗುಣಬ್ರಹ್ಮವಾಗಲಿ, ಶುದ್ಧ ಪ್ರತ್ಯಗಾತ್ಮನಾಗಲಿ ಅಥವ ಸಗುಣಬ್ರಹ್ಮನಾಗಲಿ ಅದು ಅಸಕ್ತ ಮತ್ತು ನಿರ್ಗುಣವಾಗಿದ್ದಾಗ್ಯೂ ಸರ್ವಭೃತ್ ಮತ್ತು ಗುಣಭೋಕ್ತೃವಾಗಿರುವುದು.

**ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥ ೧೫ ॥**

(8) ಚ (ತತ್) ಭೂತಾನಾಂ ಬಹಿಃ ಅಂತಃ = ಮತ್ತು (ಅದು) ಭೂತಗಳ ಹೊರಗೂ ಒಳಗೂ ಇದೆ. ಅಂದರೇನು ? (i) ನಿರ್ಗುಣಬ್ರಹ್ಮವು ಸಜೀವ ನಿರ್ಜೀವ ಪದಾರ್ಥಗಳಿಂದ ಕೂಡಿದ ತೋರಿಕೆಯ ಪ್ರಪಂಚಕ್ಕೆ ಸಂಬಂಧಪಟ್ಟಿಲ್ಲ. ಆದುದರಿಂದ ಅದು ಭೂತಗಳ ಹೊರಗೆ ಇದೆ. ಆದಾಗ್ಯೂ ಅದು ತೋರಿಕೆಯ ಪ್ರಪಂಚದ ಭೂತಗಳಿಗೆ ಆಶ್ರಯವು ; ಆದುದರಿಂದ ಅದು ಭೂತಗಳ ಒಳಗೆ ಇದೆ. ಇದು ಮೊದಲನೆಯ ಅಭಿಪ್ರಾಯ. (ii) ಶುದ್ಧಪ್ರತ್ಯಗಾತ್ಮನು ತನ್ನ ನಿಜ ಸ್ವರೂಪದಲ್ಲಿ ಪೃಥಿವೀ ಮೊದಲಾದ ತ್ರಿಗುಣದ್ರವ್ಯಗಳಿಂದ ಉಂಟಾದ ಭೂತಗಳನ್ನು ಬಿಟ್ಟು ಆಚೆ ಇರುವನು ; ಆದರೆ ಬದ್ಧದೆಶೆಯಲ್ಲಿ ಅವನು ಎಲ್ಲಾ ಭೂತಗಳನ್ನೂ ಶರೀರವಾಗಿ ಪಡೆದು ಅವುಗಳೊಳಗೆ ಅಂತರ್ಯಾಮಿಯಾಗಿ ಇರುವನು. ಇದು ಎರಡನೆಯ ಅಭಿಪ್ರಾಯ (iii) ಸಗುಣಬ್ರಹ್ಮನು ಎಲ್ಲಾ ಪ್ರಾಣಿಗಳ ಹೊರಗೆ ಇರುವನು. ಆದರೆ ಅವುಗಳ ಒಂದೊಂದರೊಳಗೂ ಅಂತರ್ಯಾಮಿಯಾಗಿಯೂ ಪ್ರವೇಶಿಸಿ ಇರುವನು. ಇದು ಮೂರನೆಯ ಅಭಿಪ್ರಾಯ. ಒಟ್ಟಿನಲ್ಲಿ ಯಾವುದು ಎಲ್ಲೆಲ್ಲಿಯೂ ಇದೆಯೋ ಅದು ಒಂದು ವಸ್ತುವಿನ, ಒಳಗೂ ಹೊರಗೂ ಇರಲೇಬೇಕು.

(9) ಚ (ತತ್) ಚರಂ ಅಚರಂ ಏವ = ಮತ್ತು (ಅದು) ಚರರೂಪವಾಗಿಯೂ ಇದೆ ಮತ್ತು ಅಚರರೂಪವಾಗಿಯೂ ಇದೆ ಮತ್ತು ಅಚರರೂಪವಾಗಿಯೂ ಇದೆ. ಅಂದರೇನು ? (i) ನಿರ್ಗುಣಬ್ರಹ್ಮವು ಚಲಿಸುವ ಮತ್ತು ಚಲಿಸದಿರುವ ಎಲ್ಲ ಭೂತಪ್ರಾಣಿಗಳ ರೂಪಗಳಿಂದ ತೋರಿಸಿಕೊಳ್ಳುತ್ತದೆ. ಇದು ಮೊದಲನೆಯ ಅಭಿಪ್ರಾಯ. (ii) ಶುದ್ಧ ಪ್ರತ್ಯಗಾತ್ಮನು ತನ್ನ ನಿಜಸ್ವರೂಪದಲ್ಲಿ ಯಥೇಚ್ಛಾ ವಿಹಾರಗಳಲ್ಲಿ ಸಂಚಾರ ಮಾಡುವುದಿಲ್ಲ. ಆದರೆ ಬದ್ಧದೆಶೆಯಲ್ಲಿ ಅನೇಕ ಶರೀರಗಳೊಡನೆ ಕೂಡಿದ್ದು ತನ್ಮೂಲಕ ಸಂಚಾರಮಾಡುವನು. ಇದು ಎರಡನೆಯ ಅಭಿಪ್ರಾಯ. (iii) ಸಗುಣಬ್ರಹ್ಮನು ಸರ್ವದಾಗುಣಪೂರ್ಣನಾಗಿರುವುದರಿಂದ ತನ್ನ ಸರ್ವಜ್ಞತ್ವಾದಿ ಗುಣಗಳಿಂದ ಯಾವಾಗಲೂ ಚಲಿಸದೇ ಇರುವವನು. ಆದರೆ ಸರ್ವದೇಶಗಳಲ್ಲಿಯೂ ಸಂಚರಿಸುವವನು ಅವನೇ. ಇದು ಮೂರನೆಯ ಅಭಿಪ್ರಾಯ. ಒಟ್ಟಿನಲ್ಲಿ ಕ್ಷೇತ್ರಜ್ಞನು ಚರನೂ ಹೌದು ಅಚರನೂ ಹೌದು ;

(10) (ತತ್) ಸೂಕ್ಷ್ಮತ್ವಾತ್ ಅವಿಜ್ಞೇಯಂ = (ಅದು) ಸೂಕ್ಷ್ಮವಾಗಿರುವುದರಿಂದ ಅದನ್ನು ತಿಳಿದುಕೊಳ್ಳಲು ಆಗುವುದಿಲ್ಲ. ಅಂದರೇನು ? ಜ್ಞೇಯವು ನಿರ್ಗುಣಬ್ರಹ್ಮನಾಗಿರಲಿ, ಶುದ್ಧ ಪ್ರತ್ಯಗಾತ್ಮನಾಗಿರಲಿ ಅಥವ ಸಗುಣ ಬ್ರಹ್ಮನಾಗಿರಲಿ ಅದನ್ನು ಅಥವ ಅವನನ್ನು ತಿಳಿದುಕೊಳ್ಳಲು ಆಗುವುದಿಲ್ಲ. ಏಕೆಂದರೆ ನಿರ್ಗುಣಬ್ರಹ್ಮವು ಮನಸ್ಸು ಮತ್ತು ಇಂದ್ರಿಯಗಳು ಗ್ರಹಿಸಲಾರದಷ್ಟು ಅತ್ಯಂತ ಸೂಕ್ಷ್ಮವಾಗಿರುವುದು. ಹಾಗೆಯೇ ಶುದ್ಧ ಪ್ರತ್ಯಗಾತ್ಮನೂ ಕೂಡ ಸರ್ವಜ್ಞನಾಗಿ ಸರ್ವಶಕ್ತಿಯಾಗಿ

ಅತಿಸೂಕ್ಷ್ಮನಾಗಿಯೇ ಇರುವನು; ಅವನನ್ನೂ ಕೂಡ ಇಂದ್ರಿಯಾದಿಗಳಿಂದ ತಿಳಿಯಲಾಗುವುದಿಲ್ಲ. ಸಗುಣ ಬ್ರಹ್ಮನೂ ಕೂಡ ಬಹಳ ಸೂಕ್ಷ್ಮನಾಗಿರುವುದರಿಂದ ಅವನನ್ನು ಸಾಧಾರಣವಾದ ಬಹುಮಂದಿ ಜನರು ತಮ್ಮ ಪ್ರಾಕೃತವಾದ ಚಕ್ಷುರಾದಿಗಳಿಂದ ತಿಳಿದುಕೊಳ್ಳಲಾರರು. ಒಟ್ಟಿನಲ್ಲಿ ಕ್ಷೇತ್ರಜ್ಞನನ್ನು ಯಾರೂ ಇಂದ್ರಿಯಾದಿಗಳಿಂದ ಪರೀಕ್ಷಿಸಲಾರರು.

(11) ಚ ತತ್ ದೂರಸ್ಥಂ ಅಂತಿಕೇಚ = ಮತ್ತು ಅದು ದೂರವಾಗಿದೆ ಮತ್ತು ಅತೀಸಮೀಪದಲ್ಲಿದೆ. ಅಂದರೇನು ? (i) ನಿರ್ಗುಣಬ್ರಹ್ಮವು ಸರ್ವವ್ಯಾಪಿಯಾಗಿ ಸರ್ವರ ಆತ್ಮವಾಗಿರುವದರಿಂದ " ಇದೆಲ್ಲವೂ ಆತ್ಮನೇ–ಇದೆಲ್ಲವೂ ಬ್ರಹ್ಮವೇ " ಎಂಬ ಸಾಕ್ಷಾತ್ಕಾರವನ್ನು ಪಡೆದಿರುವ ಜ್ಞಾನಿಗಳಿಗೆ ಅತಿ ಸಮೀಪದಲ್ಲಿದೆ. ಆದರೆ ಅಜ್ಞಾನಿಗಳು ಅದನ್ನು ಸಾಕ್ಷಾತ್ಕರಿಸಲಾರರಾದುದರಿಂದ ಅದು ಅವರಿಗೆ ದೂರವಾಗಿದೆ ಇದು ಮೊದಲನೆಯ ಅಭಿಪ್ರಾಯ. (ii) ಶುದ್ಧಪ್ರತ್ಯಗಾತ್ಮನು ಅಮಾನಿತ್ವವೇ ಮೊದಲಾದ ಗುಣಗಳನ್ನು ಪಡೆಯದೆ ವಿಪರೀತ ಗುಣಗಳನ್ನು ಆಚರಿಸುವ ಮನುಷ್ಯರಿಗೆ ಅವರ ದೇಹದಲ್ಲಿದ್ದಾಗ್ಯೂ ಕೂಡ ಅವರಿಗೆ ದೂರದಲ್ಲಿಯೇ ಇರುತ್ತಾನೆ. ಆದರೆ ಅಮಾನಿತ್ವಾದಿ ಗುಣಗಳನ್ನು ಆಚರಿಸಿ ಆತ್ಮಸಾಕ್ಷಾತ್ಕಾರವನ್ನು ಪಡೆಯುತ್ತಿರುವ ಯೋಗಿಗಳಿಗೆ ಮಾತ್ರ ಅತಿ ಸಮೀಪದಲ್ಲಿಯೇ ಇರುವನು. ಇದು ಎರಡನೆಯ ಅಭಿಪ್ರಾಯ. (iii) ಸಗುಣ ಬ್ರಹ್ಮನು ಅವನನ್ನು ಸಾಕ್ಷಾತ್ಕರಿಸಿದವರಿಗೆ ಸಮೀಪದಲ್ಲಿ ಇರುವನು; ಅವ ಅವನನ್ನು ಸಾಕ್ಷಾತ್ಕರಿಸದೆ ಇರುವವರಿಗೆಲ್ಲಾ ದೂರದಲ್ಲಿಯೇ ಇರುವನು. ಒಟ್ಟಿನಲ್ಲಿ ನಿರ್ಗುಣಬ್ರಹ್ಮನನ್ನಾಗಲಿ, ಶುದ್ಧ ಪ್ರತ್ಯಗಾತ್ಮನನ್ನಾಗಲಿ ಅಥವ ಸಗುಣ ಬ್ರಹ್ಮನನ್ನಾಗಲಿ, ಆಯಾ ಮತಗಳ ಅಭಿಪ್ರಾಯಗಳ ಪ್ರಕಾರ ಜ್ಞಾನಿಗಳು ಅಥವ ಭಕ್ತರು ಸಾಕ್ಷಾತ್ಕರಿಸಬಲ್ಲರು. ಯಯರು ಹೀಗೆ ಸಾಕ್ಷಾತ್ಕರಿಸುತ್ತಾರೆಯೋ ಅವರಿಗೆ ಜ್ಞೇಯವು ಸಮೀಪದಲ್ಲಿದೆ; ಮತ್ತು ಹಾಗೆ ಸಾಕ್ಷಾತ್ಕಾರ ಮಾಡದವರಿಗೆಲ್ಲಾ ಅದು ದೂರದಲ್ಲಿದೆ ಎಂದು ಹೇಳಿದೆ.

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ |**
**ಭೂತಭರ್ತೃ ಚ ತಜ್ಞೇಯಂ ಗ್ರಸಿಷ್ಣು ಪ್ರಭ|**
**ವಿಷ್ಣು ಚ || ೧೬**

(12) ಚ (ತತ್) ಅವಿಭಕ್ತಂ ಭೂತೇಷು ವಿಭಕ್ತಂ ಇವಚ ಸ್ಥಿತಂ = ಮತ್ತು (ಅದು) ವಿಭಾಗವಿಲ್ಲದ ಸ್ವರೂಪದಿಂದ ಕೂಡಿದ್ದಾಗ್ಯೂ ಭೂತಗಳಲ್ಲಿ ಬೇರೆ ಬೇರೆಯಾಗಿ ವಿಭಾಗವಾಗಿ ಇರುವಂತೆ ಇರುವುದು. ಅಂದರೇನು ? (i) ನಿರ್ಗುಣ ಬ್ರಹ್ಮವು ಆಕಾಶದಂತೆ ಅಖಂಡವಾಗಿ ಒಂದೇ ಆಗಿದ್ದಾಗ್ಯೂ ಕೂಡ ಸೃಷ್ಟಿಕಾಲದಲ್ಲಿ ಪ್ರಾಣಿಗಳ ಮತ್ತು ಭೂತಗಳ ಸಮೂಹದಲ್ಲಿ ಬೇರೆ ಬೇರೆಯಾಗಿ ಇರುವಹಾಗೆ ತೋರುವುದು. ಇದು ಮೊದಲನೆಯ ಅಭಿಪ್ರಾಯ. (ii) ಶುದ್ಧ ಪ್ರತ್ಯಗಾತ್ಮನಿಗೆ ಜ್ಞಾನವಮಾತ್ರವೇ ಸ್ವರೂಪವಾದುದರಿಂದ ಅವನನ್ನು ಪ್ರತ್ಯೇಕವಾಗಿ ಬೇರೆ ಮಾಡಲು ಆಗುವುದಿಲ್ಲ. ಆದರೆ ಬದ್ಧದೆಶೆಯಲ್ಲಿ ತಿಳಿಯದವರು ಅವನನ್ನು " ಇವನು ದೇವನು, ಇವನು ಮನುಷ್ಯನು " ಎಂದು ದೇವಾದಿರೂಪವಾಗಿ ವಿಂಗಡಿಸಲ್ಪಟ್ಟಹಾಗೆ ತೋರುತ್ತಾನೆ. ವಿಚಿತ್ರಗಳಾದ ಬೇರೆ ಬೇರೆ ಶರೀರಗಳನ್ನು ಪಡೆದಿರುವುದರಿಂದ ಪ್ರತ್ಯಗಾತ್ಮನು ಬೇರೆ ಬೇರೆ ಸ್ವರೂಪಗಳನು, ಪಡೆದು ಭಾಗ ಮಾಡಿದಹಾಗೆ ತೋರುತ್ತಾನೆ. ಇದು ಎರಡನೆಯ ಅಭಿಪ್ರಾಯ (iii) ಸಗುಣ ಬ್ರಹ್ಮನು ಸರ್ವಪ್ರಾಣಿಗಳಲ್ಲಿಯೂ ಅವುಗಳ ನಿಯಾಮಕನಾಗಿ ಒಬ್ಬನೇ ಆಗಿದ್ದಾಗ್ಯೂ ಅಂದರೆ ಭಿನ್ನನಾಗದೇ ಒಂದೇ ರೂಪವನ್ನು ಪಡೆದಿದ್ದಾಗ್ಯೂ ಅವನು ಅಜ್ಞರಿಗೆ ಭೂತಗಳಲ್ಲಿ ಬೇರೆ ಬೇರೆ ರೂಪಗಳುಳ್ಳವನೆಂದು ತೋರುವಹಾಗೆ ನಿಂತಿರುವನು. ಇದು ಮೂರನೆಯ ಅಭಿಪ್ರಾಯ. ಒಟ್ಟಿನಲ್ಲಿ ಜ್ಞೇಯವು ನಿಜಸ್ವರೂಪದಲ್ಲಿ ಅವಿಭಕ್ತವು ಆದರೆ ಭೂತಗಳಲ್ಲಿ ವಿಭಕ್ತವಾಗಿ ತೋರುವಹಾಗೆ ನಿಂತಿದೆ.

(13) ಚ (ತತ್) ಜ್ಞೇಯಂ ಭೂತ ಭರ್ತೃ ಗ್ರಸಿಷ್ಣು ಪ್ರಭವಿಷ್ಣು ಚ = ಮತ್ತು (ಅದು) ಜ್ಞೇಯವು ಭೂತಗಳನ್ನು ಧರಿಸುತ್ತಿರುವುದು, ತಿನ್ನಬಲ್ಲುದು, ಸೃಷ್ಟಿಸಬಲ್ಲುದು ಅಂದರೇನು? (i) ಜ್ಞಾನಿಗಳಿಂದ ಸಾಕ್ಷಾತ್ಕರಿಸಲ್ಪಡುವ ನಿಗುಣ ಬ್ರಹ್ಮವೇ ಸ್ಥಿತಿಕಾಲದಲ್ಲಿ ಭೂತಗಳನ್ನು ಧರಿಸಿ ಪಾಲನೆ ಮಾಡುವುದು. ಪ್ರಳಯಕಾಲದಲ್ಲಿ ಎಲ್ಲವನ್ನೂ ನುಂಗುವುದು ಮತ್ತು ಸೃಷ್ಟಿಕಾಲದಲ್ಲಿ ಪುನಃ ಎಲ್ಲವನ್ನೂ ಉಂಟುಮಾಡುವುದು ಎಂಬ ಸ್ವಭಾವ ಉಳ್ಳದ್ದಾಗಿ ತೋರುವುದು. ಇದು ಮೊದಲನೆಯ ಅಭಿಪ್ರಾಯ. (ii) ತನಗೆ ಶರೀರವಾದಂಥಾ ಮತ್ತು ತನಗಿಂತ ಬೇರೆಯಾದಂಥ ಪೃಥ್ವೀ ಮುಂತಾದ ಭೂತಗಳನ್ನು ಶುದ್ಧಪ್ರತ್ಯಗಾತ್ಮನು ತಿಳಿದುಕೊಳ್ಳಬಲ್ಲನು, ಪೋಷಿಸಬಲ್ಲನು, ನುಂಗಬಲ್ಲನು ಮತ್ತು ಅವುಗಳಲ್ಲಿ ವಿಕಾರಗಳನ್ನು ಉಂಟುಮಾಡಬಲ್ಲನು. ಇದು ಎರಡನೆಯ ಅಭಿಪ್ರಾಯ. (iii) ಸಗುಣಬ್ರಹ್ಮನು ಸರ್ವ ಪ್ರಾಣಿಗಳನ್ನು ರಕ್ಷಿಸುವನು, ಪ್ರಳಯಕಾಲದಲ್ಲಿ ಸತ್ವವನ್ನೂ ಭಕ್ಷಿಸುವನು. ಮತ್ತು ಸೃಷ್ಟಿಕಾಲದಲ್ಲಿ ಪುನಃ ಎಲ್ಲವನ್ನೂ ಸೃಷ್ಟಿಸುವನು ಎಂದು ಹೀಗೆ ತಿಳಿಯಬೇಕು. ಇದು ಮೂರನೆಯ ಅಭಿಪ್ರಾಯ. ಒಟ್ಟಿನಲ್ಲಿ ಜ್ಞೇಯವು ಭೂತಗಳನ್ನು ಧರಿಸಿರುತ್ತದೆ, ನಾಶ ಮಾಡುತ್ತದೆ. ಪುನಃ ಸೃಷ್ಟಿಸುತ್ತದೆ. ಮತ್ತು ಇವೆಲ್ಲವನ್ನೂ ತಿಳಿಯುತ್ತದೆ.

(Re-printed from Mysore Vysya Patrika
March 1959)

M. V. P. Press, Mysore.

# ಭಗವದ್ಗೀತಾ ಅಧ್ಯಾಯ ೧೩. ಪಾಠ ೪

**ಜ್ಯೋತಿಷಾಮಪಿ ತಜ್ಜ್ಯೋತಿಃ ತಮಸಃ**
**ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿಸರ್ವಸ್ಯ**
**ವಿಷ್ಠಿತಂ ‖ ೧೭ ‖**

(14) (ತತ್) ಜ್ಯೋತಿಷಾಂ ಅಪಿ ಜ್ಯೋತಿಃ ತಮಸಃ ಪರಂ ಉಚ್ಯತೇ=(ಅದು) ಜ್ಯೋತಿಸ್ಸಿನಿಂದ ಕೂಡಿದ ವಸ್ತುಗಳಿಗೆಲ್ಲಾ ಜ್ಯೋತಿಯಾಗಿರುವುದು. ಮತ್ತು ತಮಸ್ಸಿಗಿಂತ ಮೇಲಿನದಾಗಿರುವುದು ಎಂದು ಹೇಳಲ್ಪಡುತ್ತದೆ. ಅಂದರೇನು? (i) ನಿರ್ಗುಣಬ್ರಹ್ಮದ ಬೆಳಕಿನಿಂದ ಸೂರ್ಯ, ಚಂದ್ರ, ಅಗ್ನಿ ಮುಂತಾದ ಪದಾರ್ಥಗಳಿಗೆಲ್ಲಾ ತೇಜಸ್ಸು ಉಂಟಾಗುತ್ತದೆ. ಮತ್ತು ಅದು ಅಜ್ಞಾನವನ್ನು (ತಮಸ್) ಮೀರಿದುದಾಗಿಯೂ ಇರುವುದು ಎಂದು ಹೇಳಲ್ಪಟ್ಟಿದೆ. ಇದು ಮೊದಲನೆಯ ಅಭಿಪ್ರಾಯ. (ii) ಶುದ್ಧ ಪ್ರತ್ಯಗಾತ್ಮನು ತೇಜಸ್ಸಿನಿಂದ ಕೂಡಿದ ಎಲ್ಲಾ ವಸ್ತುಗಳಿಗಿಂತಲೂ ವಿಶೇಷವಾದ ತೇಜಸ್ಸಿನಿಂದ ಕೂಡಿರುವನು ಮತ್ತು ಸೂಕ್ಷ್ಮದೆಶೆಯಲ್ಲಿರುವ ಪ್ರಕೃತಿಗಿಂತಲೂ (ತಮಸಃ) ಉತ್ಕೃಷ್ಟನಾದವನು ಎಂದು ಹೇಳಲ್ಪಡುತ್ತದೆ. ಇದು ಎರಡನೆಯ ಅಭಿಪ್ರಾಯ. (iii) ಸಗುಣಬ್ರಹ್ಮನು ತೇಜಸ್ಸಿನಿಂದ ಕೂಡಿರುವ ಸೂರ್ಯಾದಿಗಳಿಗೂ ಕೂಡ ಪ್ರಕಾಶ ಶಕ್ತಿಯನ್ನು ಕೊಡುವನು. ಮತ್ತು ಸತ್ವರಜಸ್ತಮೋ ಗುಣಗಳಿಂದ ಕೂಡಿರುವ ಪ್ರಕೃತಿಯನ್ನು (ತಮಸಃ) ಮೀರಿಸಿದವನಾಗಿರುವನು ; ಅಂದರೆ ಅವುಗಳಿಗೆ ಬದ್ಧನಾಗಿರುವುದಿಲ್ಲ ಎಂದು ಶ್ರುತಿಯಲ್ಲಿ ಹೇಳಲ್ಪಡುತ್ತಾನೆ. ಒಟ್ಟಿನಲ್ಲಿ, ಜ್ಞೇಯವು ತೇಜಸ್ಸುಗಳಿಗೆಲ್ಲಾ ಮೂಲವಾದ ತೇಜಸ್ಸು. ಮತ್ತು ತಮಸ್ಸನ್ನು ಮೀರಿದ್ದು ಎಂದು ಹೇಳಲ್ಪಡುತ್ತದೆ.

(15) (ತತ್) ಜ್ಞಾನಂ, ಜ್ಞೇಯಂ, ಜ್ಞಾನಗಮ್ಯಂ, ಸರ್ವಸ್ಯ ಹೃದಿವಿಷ್ಠಿತಂ=(ಅದು) ಜ್ಞಾನಸ್ವರೂಪವುಳ್ಳದುದು, ಜ್ಞೇಯವಾದುದು, ಜ್ಞಾನಗಮ್ಯವಾದುದು ಮತ್ತು ಎಲ್ಲರ ಹೃದಯದಲ್ಲಿಯೂ ಇರುವಂಥಾದ್ದಾಗಿದೆ. ಅಂದರೇನು, (i) ನಿರ್ಗುಣಬ್ರಹ್ಮವು ಜ್ಞಾನಸ್ವರೂಪವಾದದ್ದು, ತಿಳಿಯಲ್ಪಡಲು ಯೋಗ್ಯವಾದದ್ದು ಮತ್ತು ತತ್ವಜ್ಞಾನ ಮಾತ್ರದಿಂದಲೇ ತಿಳಿಯಲ್ಪಡತಕ್ಕದ್ದು ಮತ್ತು ಎಲ್ಲಾ ಪ್ರಾಣಿಗಳ ಅಂತಃಕರಣಗಳಲ್ಲಿಯೂ ಇರುವಂಥಾದ್ದಾಗಿಯೂ ಇದೆ. ಇದು ಮೊದಲನೆಯ ಅಭಿಪ್ರಾಯ. (ii) ಶುದ್ಧಪ್ರತ್ಯಗಾತ್ಮನು ಜ್ಞಾನಸ್ವರೂಪನು ಅಥವ ಜ್ಞಾನಾಕಾರನು ಎಂದು ತಿಳಿಯತಕ್ಕದ್ದು (ಜ್ಞಾನಂ ಜ್ಞೇಯಂ) ; ಅಮಾನಿತ್ವಾದಿ ಜ್ಞಾನಾಭ್ಯಾಸಗಳಿಂದ ಹೊಂದತಕ್ಕವನು ಮತ್ತು ಸರ್ವರ ಹೃದಯದಲ್ಲಿಯೂ ಇರತಕ್ಕವನು. ಇದು ಎರಡನೆಯ ಅಭಿಪ್ರಾಯ. (iii) ಸಗುಣಬ್ರಹ್ಮನು ಜ್ಞಾನಪ್ರಕಾಶ ಸ್ವರೂಪನು, ಸಾಕ್ಷಾತ್ಕರಿಸಲ್ಪಡತಕ್ಕವನು, ಜ್ಞಾನದಿಂದ ಹೊಂದುವುದಕ್ಕೆ ಯೋಗ್ಯನು ಮತ್ತು ಸಮಸ್ತ ಪ್ರಾಣಿಗಳ ಹೃದಯಗಳಲ್ಲಿಯೂ ನಿಯಾಮಕನಾಗಿರುವನು. ಇದು ಮೂರನೆಯ ಅಭಿಪ್ರಾಯ. ಒಟ್ಟಿನಲ್ಲಿ, ಜ್ಞೇಯವು ಜ್ಞಾನಸ್ವರೂಪವಾಗಿಯೂ, ಸಾಕ್ಷಾತ್ಕರಿಸಲ್ಪಡತಕ್ಕುದಾಗಿಯೂ, ಜ್ಞಾನಾಭ್ಯಾಸಗಳಿಂದ ಹೊಂದಲ್ಪಡತಕ್ಕದ್ದಾಗಿಯೂ ಮತ್ತು ಎಲ್ಲರ ಹೃದಯಗಳಲ್ಲಿಯೂ ಸ್ಥಿರವಾಗಿ ನೆಲಸಿರತಕ್ಕುದಾಗಿಯೂ ಇದೆ.

**ಜ್ಞೇಯದ ಸ್ವರೂಪವನ್ನು ತಿಳಿಯಬೇಕು.**

ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಞಾತ್ವಾ ಅಮೃತ
ಮಶ್ನುತೇ ।

" ಯಾವುದನ್ನು ತಿಳಿದರೆ ಅಮೃತತ್ವವುಂಟಾಗುತ್ತದೆಯೋ ಆ ಜ್ಞೇಯ ಸ್ವರೂಪವನ್ನು ವಿವರಿಸುವೆನು " ಎಂದು ಶ್ರೀಕೃಷ್ಣನು ಅರ್ಜುನನಿಗೆ " ಜ್ಞೇಯದ " ಸ್ವರೂಪವನ್ನು ತಿಳಿಸುತ್ತಾನೆ. ಈ ಆರು ಶ್ಲೋಕಗಳಲ್ಲಿ " ಜ್ಞೇಯದ " ಸ್ವರೂಪವು ಹೃದಯಂಗಮವಾಗಿ, ಸ್ವಾರಸ್ಯವಾಗಿ, ಅತ್ಯುತ್ತಮವಾಗಿ ವರ್ಣಿಸಲ್ಪಟ್ಟಿದೆ. ಈ ಶ್ಲೋಕಗಳನ್ನು ವಿದ್ಯಾರ್ಥಿಗಳು ಕಂಠಪಾಠಮಾಡಿ ಅಡಿಗಡಿಗೆ ಅರ್ಥಸಹಿತ ಮನನ ಮಾಡುತ್ತಿದ್ದರೆ ಅವರಿಗೆ ಜ್ಞೇಯದ ಸ್ವರೂಪವು ತಾನಾಗಿಯೇ ಹೆಚ್ಚು ಹೆಚ್ಚಾಗಿ ಸಾಕ್ಷಾತ್ಕಾರವಾಗುವುದು. ಆದರೆ ನಮ್ಮ ದೇಶದ ಮಹಾತ್ಮರು ಈ ಜ್ಞೇಯದ ಸ್ವರೂಪವನ್ನು (1) ನಿರ್ಗುಣಬ್ರಹ್ಮ (2) ಶುದ್ಧಪ್ರತ್ಯಗಾತ್ಮ

ಅಥವ ಪರಿಶುದ್ಧಾತ್ಮ (3) ಸಗುಣಬ್ರಹ್ಮ (4) ಅವ್ಯಕ್ತ ಶುದ್ಧ ಅಖಂಡ ಚೈತನ್ಯ ಮತ್ತು (5) ಸಗುಣ–ನಿರ್ಗುಣಬ್ರಹ್ಮ ಎಂದು ಐದು ವಿಧವಾಗಿ ಸಾಕ್ಷಾತ್ಕರಿಸಿ ಆಯಾ ಸ್ವರೂಪ ಸಾಕ್ಷಾತ್ಕಾರದ ಪ್ರಕಾರ ಈ ಆರು ಶ್ಲೋಕಗಳಲ್ಲಿರುವ ಜ್ಞೇಯ ಸ್ವರೂಪದ ವರ್ಣನೆಗೆ ಅರ್ಥಗಳನ್ನು ಹೇಳಿರುವರು.

ಜ್ಞೇಯವನ್ನು ಸಾಕ್ಷಾತ್ಕರಿಸುವುದರಿಂದ ಉಂಟಾಗುವ ಫಲ ವೇನು ? ನಾವು ಈಗ ಈ ಪ್ರಪಂಚದಲ್ಲಿ ವಾಸಮಾಡುತ್ತಾ ವಿಧವಿಧವಾದ ಪದಾರ್ಥಗಳನ್ನೂ, ಕಾರ್ಯಗಳನ್ನೂ, ಚಲನೆ ಗಳನ್ನೂ ಮತ್ತು ಚಿತ್ತವೃತ್ತಿಗಳನ್ನೂ ತಿಳಿಯುತ್ತೇವೆ ಮತ್ತು ಅನುಭವಿಸುತ್ತೇವೆ. ಹಾಗೆ ಅವನ್ನು ತಿಳಿದು ಅನುಭವಿಸು ವುದರಿಂದ ಜನ್ಮಮರಣಗಳನ್ನು ಅಡಿಗಡಿಗೆ ಹೊಂದುತ್ತಾ ಪ್ರತಿ ಯೊಂದು ಜನ್ಮದಲ್ಲೂ ಅಲ್ಪ ಸುಖಗಳನ್ನೂ ಮತ್ತು ಬಹುದುಃಖ ಗಳನ್ನೂ ಅನುಭವಿಸುತ್ತೇವೆ. ಆದುದರಿಂದ ವಿವೇಕಿಯಾದ ಮನುಷ್ಯನಿಗೆ ಮಾತ್ರ ಯಾವಾಗ ತಾನು ಜನ್ಮ ಮರಣಗಳ ಬಂಧನದಿಂದ ಬಿಡುಗಡೆಯನ್ನು ಹೊಂದಿ ಯಾವ ವಿಧವಾದ ದುಃಖವೂ ಇಲ್ಲದ ಶಾಶ್ವತಾನಂದವನ್ನು ಪಡೆಯುವೆನು ? ಎಂಬ ಮೋಕ್ಷ ಇಚ್ಛೆಯು ಅಥವ ಆಶೆಯು ಉಂಟಾಗುವುದು. ಅಂಥಾ ಮುಮುಕ್ಷುವು ಅಂದರೆ ಅಮರತ್ವವನ್ನೂ, ಶಾಶ್ವತಾನಂದ ವನ್ನೂ ಬಯಸುವ ವಿವೇಕಿಯು " ಜ್ಞೇಯದ " ಸ್ವರೂಪವನ್ನು ಸಾಕ್ಷಾತ್ಕರಿಸಿದರೆ ತನ್ನ ಪವಿತ್ರವಾದ ಧ್ಯೇಯದ ಫಲವನ್ನು ಪಡೆಯುವನು. ಆದುದರಿಂದ ಕೆಲವು ಮುಮುಕ್ಷುಗಳು " ಜ್ಞೇಯ " ವನ್ನು ನಿರ್ಗುಣಬ್ರಹ್ಮ ಸ್ವರೂಪವಾಗಿ ಭಾವಿಸಿ ಈ ಗೀತಾಶ್ಲೋಕಗಳ ಮನನದಿಂದ ಮತ್ತು ಬ್ರಹ್ಮಧ್ಯಾನದಿಂದ ಅಮೃತತ್ವವನ್ನು ಸಾಧಿಸಿರುವರು. ಅಂದರೆ, ಜನ್ಮಮರಣಗಳ ಬಂಧನದಿಂದ ಬಿಡುಗಡೆಯನ್ನು ಹೊಂದಿ ಈ ಅಲ್ಪವಾದ ಸುಖ ದುಃಖ ದ್ವಂದ್ವಗಳಿಂದ ಮುಕ್ತರಾಗಿ ಶಾಶ್ವತಾನಂದವುಳ್ಳ ಅಮೃತತ್ವವನ್ನು ಅನುಭವಿಸಿದರು. ಇನ್ನು ಕೆಲವು ಮುಮುಕ್ಷು ಗಳು " ಜ್ಞೇಯ " ವನ್ನು " ಶುದ್ಧ ಪ್ರತ್ಯಗಾತ್ಮ ಅಥವ ಜೀವಾತ್ಮ " ಸ್ವರೂಪ ಎಂದು ಭಾವಿಸಿ ಈ ಗೀತಾಶ್ಲೋಕಗಳ ಮನನದಿಂದ ಮತ್ತು ಆತ್ಮಧ್ಯಾನದಿಂದ ಅಮೃತತ್ವವನ್ನು ಸಾಧಿ ಸಲು ನಿರೂಪಿಸಿರುವರು. ಮತ್ತೆ ಕೆಲವು ಮುಮುಕ್ಷುಗಳು " ಜ್ಞೇಯ " ವನ್ನು " ಸಗುಣಬ್ರಹ್ಮ " ಸ್ವರೂಪವೆಂದು ಭಾವಿಸಿ ಈ ಗೀತಾಶ್ಲೋಕಗಳ ಮನನದಿಂದ ಮತ್ತು ಸಗುಣ ಬ್ರಹ್ಮ ಧ್ಯಾನದಿಂದ ಕ್ರಮೇಣ ಅಮೃತತ್ವವನ್ನು ಸಾಧಿಸಿ ನಿರೂಪಿಸಿರುವರು. ಬೇರೆ ಕೆಲವು ಮುಮುಕ್ಷುಗಳು ಜ್ಞೇಯ ವನ್ನು " ಅಖಂಡ ಶುದ್ಧ ಚೈತನ್ಯ " ಸ್ವರೂಪವಾಗಿ ಭಾವಿಸಿ ಈ ಗೀತಾಶ್ಲೋಕಗಳ ಮನನದಿಂದ ಮತ್ತು ಅಖಂಡ ಶುದ್ಧ ಚೈತನ್ಯ ಧ್ಯಾನದಿಂದ ಅಮೃತತತ್ವವನ್ನು ಸಾಧಿಸಲು ಹೇಳಿರುವರು. ಕೊನೆಯದಾಗಿ, ಇನ್ನು ಕೆಲವು ಮುಮುಕ್ಷುಗಳು " ಜ್ಞೇಯ " ವನ್ನು " ಸಗುಣ–ನಿರ್ಗುಣ " ಸ್ವರೂಪವಾಗಿ ಭಾವಿಸಿ ಈ ಗೀತಾಶ್ಲೋಕಗಳ ಮನನದಿಂದ ಮತ್ತು ಸಗುಣ–ನಿರ್ಗುಣ ಬ್ರಹ್ಮ ಧ್ಯಾನದಿಂದ ಕ್ರಮೇಣ ಅಮೃತತತ್ವವನ್ನು ಸಾಧಿಸಲು ನಿರೂಪಿಸಿರುವರು. ಇದರಿಂದ ತಿಳಿಯಬೇಕಾದುದೇನು ? ನಾವು ಅಮೃತತ್ವವನ್ನು ಪಡೆಯಬೇಕಾದರೆ ಮೊದಲು ಮುಮುಕ್ಷು ಗಳಾಗಬೇಕು. ಎರಡನೆಯದಾಗಿ, ಜ್ಞೇಯವನ್ನು ನಿರ್ಗುಣ ಬ್ರಹ್ಮಸ್ವರೂಪವಾಗಿಯಾಗಲೀ, ಶುದ್ಧ ಪ್ರತ್ಯಗಾತ್ಮ ಸ್ವರೂಪ ವಾಗಿಯಾಗಲೀ, ಸಗುಣಬ್ರಹ್ಮ ಸ್ವರೂಪವಾಗಿಯಾಗಲೀ, ಅಖಂಡ ಶುದ್ಧ ಚೇತನ ಸ್ವರೂಪವಾಗಿಯಾಗಲೀ ಅಥವ ಸಗುಣ–ನಿರ್ಗುಣಬ್ರಹ್ಮ ಸ್ವರೂಪವಾಗಿಯಾಗಲೀ ಭಾವಿಸುತ್ತಾ ಅರ್ಥಸಹಿತ ಈ ಗೀತಾಶ್ಲೋಕಗಳನ್ನು ಮನನಮಾಡುತ್ತಾ ಆಯಾ ಜ್ಞೇಯದ ಸ್ವರೂಪವನ್ನು ಧ್ಯಾನಮಾಡಬೇಕು. ಮೂರನೆಯದಾಗಿ ನಮ್ಮ ಬಾಳಿನ ದಿನಚರಿಯಲ್ಲಿ ಹಿಂದೆ ವಿವರಿ ಸಿರುವ " ಅಮಾನಿತ್ವ—ಅದಂಭಿತ್ವ—ಅಹಿಂಸಾ ಇತ್ಯಾದಿ " ಜ್ಞಾನಾಭ್ಯಾಸಗಳನ್ನು ಆಚರಿಸಲು ಆರ್ಜವದಿಂದ ಪ್ರಯತಿ ಸುತ್ತಾ ಇದ್ದರೆ ಜ್ಞೇಯದ ನಿಜಸ್ವರೂಪವು ತಾನಾಗಿಯೇ ನಮಗೆ ಗೋಚರವಾಗುತ್ತದೆ.

ಇನ್ನು ಜ್ಞೇಯದ ಸ್ವರೂಪವನ್ನು ವಿವರಿಸುವ ಈ ಆರು ಗೀತಾಶ್ಲೋಕಗಳಿಗೆ ಆಚಾರ್ಯರು ಮತ್ತು ವಿದ್ವಾಂಸರು ಹೇಗೆ ನಿರ್ಗುಣಬ್ರಹ್ಮವಾಗಿ, ಶುದ್ಧಪ್ರತ್ಯಗಾತ್ಮನನ್ನಾಗಿ, ಸಗುಣಬ್ರಹ್ಮ ನನ್ನಾಗಿ, ಅವ್ಯಕ್ತ ಅಖಂಡ ಶುದ್ಧ ಚೈತನ್ಯವಾಗಿ ಅಥವ ಸಗುಣ–ನಿರ್ಗುಣಬ್ರಹ್ಮನನ್ನಾಗಿ ಅರ್ಥಮಾಡಿ ಉಪದೇಶಿಸಿರು ವರು ಎಂಬುದನ್ನು ಒಂದೊಂದಾಗಿ ತಿಳಿಯೋಣ. ಒಟ್ಟಿನಲ್ಲಿ ಈ ವಿಷಯವನ್ನು ಮಾತ್ರ ಮರೆಯಕೂಡದು. ಎಂದಿನವರೆಗೆ ಮನುಷ್ಯನು ತನ್ನನ್ನು ಶರೀರ, ಇಂದ್ರಿಯಗಳು ಮನಸ್ಸು, ಪ್ರಾಣ, ಬುದ್ಧಿ, ಅಹಂಕಾರ ಇವುಗಳ ಸಂಯೋಗದಿಂದ ಉಂಟಾದ ಕ್ಷೇತ್ರ ಮಾತ್ರವೇ ಪರಮತತ್ವವೆಂದು ತಿಳಿಯುತ್ತಾ ಪ್ರಪಂಚದ ಪದಾರ್ಥಗಳ, ಸಮಾಜ ವ್ಯಾಪಾರಗಳ ಮತ್ತು ಸನ್ನಿವೇಶಗಳ ಮೂಲಕ ಉಂಟಾಗುವ ಅಲ್ಪಕಾಲದ ಸುಖಗಳ ಲ್ಲಿಯೂ ಆಸಕ್ತನಾಗಿ ಬಹುದುಃಖಗಳನ್ನು ಅನುಭವಿಸುತ್ತಾ ಅವುಗಳಲ್ಲೇ ಮಗ್ನನಾಗಿರುವನೋ ಅದುವರೆಗೆ ಅವನಿಗೆ ಸುಖ ದುಃಖ ದ್ವಂದ್ವಗಳು ಇರುವುವು ಮತ್ತು ಹುಟ್ಟು ಸಾವುಗಳ ಬಂಧನವು ಇರುವುದು. ಅವನು ಅಮರನಾಗುವುದಿಲ್ಲ ಮತ್ತು ಅವನು ಆತ್ಮಾನಂದ, ಭಗವದಾನಂದ ಅಥವ ಬ್ರಹ್ಮಾನಂದ ವನ್ನು ಅನುಭವಿಸುವುದಿಲ್ಲ. ಆದರೆ ಅದೇ ಮನುಷ್ಯನು

ಮುಮುಕ್ಷುವಾಗಿ, ಜ್ಞಾನಿಯಾಗಿ, ಕ್ಷೇತ್ರಾತೀತವಾದ ಜ್ಞೇಯದ ಸ್ವರೂಪವನ್ನು ಯಾವ ರೂಪದಿಂದ ಬೇಕಾದರೂ ತಿಳಿದು ಈ ಗೀತಾಶ್ಲೋಕಗಳ ಮನನದಿಂದ ಧ್ಯಾನಮಾಡುತ್ತಾ, ಜ್ಞಾನಾಭ್ಯಾಸಗಳನ್ನು ಆಚರಿಸುತ್ತಾ ಇರುವವನಾದರೆ ಖಂಡಿತವಾಗಿ ಶಾಶ್ವತಾನಂದವನ್ನು ಅನುಭವಿಸುವ ಅಮೃತತ್ವವನ್ನು ಪಡೆಯುವನು.

## ಜ್ಞೇಯವು ನಿರ್ಗುಣಬ್ರಹ್ಮವು— ಮೊದಲನೆಯ ಅಭಿಪ್ರಾಯ.

ಅನಾದಿಮತ್ ಪರಂಬ್ರಹ್ಮ ಅಸತ್‌ನ ಸತ್‌ನ ಉಚ್ಯತೇ ॥ ೧೨ ॥

(1) ಸಮಸ್ತ ಉಪನಿಷತ್ತುಗಳಲ್ಲಿಯೂ ವಿಶೇಷಣಗಳು, ಧರ್ಮಗಳು ಅಥವ ಗುಣಗಳು ಇಲ್ಲದಿರುವ ಯಾವುದನ್ನು ನಾವು ಯೋಗಸಮಾಧಿ ಅಥವ ತುರಿಯಾವಸ್ಥೆಯಲ್ಲಿ ಸಾಕ್ಷಾತ್ಕರಿಸುತ್ತೇವೆಯೋ ಅದು ಪರಬ್ರಹ್ಮ ಎಂದು ವರ್ಣನೆ ಇದೆ. ಆದುದರಿಂದ ಜ್ಞೇಯವು " ನಿರ್ಗುಣಬ್ರಹ್ಮವು ". ಅದು ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಆಶ್ರಯವಾಗಿರುವುದರಿಂದ ಬ್ರಹ್ಮವೆಂದು ಕರೆಯಲ್ಪಡುತ್ತದೆ ಮತ್ತು ಅದು ಎಲ್ಲವನ್ನೂ ಮೀರಿ ಸರ್ವೋತ್ಕೃಷ್ಟವಾಗಿರುವುದರಿಂದ " ಪರಬ್ರಹ್ಮವು ".

(2) ಪರಬ್ರಹ್ಮವು ಯಾವಾಗಲೂ ಇರುವುದು; ಏಕೆಂದರೆ ಇದು ಕಾಲನಿಯಮಕ್ಕೆ ಒಳಪಟ್ಟಿಲ್ಲ. ಕಾಲಕ್ಕೆ ಬ್ರಹ್ಮವು ಅವಲಂಬನವಾಗಿದೆ ಮತ್ತು ಬ್ರಹ್ಮದಿಂದ ಕಾಲವುಂಟಾಗುತ್ತದೆ. ಅಂದರೇನು, ಕಾಲವುಂಟಾಗುವುದಕ್ಕೆ ಮುಂಚಿಯೇ ಬ್ರಹ್ಮವು ಇದೆ. ಆದುದರಿಂದ ಬ್ರಹ್ಮವು ಅನಾದಿ, ಅಂದರೆ ಆರಂಭಕಾಲವನ್ನೇ ಪಡೆದಿಲ್ಲ.

(3) ಪರಬ್ರಹ್ಮವನ್ನು ನಾವು " ಸತ್ " ಎಂದು ಹೇಳಲಾಗುವುದಿಲ್ಲ ಮತ್ತು " ಅಸತ್ " ಎಂದೂ ಹೇಳಲಾಗುವುದಿಲ್ಲ. ಇದು ಹೇಗೆ ಎಂಬುದನ್ನು ನಾವು ತಿಳಿಯಬೇಕು. " ಸತ್ " ಮತ್ತು " ಅಸತ್ " ಎಂಬ ಈ ಎರಡು ಪದಗಳೂ ನಾವು ನಮ್ಮ ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರಗಳ ಮೂಲಕ ತಿಳಿಯುತ್ತಿರುವ ಮತ್ತು ಅನುಭವಿಸುತ್ತಿರುವ ಪ್ರಪಂಚದಲ್ಲಿರುವ ಪದಾರ್ಥಗಳಿಗೆ ಅನ್ವಯಿಸುತ್ತವೆಯೇ ವಿನಹ ಪ್ರಪಂಚದ ಸ್ವರೂಪಕ್ಕಿಂತ ಬೇರೆಯಾದ ಸ್ವರೂಪವನ್ನು ಪಡೆದಿರುವ ಪರಬ್ರಹ್ಮ ಸ್ವರೂಪಕ್ಕೆ ಅನ್ವಯಿಸುವುದಿಲ್ಲ. ಮನುಷ್ಯನು ತನ್ನ ಇಂದ್ರಿಯಗಳು, ಮನಸ್ಸು, ಬುದ್ಧಿ. ಅಹಂಕಾರಗಳಮೂಲಕ ತಾನು ವಾಸಮಾಡುತ್ತಿರುವ ಪ್ರಪಂಚದಲ್ಲಿ ಕೆಲವು ಕಾಲವಿದ್ದು ಕೆಲವು ಕಾಲವಿಲ್ಲದಿರುವ, ಒಂದು ಕಡೆ ಇದ್ದು ಇನ್ನೊಂದು ಕಡೆ ಇಲ್ಲದಿರುವ ಮತ್ತು ಜಾತಿ ಕ್ರಿಯಾಗುಣಗಳ ಸಂಬಂಧವನ್ನು ಪಡೆದಿರುವ ಪದಾರ್ಥಗಳನ್ನು ಪ್ರತ್ಯಕ್ಷಿಸುತ್ತಾನೆ ಅಥವ ಅನುಭವಿಸುತ್ತಾನೆ. ಒಂದು ಕಾಲದಲ್ಲಿ ಒಂದು ಸ್ಥಳದಲ್ಲಿ ಕೆಲವು ವಸ್ತುಗಳನ್ನು ಇರುವ ಹಾಗೆ ಪ್ರತ್ಯಕ್ಷಿಸುತ್ತಾನೆ; ಇನ್ನು ಕೆಲವನ್ನು ಇಲ್ಲದ ಹಾಗೆ ಪ್ರತ್ಯಕ್ಷಿಸುತ್ತಾನೆ. ಉದಾಹರಣೆಗಾಗಿ, ಬೆಕ್ಕನ್ನು ಪ್ರತ್ಯಕ್ಷಿಸಿ "ಬೆಕ್ಕು ಇದೆ" ಎಂದು ತಿಳಿಯುತ್ತೇವೆ; ಅದೇ ಕಾಲದಲ್ಲಿ ಮನೆಯಲ್ಲಿ ಹುಲಿಯು ಇಲ್ಲದಿರುವುದನ್ನು ಪ್ರತ್ಯಕ್ಷಿಸಿ "ಹುಲಿಯು ಇಲ್ಲ" ಎಂದು ತಿಳಿಯುತ್ತೇವೆ. ಹೀಗೆ ಇಂದ್ರಿಯಾದಿಗಳ ಮೂಲಕ ಪ್ರತ್ಯಕ್ಷಿಸಿ ಯಾವ ವಸ್ತುವನ್ನು "ಅದು ಇದೆ" ಎಂದು ತಿಳಿಯುತ್ತೇವೆಯೋ ಅದು " ಸತ್ " ಮತ್ತು ಯಾವುದನ್ನು ಇಂದ್ರಿಯಾದಿಗಳ ಮೂಲಕ ಪ್ರತ್ಯಕ್ಷಿಸಿ "ಅದು ಇಲ್ಲ" ಎಂದು ಬುದ್ಧಿಯಲ್ಲಿ ತಿಳಿಯುತ್ತೇವೆಯೋ ಅದು "ಅಸತ್" ಪರಬ್ರಹ್ಮವು ಈ ವಿಧವಾದ ಸತ್ತೂ ಅಲ್ಲ, ಅಸತ್ತೂ ಅಲ್ಲ ; ಏಕೆಂದರೆ ಅದು ಇಂದ್ರಿಯಾದಿಗಳಿಗೆ ಗೋಚರವಾಗುವ ವಿಷಯವೇ ಅಲ್ಲ. ಯಾವುದು ಇಂದ್ರಿಯಾದಿಗಳ ಸೃಷ್ಟಿಗೆ ಕಾರಣವಾಗಿ ಅವುಗಳಿಗೆ ಪ್ರಕಾಶವನ್ನೂ, ಶಕ್ತಿಯನ್ನೂ ಉಂಟು ಮಾಡುತ್ತದೆಯೋ ಅದು ಇಂದ್ರಿಯಾದಿಗಳಿಗೆ ವಿಷಯವಾಗಿ ಯಾರಿಂದಲೂ ಪ್ರಪಂಚದ ವಸ್ತುಗಳಹಾಗೆ ಪ್ರತ್ಯಕ್ಷಿಸಲ್ಪಡಲು ಯೋಗ್ಯವಾಗಲಾರದು. ಬ್ರಹ್ಮಕ್ಕೆ ಗುಣವಿಲ್ಲ, ಜಾತಿ ಇಲ್ಲ ಮತ್ತು ಕ್ರಿಯೆಗಳ ಸಂಬಂಧವಿಲ್ಲ. ಆದುದರಿಂದ ಅದನ್ನೂ ಗುಣವಾಚಕ ಶಬ್ದಗಳಿಂದಲಾಗಲೀ, ಜಾತಿವಾಚಕ ಶಬ್ದಗಳಿಂದಾಗಲೀ ಮತ್ತು ಕ್ರಿಯಾವಾಚಕ ಶಬ್ದಗಳಿಂದಲಾಗಲೀ ತಿಳಿಸಲಾಗುವುದಿಲ್ಲ. ಒಟ್ಟಿನಲ್ಲಿ ಬ್ರಹ್ಮವನ್ನೂ, "ಅಸ್ತಿ–ಇದೆ" ಮತ್ತು "ನಾಸ್ತಿ–ಇಲ್ಲ" ಎಂದು ಹೇಳುವುದಕ್ಕೆ ಆಸ್ಪದವಿಲ್ಲ. ಅದು ಅದ್ವಿತೀಯವು; ಅಂದರೆ ಅದು ಇನ್ನೊಂದು ಯಾವ ವಸ್ತುವಿನ ಸಂಬಂಧವನ್ನೂ ಪಡೆದಿಲ್ಲ. ಅದು ಪ್ರಪಂಚದ ವಸ್ತುಗಳಹಾಗೆ "ಸತ್ ಮತ್ತು ಅಸತ್" ಆಗಿಲ್ಲದಿದ್ದಾಗ್ಯೂ, ಅದು ದೇಶ ಕಾಲ ನಿಯಮಗಳಿಗೆ ಒಳಪಡದೆ, ಯಾವಾಗಲೂ, ಎಲ್ಲೆಲ್ಲಿಯೂ "ಜ್ಞಾನದ ಸ್ವರೂಪವಾದ ಮಹಾ ಇರುವಿಕೆ" ಯಾಗಿ ಪ್ರಕಾಶಿಸುತ್ತಿದೆ.

**ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿ ಶಿರೋಮುಖಂ ।**
**ಸರ್ವತಃ ಶ್ರುತಿ ಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೩ ॥**

4. ಪರಬ್ರಹ್ಮವು " ಸತ್ ಅಲ್ಲ—ಅಸತ್ ಅಲ್ಲ " ಎಂದು ಹೇಳಲ್ಪಟ್ಟಿತು; ಅದರಿಂದ ಬ್ರಹ್ಮವೇ ಇಲ್ಲವೆಂದು

ತೀರ್ಮಾನ ಮಾಡಕೂಡದು, ಕಾರಣವೇನು? ಅದಕ್ಕೆ ಎಲ್ಲೆಲ್ಲಿಯೂ ಕೈ, ಕಾಲು, ಕಣ್ಣು, ಮುಖ, ಕಿವಿ ಎಂಬ ಉಪಾಧಿಗಳು ಇವೆ. ಹಾಗಾದರೆ, ಉಪಾಧಿಯೆಂದರೇನು? ಒಂದು ವಸ್ತುವು ಇನ್ನೊಂದು ವಸ್ತುವಿನಲ್ಲಿ ಸೇರದೆ ಅದರ ತಿಳಿವಳಿಕೆಯನ್ನು ಉಂಟುಮಾಡುವುದಕ್ಕೆ ಸಾಧನವಾದರೆ ಮೊದಲನೆಯ ವಸ್ತುವು ಎರಡನೆಯ ವಸ್ತುವಿಗೆ ಉಪಾಧಿಯು. ಮನುಷ್ಯನು ಹಗ್ಗವನ್ನೇ ಹಾವೆಂದು ತಿಳಿದಿರುವಾಗ ಹಾವು ಹಗ್ಗಕ್ಕೆ ಉಪಾಧಿಯು ; ಏಕೆಂದರೆ ಹಾವು ಹಗ್ಗಕ್ಕೆ ಸೇರಿಲ್ಲದಿದ್ದಾಗ್ಯೂ ಕೊನೆಯಲ್ಲಿ ಹಗ್ಗದ ತಿಳಿವಳಿಕೆಯನ್ನು ಉಂಟುಮಾಡುವುದಕ್ಕೆ ಸಾಧನವಾಗುತ್ತದೆ. ಹಾಗೆಯೇ ಎಲ್ಲಾ ಪ್ರಾಣಿಗಳ ಪ್ರತ್ಯೇಕವಾದ ಲೆಖ್ಖವಿಲ್ಲದ ಕೈಗಳೂ, ಕಾಲುಗಳೂ, ಕಣ್ಣುಗಳೂ, ಮುಖಗಳೂ ಮತ್ತು ಕಿವಿಗಳೂ ತಾವು ನಿಜವಾಗಿ ಇಲ್ಲದಿದ್ದಾಗ್ಯೂ ಕೂಡ ಉಪಾಧಿಗಳಾಗಿದ್ದು ಪರಬ್ರಹ್ಮದ ಇರುವಿಕೆಯನ್ನು ತೋರಿಸಿಕೊಡುತ್ತವೆ. ಅಂದರೇನು ಇಂದ್ರಿಯಾದಿಗಳ ವಿಷಯಗಳು "ಸತ್-ಅಸತ್" ಎಂದು ಕರೆಯಲ್ಪಟ್ಟು ಬ್ರಹ್ಮದ ಉಪಾಧಿಗಳಾಗಿ ಮಾತ್ರ ಇವೆ. ಹಾಗಾದರೆ ಅವು ಬ್ರಹ್ಮದಲ್ಲಿ ನಿಜವಾಗಿಯೂ ಇವೆಯೇ? ಎಂಬ ಪ್ರಶ್ನೆಗೆ ಮುಂದಿನ ಶ್ಲೋಕದಲ್ಲಿ ಉತ್ತರವನ್ನು ಕೊಟ್ಟಿದೆ.

5. ಕೈ, ಕಾಲು, ಕಣ್ಣು, ಮುಖ ಮತ್ತು ಕಿವಿ ಉಪಾಧಿಗಳು ಇರುವ ಕಡೆ ಮಾತ್ರ ಬ್ರಹ್ಮವು ಇದೆಯೇ? ಬೇರೆ ಕಡೆಗಳಲ್ಲಿ ಇಲ್ಲವೆ? ಎಂಬ ಸಂಶಯವು ಹುಟ್ಟುತ್ತದೆ. ಈ ಸಂದೇಹವನ್ನು ಪರಿಹರಿಸುವುದಕ್ಕಾಗಿ "ಬ್ರಹ್ಮವು ಲೋಕದಲ್ಲಿರುವ ಎಲ್ಲಾ ಸತ್-ಅಸತ್ ವಸ್ತುಗಳನ್ನೂ ಚೆನ್ನಾಗಿ ವ್ಯಾಪಿಸಿಕೊಂಡು ಇರುವುದು ಮತ್ತು ಅವುಗಳನ್ನೆಲ್ಲಾ ಉಪಾಧಿಯನ್ನಾಗಿ ಪಡೆದಿರುವುದು ಎಂದು ಹೇಳಿದೆ. ನಿಜವಾಗಿ ಬ್ರಹ್ಮವು ಎಲ್ಲೆಲ್ಲಿಯೂ ಇದೆ ; ಲೋಕದಲ್ಲಿರುವ ಎಲ್ಲಾ ವಸ್ತುಗಳೂ ಅದರ ಆಧಾರದ ಮೇಲೆ ನಿಂತು ಅದರ ಉಪಾಧಿಗಳಾಗಿ ಇವೆ.

**ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ |**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ || ೧೪ ||**

ನಿರ್ಗುಣ ಬ್ರಹ್ಮವು ಮಾತ್ರ ಸತ್ಯವಾದ ಅದ್ವಿತೀಯ ತತ್ವವು ; ಅದನ್ನು "ಇದೆ" ಎಂದು ತೋರಿಸಿಕೊಡುವ ಜಗತ್ತು ಅದಕ್ಕೆ ಉಪಾಧಿಯಾಗಿಯೇ ಹೊರತು ಅದು ಸತ್ಯವಾದ ತತ್ವವಲ್ಲ. ಹಾಗಾದದೆ ಪರಬ್ರಹ್ಮವು ಇವುಗಳನ್ನೆಲ್ಲಾ ಪಡೆದಿದೆ ಎಂದು ಹಿಂದಿನ ಶ್ಲೋಕದಲ್ಲಿ ಏಕೆ ಹೇಳಲ್ಪಟ್ಟಿತು? ವೇದಾಂತದಲ್ಲಿ ಮೊದಲು ಪ್ರಪಂಚವೂ, ಅದರಲ್ಲಿ ಅನೇಕ ಕ್ಷೇತ್ರಗಳೂ, ಆ ಕ್ಷೇತ್ರಗಳಲ್ಲಿ ಲೆಖ್ಖವಿಲ್ಲದಷ್ಟು ಕೈ, ಕಾಲು ಮುಂತಾದವುಗಳೂ ಉಪಾಧಿಗಳಾಗಿ ಇವೆಯೆಂದು ಹೇಳಿ, ಆಮೇಲೆ ನಿರ್ಗುಣ ಬ್ರಹ್ಮವು ಇವುಗಳಿಗೆಲ್ಲಾ ಅವಲಂಬನವಾಗಿದೆ ಎಂಬುದನ್ನು ತಿಳಿಸಿ, ಕ್ರಮೇಣ ಪ್ರಪಂಚಾದಿಗಳು ಸತ್ಯವಲ್ಲ-ಸುಳ್ಳು ಎಂಬುದನ್ನು ಸಕಾರಣವಾಗಿ ತೀರ್ಮಾನಿಸಿ, ಕೊನೆಯಲ್ಲಿ ಸಚ್ಚಿದಾನಂದ ನಿರ್ಗುಣ ಬ್ರಹ್ಮವೊಂದೇ ಸ್ವಯಂಪ್ರಕಾಶವಾದ ಸತ್ಯವಾದ ಇರುವಿಕೆಯು ಎಂದು ಉಪದೇಶ ಮಾಡಿದೆ. ಅಜ್ಞಾನಿಗಳಿಂದ ಪ್ರತ್ಯಕ್ಷಿಸಲ್ಪಡುವ ಈ ಪ್ರಪಂಚವು "ಅದ್ವಿತೀಯ ಬ್ರಹ್ಮವು ಇದೆ" ಎಂಬುದನ್ನು ತೋರಿಸಿಕೊಡುತ್ತದೆಯೇ ವಿನಹ ಅದು ಬ್ರಹ್ಮದ ಹಾಗೆ ಸತ್ಯವಲ್ಲ, ನಿಜವಲ್ಲ. ಕಾರಣವೇನು? ಬ್ರಹ್ಮಜ್ಞಾನಿಯು ಬ್ರಹ್ಮವನ್ನು ಸತ್ಯವನ್ನಾಗಿ ಸಾಕ್ಷಾತ್ಕರಿಸುತ್ತಾನೆ ; ಮತ್ತು ಉಪಾಧಿಯಾದ ಜಗತನ್ನು ಸತ್ಯವಲ್ಲದ್ದಾಗಿ ತಿಳಿಯುತ್ತಾನೆ. ಆದುದರಿಂದ ಜ್ಞಾನಿಗಳು ಸಾಕ್ಷಾತ್ಕರಿಸುವ ಸತ್ಯವಾದ ಬ್ರಹ್ಮವನ್ನು ಪಾರಮಾರ್ಥಿಕ ಅವಸ್ಥೆಯೆಂದು ಕರೆದಿದ್ದಾರೆ. ಅಜ್ಞಾನಿಗಳಿಗೆ ಬ್ರಹ್ಮದ ಪಾರಮಾರ್ಥಿಕ ಅವಸ್ಥೆಯು ಸಾಕ್ಷಾತ್ಕಾರವಾಗುವುದಿಲ್ಲ. ಆದರೆ ಅವರು ಬ್ರಹ್ಮವನ್ನು "ಇದೆ" ಎಂದು ತೋರಿಸುವ ಉಪಾಧಿಯಾದ ಪ್ರಪಂಚವನ್ನೂ, ಅದರಲ್ಲಿರುವ ಜಾತಿ ಗುಣ ಕ್ರಿಯಾದಿಗಳಿಂದ ಕೂಡಿದ ಚರಾಚರ ವಸ್ತುಗಳೆಲ್ಲವನ್ನೂ ಪ್ರತ್ಯಕ್ಷಿಸಿ ಅನುಭವಿಸುತ್ತಾರೆ. ಇವರು ಪ್ರತ್ಯಕ್ಷಿಸುವ ಪ್ರಪಂಚಾದಿಗಳನ್ನೇ ಬ್ರಹ್ಮದ "ವ್ಯಾವಹಾರಿಕ ಅವಸ್ಥೆ" ಎಂದು ಕರೆದಿದ್ದಾರೆ. ಈ ಶ್ಲೋಕದಲ್ಲಿ ಬ್ರಹ್ಮದ ಪಾರಮಾರ್ಥಿಕ ಅವಸ್ಥೆಯನ್ನೂ ಮತ್ತು ಬ್ರಹ್ಮದ ವ್ಯಾವಹಾರಿಕ ಅವಸ್ಥೆಯನ್ನೂ ಹೋಲಿಸಿ ಅವು ಒಂದಕ್ಕೊಂದಕ್ಕೆ ಹೇಗೆ ವಿರೋಧವಾಗಿವೆ ಎಂಬುದನ್ನು ವರ್ಣಿಸಿದೆ.

6. ಬ್ರಹ್ಮವು ಪಾರಮಾರ್ಥಿಕ ದೆಶೆಯಲ್ಲಿ ಬಹಿರಿಂದ್ರಿಯಗಳು ಮತ್ತು ಅವುಗಳ ಗುಣಗಳನ್ನು ಪಡೆದಿಲ್ಲ. ಆದರೆ ಅದೇ ಬ್ರಹ್ಮವು ವ್ಯಾವಹಾರಿಕ ದೆಶೆಯಲ್ಲಿ ಅಚೇತನವಾದ ಮತ್ತು ಉತ್ಪತ್ತಿ ನಾಶಗಳನ್ನು ಪಡೆದಿರುವ ಜ್ಞಾನೇಂದ್ರಿಯಗಳೂ, ಕರ್ಮೇಂದ್ರಿಯಗಳೂ, ಮನಸ್ಸು, ಬುದ್ಧಿ, ಅಹಂಕಾರಗಳೂ ಮತ್ತು ಈ ಇಂದ್ರಿಯಗಳ ಗುಣಾಭಾಸಗಳಾದ ಕೇಳುವುದು, ಮಾತನಾಡುವುದು, ನಿಶ್ಚಯ ಸಂಕಲ್ಪ ಮುಂತಾದವುಗಳು ಇವೆಲ್ಲವನ್ನೂ ಪಡೆದಿದೆ.

7. ಬ್ರಹ್ಮವು ಪಾರಮಾರ್ಥಿಕ ದೆಶೆಯಲ್ಲಿ ಇಂದ್ರಿಯಾದಿಗಳನ್ನು ಪಡೆಯದೇ ಇರುವುದರಿಂದ ಅದು ಅಸಕ್ತವು ; ಅಂದರೆ ಅದು ಯಾವುದೊಂದರಲ್ಲಿಯೂ ಅಭಿಮಾನವನ್ನು ಪಡೆದಿಲ್ಲ.

Re-printed from Mysore Vysya Patrika
(May 1959)

# ಭಗವದ್ಗೀತಾ ಅಧ್ಯಾಯ ೧೩. ಪಾಠ ೪

ಅದು ಅದ್ವಿತೀಯವಾದುದರಿಂದ ಅದು ಅಭಿಮಾನವನ್ನು ತೋರಿಸುವುದಕ್ಕೆ ಸಹಕಾರಿಯಾದ ಬೇರೆ ವಸ್ತುವೇ ಇರುವುದಿಲ್ಲ. ಆದಾಗ್ಯೂ ಅದು ಬ್ರಹ್ಮದ ವ್ಯಾವಹಾರಿಕ ದೆಶೆಯಲ್ಲಿ ತೋರಿ ಬರುವ ಎಲ್ಲಾ ವಿಧವಾದ ವಸ್ತುಗಳಿಗೂ ಅವಲಂಬನವಾಗಿದೆ.

(8) ಪಾರಮಾರ್ಥಿಕ ದೆಶೆಯಲ್ಲಿ ಬ್ರಹ್ಮವು ಸತ್ವರಜಸ್ತಮೋಗುಣಗಳಿಂದ ಕೂಡಿಲ್ಲದೆ ಇರುವುದರಿಂದ ಅದು ನಿರ್ಗುಣವು. ಆದರೆ ವ್ಯಾವಹಾರಿಕ ದೆಶೆಯಲ್ಲಿ ಅದೇ ಬ್ರಹ್ಮವು ಸತ್ವರಜಸ್ತಮೋಗುಣಗಳನ್ನು ಅನುಭವಿಸುವ ಹಾಗೆ ಕಾಣುವುದು. ಅದರಲ್ಲಿ ಸತ್ವರಜಸ್ತಮೋಗುಣಗಳು ಇಲ್ಲದಿದ್ದಾಗ್ಯೂ ಅದು ರೂಪಾದಿಗಳ ಮೂಲಕ ಸತ್ವರಜಸ್ತಮೋಗುಣಗಳಿಂದ ಕೂಡಿದ ಸುಖದುಃಖ ದ್ವಂದ್ವಗಳನ್ನು ಅನುಭವಿಸುವ ಹಾಗೆ ತೋರುತ್ತದೆ.

**ಬಹಿರನ್ತಶ್ಚ ಭೂತಾನಾಮಚರಂ ಚರಮೇವಚ ।**
**ಸೂಕ್ಷ್ಮತ್ವಾತ್ತದ ವಿಜ್ಞೇಯಂ ದೂರಸ್ಥಂ ಚಾಂತಿಕೇಚ ತತ್ ॥ ೧೫ ॥**

(9) ಬ್ರಹ್ಮವು ಪಾರಮಾರ್ಥಿಕದೆಶೆಯಲ್ಲಿ ಸಜೀವ ನಿರ್ಜೀವ ಪದಾರ್ಥಗಳಿಂದ ಕೂಡಿದ ಕೋರಿಕೆಯ ಪ್ರಪಂಚಕ್ಕೆ ಸಂಬಂಧ ಪಟ್ಟಿಲ್ಲ, ಆದುದರಿಂದ ಅದು ಭೂತಗಳ ಹೊರಗೆ ಇದೆ. ಆದರೂ ಅದರ ವ್ಯಾವಹಾರಿಕದೆಶೆಯಲ್ಲಿ ಕೋರಿಕೆಯ ಪ್ರಪಂಚದ ಭೂತಗಳಿಗೆಲ್ಲಾ ಆಶ್ರಯವಾಗಿರುವುದರಿಂದ ಅದು ಭೂತಗಳ ಒಳಗೆ ಇದೆ. ಒಟ್ಟಿನಲ್ಲಿ, ಬ್ರಹ್ಮವು ವ್ಯಾವಹಾರಿಕದೆಶೆಯಲ್ಲಿ ಕೋರುವ ಭೂತಗಳ ಒಳಗೂ, ಹೊರಗೂ, ಮಧ್ಯದಲ್ಲಿಯೂ ಅಂದರೆ ಎಲ್ಲೆಲ್ಲಿಯೂ ಇವೆ.

(10) ಬ್ರಹ್ಮವು ಪಾರಮಾರ್ಥಿಕವಾಗಿ ಎಲ್ಲೆಲ್ಲಿಯೂ ಇರುತ್ತಾ ಸಂಚಲಿಸದ ಮಹಾ ಇರುವಿಕೆಯಾಗಿ ಇದ್ದಾಗ್ಯೂ ವ್ಯಾವಹಾರಿಕ ದೆಶೆಯಲ್ಲಿ ಮಾತ್ರ ಚಲಿಸುವ ಮತ್ತು ಚಲಿಸದಿರುವ ಎಲ್ಲಾ ಭೂತ ಪ್ರಾಣಿಗಳ ರೂಪದಿಂದ ತೋರಿಸಿಕೊಳ್ಳುತ್ತದೆ.

(11) ಒಂದು ವಸ್ತುವು ಸ್ಥೂಲವಾಗಿದ್ದರೆ ಅದು ನಮ್ಮ ಪ್ರತ್ಯಕ್ಷಕ್ಕೆ ವಿಷಯವಾಗುತ್ತದೆ; ಸೂಕ್ಷ್ಮವಾಗಿದ್ದರೆ, ಅದು ನಮ್ಮ ಅನುಮಾನ ಪ್ರಮಾಣಕ್ಕೆ ಗೋಚರವಾಗುತ್ತದೆ. ಬ್ರಹ್ಮವು ಎಲ್ಲದಕ್ಕಿಂತಲೂ ಅಂದರೆ ಆಕಾಶಕ್ಕಿಂತಲೂ ಅತಿ ಸೂಕ್ಷ್ಮವಾಗಿರುವುದರಿಂದ ಅದನ್ನು ಪ್ರತ್ಯಕ್ಷ ಅನುಮಾನ ಪ್ರಮಾಣಗಳಿಂದ ಗ್ರಹಿಸಲಾಗುವುದಿಲ್ಲ.

(12) ವ್ಯಾವಹಾರಿಕ ದೆಶೆಯಲ್ಲಿರುವ ವಸ್ತುಗಳೆಲ್ಲವೂ ಸಂಕುಚಿತವಾಗಿ ಒಂದು ಜಾಗದಲ್ಲಿ ಮಾತ್ರ ಇರುವುದರಿಂದ ಅದು ಹತ್ತಿರದಲ್ಲಿರಬಹುದು ಅಥವ ದೂರದಲ್ಲಿರಬಹುದು. ಆದರೆ ಪಾರಮಾರ್ಥಿಕದೆಶೆಯ ಬ್ರಹ್ಮವು ಎಲ್ಲೆಲ್ಲಿಯೂ ಇರುವುದರಿಂದ ಅದು ಹತ್ತಿರದಲ್ಲಿಯೂ ಇದೆ ಮತ್ತು ದೂರದಲ್ಲಿಯೂ ಇದೆ ಎಂದು ಹೇಳಬಹುದು. ಬ್ರಹ್ಮವು ಇನ್ನೊಂದು ವಿಧವಾಗಿಯೂ ಹತ್ತಿರದಲ್ಲೂ ಮತ್ತು ದೂರದಲ್ಲೂ ಇದೆ. ಶಾಸ್ತ್ರದಲ್ಲಿ ವಿಶ್ವಾಸ, ಶಮದಮಾದಿಗಳು ಮತ್ತು ಆಚಾರ್ಯರುಗಳ ಉಪದೇಶಗಳು ಇತ್ಯಾದಿಗಳನ್ನು ಪಡೆಯದ ಅಜ್ಞಾನಿಗಳು ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆಯಲಾರರಾದುದರಿಂದ ಅದು ಅವರಿಗೆ ದೂರದಲ್ಲಿಯೇ ಇರುವುದು. ಆದರೆ ಜ್ಞಾನಿಗಳು ಸರ್ವರ ಆತ್ಮವಾಗಿರುವ ಮತ್ತು ಸರ್ವವ್ಯಾಪಿಯಾಗಿರುವ ಪಾರಮಾರ್ಥಿಕವಾದ ಬ್ರಹ್ಮವನ್ನು "ಇದೆಲ್ಲವೂ ಬ್ರಹ್ಮನೇ" ಎಂಬ ಸಾಕ್ಷಾತ್ಕಾರವನ್ನು ಪಡೆದಿರುವುದರಿಂದ ಅವರಿಗೆ ಬ್ರಹ್ಮವು ಅತಿ ಸಮೀಪದಲ್ಲಿರುವುದು.

**ಅವಿಭಕ್ತಂಚ ಭೂತೇಷು ವಿಭಕ್ತಮಿವಚಸ್ಥಿತಂ ।**
**ಭೂತಭರ್ತೃಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣುಚ ॥ ೧೬ ॥**

(13) ಬ್ರಹ್ಮವು ಆಕಾಶದಂತೆ ಅಖಂಡವಾಗಿ ಒಂದೇ ಆಗಿದೆ; ಅದು ಪಾರಮಾರ್ಥಿಕದೆಶೆಯಲ್ಲಿ ವಿಂಗಡವಾಗಿಲ್ಲ. ಆದರೆ ವ್ಯಾವಹಾರಿಕದೆಶೆಯಲ್ಲಿ ಮಾತ್ರ ಪ್ರತಿಯೊಂದು ಪ್ರಾಣಿಯ ದೇಹದಲ್ಲೂ ಪ್ರತ್ಯೇಕವಾಗಿ ವಿಂಗಡವಾಗಿರುವಂತೆ ಅಜ್ಞಾನಿಗಳಿಗೆ ತೋರುವುದು.' ಜ್ಞಾನಿಗಳು ಮಾತ್ರ ಬ್ರಹ್ಮವು ಪ್ರಾಣಿಗಳಿಗೆಲ್ಲಾ ಅಖಂಡವಾದ ಆಧಾರವಾಗಿರುವುದನ್ನು ಸಾಕ್ಷಾತ್ಕರಿಸುತ್ತಾರೆ.

(14) ಬ್ರಹ್ಮವು ನಿಜವಾಗಿ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಉಂಟುಮಾಡುವುದಿಲ್ಲ. ಆದರೆ ಅಜ್ಞಾನಿಗಳು ಬ್ರಹ್ಮದ ಆಧಾರದಿಂದಲೇ ಜಗತ್ತು ಉಂಟಾಗಿದೆಯೆಂದೂ, ಅದರ ಆಧಾರದ ಮೇಲೆಯೇ ಜಗತ್ತು ಪರಿಣಾಮಗಳನ್ನು ಹೊಂದುತ್ತಾ ವೃದ್ಧಿಯಾಗುತ್ತಿದೆಯೆಂದೂ ಮತ್ತು ಕೊನೆಯಲ್ಲಿ ಅದರಲ್ಲಿಯೇ ಜಗತ್ತು ಲಯವಾಗುವುದಾಗಿಯೂ ತಿಳಿಯುವರು. ಲೋಕದಲ್ಲಿ ಹಗ್ಗವನ್ನು ಸರ್ಪವೆಂದು ಭ್ರಾಂತಿಪಡುವ ಉದಾಹರಣೆಯನ್ನು ತೆಗೆದು ಕೊಳ್ಳೋಣ. ಈ ಸರ್ಪವೆಂಬ ಭ್ರಾಂತಿಯು ಹಗ್ಗದ ಆಧಾರದಿಂದಲೇ ಉಂಟಾಗುತ್ತದೆ; ಅದರ ಆಧಾರದಲ್ಲೇ ಕೆಲವು ಕಾಲವಿದ್ದು ಕೊನೆಯಲ್ಲಿ "ಸರ್ಪವಲ್ಲ; ಇದು ಹಗ್ಗ" ಎಂದು ತಿಳಿದಾಗ ಅದರಲ್ಲಿಯೇ ಲಯವಾಗುತ್ತದೆ. ಹಾಗೆಯೇ ವ್ಯಾವಹಾರಿಕದೆಶೆಯಲ್ಲಿ ಸ್ಥಿತಿ ಕಾಲದಲ್ಲಿ ಬ್ರಹ್ಮವೇ ಭೂತಗಳನ್ನು ಧರಿಸಿ ಪಾಲನೆ ಮಾಡುವುದಾಗಿಯೂ, ಪ್ರಳಯ ಕಾಲದಲ್ಲಿ ಅದು ಎಲ್ಲವನ್ನು ನುಂಗುವ ಹಾಗೆಯೂ ಮತ್ತು ಸೃಷ್ಟಿ ಕಾಲದಲ್ಲಿ ಅವುಗಳನ್ನು ಅದು ಉಂಟುಮಾಡುವಂತೆಯೂ ಅಜ್ಞಾನದಿಂದ ನಾವೆಲ್ಲರೂ ಅನುಮಾನ ಪ್ರಮಾಣದಿಂದ ತೀರ್ಮಾನಿಸುತ್ತೇವೆ. ಆದರೆ ಬ್ರಹ್ಮದ ಪಾರಮಾರ್ಥಿಕ ಸ್ವರೂಪವನ್ನು ಸಾಕ್ಷಾತ್ಕರಿಸುವ ಜ್ಞಾನಿಗಳು ಮಾತ್ರ ಬ್ರಹ್ಮವು ನಿಜವಾಗಿ ಜಗತ್ತನ್ನು ಉಂಟುಮಾಡುವುದಿಲ್ಲ; ಪಾಲಿಸುವುದಿಲ್ಲ ಮತ್ತು ಲಯಮಾಡುವುದಿಲ್ಲ. ಎಂಬುದನ್ನು ತಿಳಿದಿರುವರು; ಏಕೆಂದರರೆ ಬ್ರಹ್ಮದ ಪಾರಮಾರ್ಥಿಕ ಸ್ವರೂಪ ಸಾಕ್ಷಾತ್ಕಾರ ಕಾಲದಲ್ಲಿ ಜಗತ್ತು ಇರುವುದೇ ಇಲ್ಲ.

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿಸರ್ವಸ್ಯವಿಷ್ಟಿತಂ**
**॥ ೧೭ ॥**

(15) ಬ್ರಹ್ಮದ ಮಹಾ ಇರುವಿಕೆಯ ಆಧಾರದ ಮೇಲೆ ತೋರಿಕೆಯ ಜಗತ್ತಿನ ಪದಾರ್ಥಗಳ ಜಾತಿ ಗುಣಕ್ರಿಯೆಗಳು ಸೃಷ್ಟಿ, ಸ್ಥಿತಿ, ಲಯಗಳನ್ನು ಪಡೆಯುವ ಹಾಗೆ ತೋರುತ್ತವೆ ಎಂದ ಮೇಲೆ ಸೂರ್ಯ, ಚಂದ್ರ, ಅಗ್ನಿ ಮುಂತಾದ ಜ್ಯೋತಿಸ್ಸಿನಿಂದ ಕೂಡಿದ ಪದಾರ್ಥಗಳೂ, ಮತ್ತು ಅವುಗಳ ತೇಜಸ್ಸೂ ಸಹ ಬ್ರಹ್ಮದಿಂದಲೇ ಹುಟ್ಟಿವೆ. ಎಂಬುದಾಗಿ ನಾವು ತಿಳಿಯುತ್ತೇವೆ. ಆದುದರಿಂದ ಬ್ರಹ್ಮವು ಜ್ಯೋತಿಗಳಿಗೆಲ್ಲಾ ಅಂದರೆ ಜ್ಯೋತಿಸ್ಸಿನಿಂದ ಕೂಡಿದ ಪದಾರ್ಥಗಳಿಗೆಲ್ಲಾ ಜ್ಯೋತಿಯು. ಆದರೆ ಅದು ಹಾಗೆಯೇ ತಮಸ್ಸಿಗೂ ಆಧಾರವಾಗಿರುವುದರಿಂದ ಅದನ್ನು ತಮಸ್ಸಿಗೂ ತಮಸ್ಸು ಎಂದು ಹೇಳಬಹುದೆ? ಎಂದು ಕೇಳಿದರೆ ಹಾಗೆ ಹೇಳಕೂಡದು. ಏಕೆಂದರೆ, ಇಲ್ಲಿ ತಮಸ್ಸು ಎಂದರೆ ಅಜ್ಞಾನ ಎಂದು ಅರ್ಥ. ಬ್ರಹ್ಮದ ಸಾಕ್ಷಾತ್ಕಾರದಲ್ಲಿ ಅಜ್ಞಾನದ ಸ್ವಲ್ಪ ಭಾಗವೂ ಇರುವುದಿಲ್ಲವೆಂದು ಅರ್ಥ. ಬ್ರಹ್ಮದಲ್ಲಿ ಅಜ್ಞಾನದ ಸಂಪರ್ಕವೇ ಇಲ್ಲದಿರುವುದರಿಂದ ಬ್ರಹ್ಮವು ತಮಸ್ಸಿಗೆ ಆಚೆ ಇದೆ. ಜ್ಯೋತಿಸ್ಸನ್ನು ಮುಚ್ಚುವ ತಮಸ್ಸೆಂಬ ಪದಾರ್ಥವು ಜ್ಯೋತಿಸ್ಸಿನ ಹಾಗೆ ಬ್ರಹ್ಮದಿಂದಲೇ ಹುಟ್ಟಿದ ಹಾಗೆ ತೋರಿದಾಗ್ಯೂ, ಅಜ್ಞಾನರೂಪವಾದ ತಮಸ್ಸು ಮಾತ್ರ ಬ್ರಹ್ಮನಿಂದ ಹೊರಗೆ ಇದೆ ಎಂದು ಹೇಳಲ್ಪಟ್ಟಿದೆ.

(16) ಬ್ರಹ್ಮವು ಪಾರಮಾರ್ಥಿಕ ದೆಶೆಯಲ್ಲಿ ಜ್ಞಾನ ಸ್ವರೂಪವಾದದ್ದು. ಆದರೆ ವ್ಯಾವಹಾರಿಕ ದೆಶೆಯಲ್ಲಿರುವ ಅಜ್ಞಾನಿಗಳಿಗೆ ಅದು ಜ್ಞೇಯವು ಅಂದರೆ ಅವರಿಂದ ತಿಳಿಯಲ್ಪಡತಕ್ಕ ಒಂದು ವಸ್ತುವಿನಂತೆ ತೋರುತ್ತದೆ. ಮುಮುಕ್ಷುವು ಬ್ರಹ್ಮವನ್ನು ಸಾಕ್ಷಾತ್ಕರಿಸಲು ಅಮಾನಿತ್ವ, ಅದಂಭಿತ್ವ, ಅಹಿಂಸಾ ಮುಂತಾದ ಜ್ಞಾನಾಭ್ಯಾಸಗಳನ್ನು ಆಚರಿಸುವುದರಿಂದ ಅವನಿಗೆ ಬ್ರಹ್ಮ ಸಾಕ್ಷಾತ್ಕಾರವಾಗುತ್ತದೆ. ಆದುದರಿಂದ ಬ್ರಹ್ಮವು "ಜ್ಞಾನಗಮ್ಯವು" ಅಂದರೆ ಅದು ಜ್ಞಾನಾಭ್ಯಾಸಗಳ ಫಲವು. ಆದುದರಿಂದ ಬ್ರಹ್ಮವು ಜ್ಞಾನ ಸ್ವರೂಪವಾದದ್ದು, ತಿಳಿಯಲ್ಪಡಲು ಯೋಗ್ಯವಾದದ್ದು, ಮತ್ತು ತತ್ವಜ್ಞಾನ ಮಾತ್ರದಿಂದಲೇ ತಿಳಿಯಲ್ಪಡತಕ್ಕದ್ದು. ವ್ಯಾವಹಾರಿಕದೆಶೆಯಲ್ಲಿ "ಜ್ಞಾನ—ಜ್ಞೇಯ—ಜ್ಞಾನಗಮ್ಯ" ಎಂದು ಮೂರು ಪ್ರಕಾರವಾಗಿ ವರ್ಣಿಸಲ್ಪಟ್ಟಿರುವ ಈ ಬ್ರಹ್ಮವು ಪ್ರತಿಯೊಬ್ಬ ಮನುಷ್ಯನ, ಏಕೆ ಪ್ರತಿಯೊಂದು ಪ್ರಾಣಿಯ ಹೃದಯದಲ್ಲಿಯೂ ಇರತಕ್ಕದ್ದಾಗಿದೆ. ಈ ರೀತಿಯಾಗಿ ಸಮಸ್ತ ಪ್ರಾಣಿಗಳ ಬುದ್ಧಿಯಲ್ಲಿ ಯಾವಾಗಲೂ ಇದ್ದೇ ಇರುತ್ತದೆ; ಅವುಗಳ ಹೃದಯದಲ್ಲಿಯೇ ಈ ಮೂರೂ ಅನುಭಕ್ಕೆ ಬರುತ್ತವೆ.

### ಜ್ಞೇಯವು ಶುದ್ಧ ಪ್ರತ್ಯಗಾತ್ಮನು (ಪರಿಶುದ್ಧ ಆತ್ಮನು)
### (ಎರಡನೆಯ ಅಭಿಪ್ರಾಯ)

ಲೋಕದಲ್ಲಿರುವ ಪ್ರತಿಯೊಂದ ಶರೀರದಲ್ಲಿಯೂ ಒಂದು ಜೀವಾತ್ಮವು ಇರುವುದು ಅಥವ ಜೀವಾತ್ಮನು ಇರುವನು. ಒಂದು ಶರೀರದಲ್ಲಿ ಕರ್ಮದಿಂದ ಬಂಧಿಸಲ್ಪಟ್ಟ ಜೀವಾತ್ಮನು ಸುಖದುಃಖಗಳೆಂಬ ದ್ವಂದ್ವಗಳನ್ನು ಪ್ರಪಂಚದಲ್ಲಿ ಅನುಭವಿಸುತ್ತಾ, ಪುಣ್ಯ ಪಾಪಕರ್ಮಗಳನ್ನು ಮಾಡುತ್ತಾ, ಜನ್ಮಮರಣಗಳನ್ನು ಒಂದಾದ ಮೇಲೆ ಇನ್ನೊಂದರಂತೆ ಚಕ್ರಾಕಾರವಾಗಿ ಪಡೆಯುತ್ತಲೇ ಇರುವನು. ಆದರೆ ಒಬ್ಬ ಮನುಷ್ಯನು ಭಗವಂತನ ಕೃಪೆಯಿಂದ ಮುಮುಕ್ಷುವಾಗಿ, ಅಮಾನಿತ್ವ ಅದಂಭಿತ್ವ ಮೊದಲಾದ ಜ್ಞಾನಾಭ್ಯಾಸಗಳಿಂದ ಕೂಡಿದ ಯೋಗ ಸಾಧನೆಯನ್ನು

ಕೈಗೊಂಡು, ಯೋಗಾಭ್ಯಾಸದಲ್ಲಿ ಜಯವನ್ನು ಪಡೆದರೆ ಅವನು ಮೋಕ್ಷವನ್ನು ಅಂದರೆ ಪರಿಶುದ್ಧ ಆತ್ಮ ಅಥವ ಶುದ್ಧ ಪ್ರತ್ಯಗಾತ್ಮ ಅವಸ್ಥೆಯನ್ನು ಪಡೆದು ಆತ್ಮಾನಂದವನ್ನು ಶಾಶ್ವತವಾಗಿ ಅನುಭವಿಸುವನು. ಭಗವದ್ಗೀತೆಯ ಈ ಆರು ಶ್ಲೋಕಗಳಲ್ಲಿ ವರ್ಣಿಸಿರುವ "ಜ್ಞೇಯವು" ಈ ಶುದ್ಧ ಪ್ರತ್ಯಗಾತ್ಮ ಅಥವ ಪರಿಶುದ್ಧ ಆತ್ಮನೇ ಹೊರತು, ಅದು ಸಗುಣ ಬ್ರಹ್ಮವೂ ಅಲ್ಲ ಮತ್ತು ನಿರ್ಗುಣ ಬ್ರಹ್ಮವೂ ಅಲ್ಲ. ಹಾಗಾದರೆ ಈ ಪರಿಶುದ್ಧ ಆತ್ಮನ ಅಥವ ಶುದ್ಧ ಪ್ರತ್ಯಗಾತ್ಮನ ಲಕ್ಷಣಗಳಾವವು? ಅವನಿಗೂ ಬದ್ಧದೆಶೆಯಲ್ಲಿರುವ ಜೀವಾತ್ಮನಿಗೂ ವ್ಯತ್ಯಾಸಗಳಾವವು? ಈ ಗೀತಾ ಶ್ಲೋಕಗಳ ಮೂಲಕ ಇವನ್ನು ಒಂದೊಂದಾಗಿ ತಿಳಿಯೋಣ. ಈ ಪರಿಶುದ್ಧ ಆತ್ಮನನ್ನು ಪುಲ್ಲಿಂಗವಾಗಿಯೂ ನಪುಂಸಕ ಲಿಂಗವಾಗಿಯೂ ಅಲ್ಲಲ್ಲಿ ಹೇಳಿದೆ.

(1) ಅನಾದಿ :—

ಆದಿ ಎಂದರೆ ಉತ್ಪತ್ತಿಯು; ಉತ್ಪತ್ತಿ ಇಲ್ಲದಿದ್ದರೆ ಅನಾದಿಯು. ಉತ್ಪತ್ತಿರಹಿತವಾದ ವಸ್ತುವಿಗೆ ಅಂತ್ಯವೂ ಇಲ್ಲ ಎಂದು ತಿಳಿಯಬೇಕು. ಶುದ್ಧ ಪ್ರತ್ಯಗಾತ್ಮನು ಅನಾದಿ ಎಂದರೆ ಅವನಿಗೆ ಉತ್ಪತ್ತಿಯೂ ಇಲ್ಲ; ಅಂತ್ಯವೂ ಇಲ್ಲ. ಅವನು ಒಂದು ಕಾಲದಲ್ಲಿ ಹೊಸದಾಗಿ ಉಂಟಾಗಿ, ಸ್ವಲ್ಪಕಾಲ ಮಾತ್ರ ಇದ್ದು, ಆ ಮೇಲೆ ನಾಶವಾಗುವುದಿಲ್ಲ. ಅವನು ಕರ್ಮದಿಂದ ಬಂಧಿಸಲ್ಪಟ್ಟು ಶರೀರಡೊಡನೆ ಇರಬಹುದು ಅಥವ ಶರೀರವಿಲ್ಲದೆಯೇ ಇರಬಹುದು; ಆದರೆ ಯಾವಾಗಲೂ ಇದ್ದೇ ಇರುವನು.

(2) ಮತ್ಪರಂ :—

ಪ್ರತ್ಯಗಾತ್ಮನು ಪರಿಶುದ್ಧಾವಸ್ಥೆಯಲ್ಲೂ ಮತ್ತು ಬದ್ಧಾವಸ್ಥೆಯಲ್ಲೂ ಭಗವಂತನಿಗೆ ಅಧೀನನಾಗಿರುವನು ಅವನು ಭಗವಂತನಿಗೆ ಶರೀರವಾಗಿರುವುದರಿಂದ ಭಗವಂತನೇ ಇವನ ಧಾರಕನೂ, ಪೋಷಕನು, ನಿಯಾಮಕನು ಮತ್ತು ಸ್ವಾಮಿಯು. ಇದು ಅಂದರೆ ಜೀವಾತ್ಮವು ಭಗವಂತನನ್ನೇ ಶೇಷಿಯಾಗಿ ಉಳ್ಳದ್ದು.

(3) ಬ್ರಹ್ಮ :—

ಶುದ್ಧಪ್ರತ್ಯಗಾತ್ಮನು ವಿಭುವಾದ ಧರ್ಮಭೂತ ಜ್ಞಾನವನ್ನು ಪಡೆದಿರುವನು. "ಬೃಹತ್" ಎಂದರೆ "ಹಿರಿದು" ಎಂದು ಅರ್ಥ. ಆದುದರಿಂದ ಹಿರಿದಾದ ಜ್ಞಾನವನ್ನು ಗುಣವಾಗಿ ಪಡೆದಿರುವುದರಿಂದ ಪರಿಶುದ್ಧ ಆತ್ಮನನ್ನು "ಬ್ರಹ್ಮ" ಎಂದು ಕರೆದಿದೆ. ಇವನು ಶರೀರಕ್ಕಿಂತಲೂ ಬೇರೆಯಾದವನಾಗಿ ಶರೀರಾದಿಗಳಿಂದ ಅಳತೆಮಾಡಲಾರದವನಾದುದರಿಂದಲೂಕೂಡ ಇವನನ್ನು ಬ್ರಹ್ಮ ಎಂದು ಹೇಳಿದೆ. ಅನೇಕ ಉಪನಿಷದ್ವಾಕ್ಯಗಳಲ್ಲಿ "ಬ್ರಹ್ಮ" ಎಂಬ ಪದದಿಂದ ಶುದ್ಧ ಪ್ರತ್ಯಗಾತ್ಮನನ್ನು ಸೂಚಿಸಿದೆ.

(4) ತತ್–ನಸತ್–ನಅಸತ್-ಉಚ್ಯತೇ

ಸೃಷ್ಟಿಕಾಲದಲ್ಲಿ ಜಗತ್ತಿನ ಅಚೇತನ ಪದಾರ್ಥಗಳು ಪರಿಣಾಮಗಳನ್ನು ಹೊಂದುತ್ತಾ ಬೇರೆ ಬೇರೆ ನಾಮರೂಪಗಳನ್ನು ಪಡೆದಿರುವುದರಿಂದ ಸಜೀವಿಗಳಾಗಿರಲಿ ಅಥವ ನಿರ್ಜೀವಿಗಳಾಗಿರಲಿ ಅವುಗಳು "ಸತ್" ಎಂಬ ಪದದಿಂದ ಕರೆಯಲ್ಪಡುತ್ತವೆ. ಆದರೆ ಪದಾರ್ಥಗಳು ಪ್ರಳಯಕಾಲದಲ್ಲಿ ಕಾರಣಾವಸ್ಥೆಯಲ್ಲಿದ್ದು ನಾಮರೂಪಗಳನ್ನು ಪಡೆಯದೇ ಇರುವುದರಿಂದ ಆ ಅವಸ್ಥೆಯಲ್ಲಿ ಪದಾರ್ಥಗಳೆಲ್ಲವೂ "ಅಸತ್" ಎಂದು ಕರೆಯಲ್ಪಡುತ್ತವೆ. ಕರ್ಮಬಂಧನಕ್ಕೆ ಒಳಪಟ್ಟಿರುವ ಬದ್ಧದೆಶೆಯಲ್ಲಿರುವ ಜೀವಾತ್ಮರೆಲ್ಲರೂ ಸೃಷ್ಟಿಕಾಲದಲ್ಲಿ ವಿಧವಿಧವಾದ ಸ್ಥೂಲಶರೀರಗಳೊಡನೆ ಕೂಡಿ ಇರುವುದರಿಂದ ಅವರುಗಳನ್ನು "ಸತ್" ಎಂದು ಕರೆಯಬಹುದು. ಮತ್ತು ಅದೇ ಜೀವಾತ್ಮರು ಸೂಕ್ಷ್ಮವಾದ ಪ್ರಳಯಕಾಲದಲ್ಲಿ ನಾಮರೂಪಗಳನ್ನುಳ್ಳ ಶರೀರಗಳನ್ನು ಪಡೆಯದೇ ಇರುವುದರಿಂದ, ಅಂದರೆ ಆಗ ಅವರು ಅಚಿತ್ತಿನ ಹಾಗೆ ಜ್ಞಾನ ಶೂನ್ಯರಾಗಿರುವುದರಿಂದ ಅವರನ್ನು "ಅಸತ್" ಎಂದೂ ಕರೆಯಬಹುದು. ಆದರೆ ಕರ್ಮಬಂಧನವನ್ನು ಕತ್ತರಿಸಿ ಮೋಕ್ಷ ಪಡೆದ ಶುದ್ಧಪ್ರತ್ಯಗಾತ್ಮನು ಪ್ರಳಯಕಾಲ, ಸೃಷ್ಟಿಕಾಲ ಎಂಬ ಚಕ್ರದ ಅಧೀನಕ್ಕೆ ಒಳಪಡದೆ ಅಂದರೆ ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ಒಳಪಡದೆ ಇರುವುದರಿಂದ ಪರಿಶುದ್ಧ ಆತ್ಮನನ್ನು "ಸತ್" ಎಂದಾಗಲೀ ಅಥವ "ಅಸತ್" ಎಂದಾಗಲೀ ಕರೆಯಲಾಗುವುದಿಲ್ಲ. ಪರಿಶುದ್ಧ ಜೀವಾತ್ಮ ಸ್ವರೂಪಕ್ಕೆ ಸ್ವಚ್ಛಬ್ಧವಾಚ್ಯವಾದ ಸ್ಥೂಲಾವಸ್ಥೆಯೂ ಮತ್ತು ಅಸಚ್ಛಬ್ಧ ವಾಚ್ಯವಾದ ಸೂಕ್ಷ್ಮಾವಸ್ಥೆಯೂ ಇರುವುದಿಲ್ಲ; ಏಕೆಂದರೆ ಅದಕ್ಕೆ ಪ್ರಕೃತಿಯ ಸಂಬಂಧವೇ ಇಲ್ಲ ಮತ್ತು ಅದರ ಜ್ಞಾನವು ಯಾವ ಸಂಕೋಚ ವಿಕಾಸಗಳೂ ಇಲ್ಲದೆ ಯಾವಾಗಲೂ ವಿಭುವಾಗಿಯೇ ಇರುವುದು. ಆದುದರಿಂದ ಅದು ಸತ್ತೂ ಅಲ್ಲ ಮತ್ತು ಅಸತ್ತೂ ಅಲ್ಲ. ಕಾರ್ಯ, ಕಾರಣ ಎಂಬ ಎರಡು ಅವಸ್ಥೆಗಳೂ ಜೀವಾತ್ಮನಿಗೆ ಕರ್ಮಬಂಧನದಿಂದ ಬಂದದ್ದೇ ಅಲ್ಲದೆ, ಅವನ ನಿಜಸ್ವರೂಪವಾದ ಪರಿಶುದ್ಧ ಆತ್ಮ ಅವಸ್ಥೆಯಲ್ಲಿ ಇರುವುದಿಲ್ಲ. ಅಂದರೇನು, ಶುದ್ಧ ಪ್ರತ್ಯಗಾತ್ಮನಿಗೆ ಕಾರಣವಾದ ಪ್ರಳಯಾವಸ್ಥೆಯೂ ಇಲ್ಲ ಮತ್ತು ಕಾರ್ಯವಾದ ಸೃಷ್ಟ್ಯವಸ್ಥೆಯೂ ಇಲ್ಲ. ಹೀಗಿರುವಾಗ ಶುದ್ಧ ಪ್ರತ್ಯಗಾತ್ಮನನ್ನು ಹೇಗೆ ನಾವು "ಸತ್" ಎಂದಾಗಲೀ,

" ಅಸತ್ " ಎಂದಾಗಲೀ ಕರೆಯಲಾದೀತು ? ಅವನನ್ನು " ಸತ್ " ಎಂದೂ " ಅಸತ್ " ಎಂದೂ ಹೇಳಲಾಗುವುದಿಲ್ಲ.

## (5) ಸರ್ವತಃ ಪಾಣಿಪಾದಂ—ಸರ್ವತಃ ಅಕ್ಷಿಶಿರೋ ಮುಖಂ—ಸರ್ವತಃ ಶ್ರುತಿಮತ್

ಪರಿಶುದ್ಧ ಆತ್ಮಸ್ವರೂಪವು ಅಶರೀರವಾಗಿಯೂ, ನಿರವಯವವಾಗಿಯೂ, ಇಂದ್ರಿಯ ರಹಿತವಾಗಿಯೂ ಇರುವುದರಿಂದ ಅದಕ್ಕೆ ಕೈ, ಕಾಲು, ಕಣ್ಣು ಮೊದಲಾದವುಗಳು ಇರುವುದಿಲ್ಲ. ಆದರೆ ಕರ್ಮದಿಂದ ಬಂಧಿಸಲ್ಪಟ್ಟು ಬದ್ಧದೆಶೆಯಲ್ಲಿ ಇರುವ ಕಾಲದಲ್ಲಿ ಅದು ಕೈ, ಕಾಲು, ಕಣ್ಣು ಮುಂತಾದವುಗಳನ್ನು ಪಡೆದಿದೆ. ಹೀಗಿರುವಾಗ ಮೋಕ್ಷದೆಶೆಯಲ್ಲಿರುವ ಶುದ್ಧ ಪ್ರತ್ಯಗಾತ್ಮನು ಕೈ, ಕಾಲು, ಕಣ್ಣು, ತಲೆ, ಮುಖ, ಕಿವಿ ಇವುಗಳನ್ನು ಪಡೆದಿದೆ ಎಂದು ಹೇಳಿರುವುದರ ಅರ್ಥವೇನು ? ಪರಿಶುದ್ಧ ಆತ್ಮನು ಕೈ, ಕಾಲು, ಕಣ್ಣು ಮೊದಲಾದ ಇಂದ್ರಿಯಗಳನ್ನು ನಿಜವಾಗಿ ಪಡೆಯದೇ ಇದ್ದಾಗ್ಯೂ ಅವನು ಎಲ್ಲಾ ಅಂತರಿಂದ್ರಿಯ ಮತ್ತು ಬಹಿರಿಂದ್ರಿಯಗಳಿಂದ ಮಾಡಬಹುದಾದ ಎಲ್ಲಾ ವ್ಯಾಪಾರಗಳನ್ನು ಮಾಡುವ ಶಕ್ತಿಯನ್ನು ಪಡೆದಿರುವನು ಎಂದು ಅರ್ಥವು ಅಂದರೇನು, ಅದು ಕೈಯ್ಗಳು ಇಲ್ಲದೆಯೇ ಕೈಗಳಿಂದ ಮಾಡುವ ಕೆಲಸಗಳನ್ನು ಮಾಡಬಲ್ಲ ಶಕ್ತಿಯುಳ್ಳದ್ದು; ಕಾಲುಗಳಿಲ್ಲದೆಯೇ ಕಾಲುಗಳಿಂದ ಮಾಡಬಲ್ಲ ಕೆಲಸಗಳನ್ನು ಮಾಡಬಲ್ಲ ಸಾಮರ್ಥ್ಯವುಳ್ಳದ್ದು ; ಕಣ್ಣುಗಳಿಲ್ಲದೆಯೇ ನೋಡಬಲ್ಲದ್ದು ; ಕಿವಿಗಳಿಲ್ಲದೆಯೇ ಕೇಳಬಲ್ಲದ್ದು—ಇತ್ಯಾದಿ ಪರಿಶುದ್ಧಾತ್ಮನ ವಿಭುಧರ್ಮ ಭೂತ ಜ್ಞಾನಕ್ಕೆ ಈ ಶಕ್ತಿಗಳೆಲ್ಲವೂ ಯಾವ ಇಂದ್ರಿಯಗಳ ಸಹಾಯವೂ ಇಲ್ಲದೆಯೇ ಇರುವುದು. ಈ ವಿಚಾರದಲ್ಲಿ ಭಗವಂತನಿಗೆ ಇರುವ ಶಕ್ತಿಯು ಶುದ್ಧ ಪ್ರತ್ಯಗಾತ್ಮನಿಗೂ ಇರುತ್ತದೆ ಎಂದು ಶ್ರುತಿ ವಾಕ್ಯಗಳಲ್ಲಿ ಉಪದೇಶವಿದೆ.

## (6) ಲೋಕೇ—ಸರ್ವಂ ಆ ವೃತ್ಯ—ತಿಷ್ಠತಿ.

ಜೀವಾತ್ಮನು ಬದ್ಧದೆಶೆಯಲ್ಲಿ ಪ್ರಪಂಚದಲ್ಲಿ ಅತಿ ಸಣ್ಣದಾದ ಕ್ರಿಮಿಕೀಟಾದಿಗಳ ಶರೀರಗಳನ್ನೂ ಮತ್ತು ಬಹು ದೊಡ್ಡದಾದ ಆನೆ ತಿಮಿಂಗಲಾದಿ ಶರೀರಗಳನ್ನೂ ಪ್ರವೇಶಿಸುವ ಸಾಮರ್ಥ್ಯವನ್ನು ಪಡೆದಿರುವನು. ಆದುದರಿಂದ ಶರೀರವನ್ನು ಪಡೆದಿರುವ ಪ್ರತಿಯೊಂದು ಪದಾರ್ಥದಲ್ಲೂ ಜೀವಾತ್ಮನು ವ್ಯಾಪಿಸಿ ಇರುತ್ತಾನೆ. ಹಾಗಾದರೆ, ಮುಕ್ತನಾದ ಶುದ್ಧ ಪ್ರತ್ಯಗಾತ್ಮನು ಹೇಗೆ ಲೋಕದ ಪದಾರ್ಥಗಳೆಲ್ಲವನ್ನು ವ್ಯಾಪಿಸಬಲ್ಲನು ? ಎಂಬ ಸಂದೇಹವನ್ನು ಪರಿಹರಿಸಬೇಕಾಗಿದೆ. ಪರಿಶುದ್ಧ ಆತ್ಮನ ಧರ್ಮ ಭೂತ ಜ್ಞಾನವು ವಿಭುವಾಗಿರುವುದರಿಂದ ಅದು ಲೋಕದ ಎಲ್ಲಾ ಪದಾರ್ಥಗಳನ್ನು ಆವರಿಸಿಕೊಂಡು ಅಥವ ವ್ಯಾಪಿಸಿಕೊಂಡು ಇರುವುದು ಎಂಬುದನ್ನು ತಿಳಿದು ಕೊಳ್ಳಬೇಕು.

## (7) ಸರ್ವೇಂದ್ರಿಯ ಗುಣಾಭಾಸಂ—ಸರ್ವೇಂದ್ರಿಯ ವಿವರ್ಜಿತಂ.

ಜೀವಾತ್ಮನು ಬದ್ಧದೆಶೆಯಲ್ಲಿ ಆಯಾ ಇಂದ್ರಿಯ ವೃತ್ತಿಗಳಿಂದ ಮಾತ್ರ ಪ್ರಪಂಚದಲ್ಲಿರುವ ವಿಷಯಗಳನ್ನು ತಿಳಿಯಬಲ್ಲನು ; ಅಂದರೇನು, ಇಂದ್ರಿಯ ವೃತ್ತಿಗಳಿಂದಲೂ ವಿಷಯಗಳನ್ನು ತಿಳಿದುಕ್ಕೊಳ್ಳುವ ಸಾಮರ್ಥ್ಯವುಳ್ಳವನು. ಆದರೆ ಶುದ್ಧ ಪ್ರತ್ಯಗಾತ್ಮನು ಯಾವ ಇಂದ್ರಿಯಗಳನ್ನೂ ಪಡೆದಿಲ್ಲ ; ಆದಾಗ್ಯೂ ಇಂದ್ರಿಯಗಳಿಲ್ಲದೆಯೇ ಸಕಲ ವಿಷಯಗಳನ್ನೂ ವಿಭುಧರ್ಮ ಭೂತ ಜ್ಞಾನದ ಮೂಲಕ ತಿಳಿಯಬಲ್ಲನು. ಅಥವ ಪರಿಶುದ್ಧ ಆತ್ಮವು ತಾನಾಗಿಯೇ ಸಮಸ್ತ ವಸ್ತುಗಳನ್ನೂ ತಿಳಿದು ಕ್ಕೊಳ್ಳುವ ಸಾಮರ್ಥ್ಯವನ್ನು ಪಡೆದಿದೆ.

## (8) ಅಸಕ್ತಂ—ಸರ್ವಭೃತ್—ಚ—ಏವ

ತನ್ನ ನಿಜ ಸ್ವರೂಪದಲ್ಲಿ ಶುದ್ಧ ಪ್ರತ್ಯಗಾತ್ಮನಿಗೆ ದೇವ, ಮನುಷ್ಯ, ತಿರ್ಯಕ್ ಮುಂತಾದ ಶರೀರಗಳಲ್ಲಿ ಯಾವ ಸಂಬಂಧವೂ ಇರುವುದಿಲ್ಲ. ಆದಾಗ್ಯೂ ಬದ್ಧ ದೆಶೆಯಲ್ಲಿ ಮಾತ್ರ ಎಲ್ಲಾ ವಿಧಗಳಾದ ಶರೀರಗಳನ್ನು ಧರಿಸುವ ಶಕ್ತಿಯನ್ನು ಪಡೆದಿರುವನು ಮತ್ತು ಅವುಗಳನ್ನು ಭರಣ ಮಾಡುತ್ತಾನೆ ಮತ್ತು ಧರಿಸುತ್ತಾನೆ.

## (9) ನಿರ್ಗುಣಂ—ಗುಣಭೋಕ್ತೃ ಚ.

ಶುದ್ಧ ಪತ್ಯಗಾತ್ಮನು ತನ್ನ ನಿಜಸ್ವರೂಪದಲ್ಲಿ ಸತ್ವ, ಸ್ವಲ್ಪವೂ ಪಡೆದಿಲ್ಲ. ಆದರೆ ಕರ್ಮ ಬಂಧಕ್ಕೆ ಒಳಪಟ್ಟು ಬದ್ಧ–ದೆಶೆಯಲ್ಲಿರುವ ಜೀವಾತ್ಮನು ಮಾತ್ರ ಪ್ರಕೃತಿಯಲ್ಲಿ ಅಥವ ತಾನು ಸ್ವೀಕರಿಸುವ ಶರೀರದಲ್ಲಿರುವ ಸತ್ವ ರಜಸ್ತಮೋ ಗುಣಗಳನ್ನೂ ಭುಜಿಸುವ ಅಥವ ಅನುಭವಿಸುವ ಸಾಮರ್ಥ್ಯವನ್ನು ಪಡೆದಿರುವನು. ಮತ್ತು ಅವುಗಳನ್ನು ಅನುಭವಿಸುವನು.

## (10) ಬಹಿಃ-ಅಂತಃ-ಚ-ಭೂತಾನಾಂ

ಶುದ್ಧ ಪ್ರತ್ಯಗಾತ್ಮನಿಗೆ ತನ್ನ ನಿಜ ಸ್ವರೂಪದಲ್ಲಿ ಪೃಥಿವಿ, ಅಪ್ಪು, ತೇಜಸ್ಸು ಮುಂತಾದ ಮಹಾ ಭೂತಗಳ ಸಂಬಂಧವಿಲ್ಲ : ಆದುದರಿಂದ ಪರಿಶುದ್ಧ ಆತ್ಮಕ್ಕೆ ಯಾವ ಶರೀರದ ಸಂಪರ್ಕವೂ ಇಲ್ಲ.

Re-printed from Mysore Vysya Patrika
(June 1959)

# ಭಗವದ್ಗೀತಾ ಅಧ್ಯಾಯ ೧೩. ಪಾಠ ೪

ಆದುದರಿಂದ ಅವನು ಅಥವ ಅದು ನಿಜವಾಗಿಯೂ ಭೂತಗಳ ಹೊರಗೆ ಇರುವುದು. ಆದರೆ ಬದ್ಧದೆಶೆಯಲ್ಲಿ ಮಾತ್ರ ಜೀವಾತ್ಮನು ಕರ್ಮಕ್ಕೆ ಅನುಗುಣವಾಗಿ ತಾನು ಸ್ವೀಕರಿಸಿರುವ ಭೂತಗಳ ಶರೀರಗಳ ಒಳಗೆ ಇರುವನು.

## 11. ಅಚರಂ–ಚರಂ-ಏವ–ಚ.

ಬದ್ಧದೆಶೆಯಲ್ಲಿರುವ ಜೀವಾತ್ಮನು ತನ್ನ ಶರೀರ ಮತ್ತು ಇಂದ್ರಿಯಗಳ ದ್ವಾರ ಬೇರೆಬೇರೆ ಕಡೆಗಳಲ್ಲಿರುವ ವಸ್ತುಗಳ ಮೂಲಕ ವಿಷಯಗಳನ್ನು ಅನುಭವಿಸುತ್ತಾ ಸುಖಪಡುವುದಕ್ಕೋಸ್ಕರ ಅವನು ಅಲ್ಲಿ, ಇಲ್ಲಿ, ಅನೇಕ ಕಡೆಗಳಲ್ಲಿ ಸಂಚರಿಸುವ ಶಕ್ತಿಯನ್ನು ಪಡೆದಿರುವನು ಮತ್ತು ಸಂಚರಿಸುವನು. ಆದರೆ ಶುದ್ಧ ಪ್ರತ್ಯಗಾತ್ಮನಿಗೆ ತನ್ನ ನಿಜಸ್ವರೂಪದಲ್ಲಿ ಸ್ವಾಭಾವಿಕವಾದ ಆನಂದವು ಯಾವಾಗಲೂ ಇರುತ್ತದೆ. ಆದುದರಿಂದ ಅವನು ಇಂದ್ರಿಯಗಳ ಮೂಲಕ ಸುಖಗಳನ್ನು ಅನುಭವಿಸುವುದಕ್ಕೋಸ್ಕರ ಅಲ್ಲಿ, ಇಲ್ಲಿ ಸಂಚರಿಸಬೇಕಾದ ಅವಶ್ಯಕತೆಯೇ ಇರುವುದಿಲ್ಲ. ಪರಿಶುದ್ಧ ಆತ್ಮದ ಧರ್ಮಜ್ಞಾನವು ವಿಭುವಾಗಿ ಎಲ್ಲೆಲ್ಲಿಯೂ ವ್ಯಾಪಿಸಿ ಆನಂದವನ್ನುಂಟು ಮಾಡುವುದರಿಂದ ಅದು ಅಚರವಾಗಿದೆ.

## 12. ಸೂಕ್ಷ್ಮತ್ವಾತ್-ತತ್-ಅವಿಜ್ಞೇಯಂ.

ಪರಿಶುದ್ಧ ಆತ್ಮವು ಸರ್ವಜ್ಞವಾಗಿಯೂ ಸರ್ವಶಕ್ತಿಯಿಂದ ಕೂಡಿದ್ದಾಗಿಯೂ ಬದ್ಧದೆಶೆಯಲ್ಲಿ ಆಯಾಯ ಶರೀರಗಳಲ್ಲಿ ಅತಿ ಸೂಕ್ಷ್ಮ ಸ್ವರೂಪದಿಂದ ಕೂಡಿರುವುದು. ಆದುದರಿಂದ ಬಹುಮಂದಿ ಅಜ್ಞಾನಿಗಳು ಅಥವ ಕರ್ಮಬಂಧಕ್ಕೆ ಒಳಪಟ್ಟಿರುವವರು ಈ ಜೀವಾತ್ಮವು ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರಗಳಿಗಿಂತ ಬೇರೆಯಾಗಿರುವುದು ಎಂದು ತಿಳಿದುಕೊಳ್ಳುವ ಶಕ್ತಿಯನ್ನು ಪಡೆದಿಲ್ಲ. ಅಂದರೇನು, ಅವರು ತಮ್ಮ ಅತಿ ಸೂಕ್ಷ್ಮವಾದ ಶುದ್ಧ ಪ್ರತ್ಯಗಾತ್ಮ ಸ್ವರೂಪವನ್ನೇ ತಿಳಿಯಲಾರರು.

## 13. ತತ್‌ದೂರಸ್ಥಂ–ಚ–ಅಂತಿಕೇ–ಚ

ಅನೇಕ ಮನುಷ್ಯರು ಮಾನಿತ್ವ, ದಂಭಿತ್ವ ಮುಂತಾದ ಅನೇಕ ಅಜ್ಞಾನ ಅಥವ ದುಷ್ಟ ಅಭ್ಯಾಸಗಳನ್ನು ಜೀವನದಲ್ಲಿ ಆಚರಿಸುತ್ತಲೇ ಇರುವರು; ಏಕೆಂದರೆ ಅವರು ತಮ್ಮನ್ನು ಮನಸ್ಸಿನಿಂದ ಕೂಡಿದ ದೇಹವೇ ಎಂದು ಧೃಢವಾಗಿ ನಂಬಿ ಅವುಗಳ ಮೂಲಕ ಸ್ವಾರ್ಥ ಇಂದ್ರಿಯ ಸುಖಗಳನ್ನು ಪಡೆಯಬೇಕೆಂದು ತೀರ್ಮಾನಿಸಿರುವರು. ತಮ್ಮ ನಿಜಸ್ವರೂಪವು ಪರಿಶುದ್ಧ ಆತ್ಮವು ಎಂಬುದು ಅವರಿಗೆ ಸ್ವಲ್ಪವೂ ತಿಳಿದಿಲ್ಲ. ಆದುದರಿಂದ ಅಂಥವರಿಗೆಲ್ಲಾ ಶುದ್ಧಪ್ರತ್ಯಗಾತ್ಮನು ದೂರದಲ್ಲಿಯೇ ಇರುವನು. ಆದರೆ ಮುಮುಕ್ಷುಗಳು ಅಮಾನಿತ್ವ, ಅದಂಭಿತ್ವ, ಅಹಿಂಸೆ, ಕ್ಷಾಂತಿ ಮುಂತಾದ ಜ್ಞಾನಾಭ್ಯಾಸಗಳನ್ನು ಜೀವನದಲ್ಲಿ ಆಚರಿಸುತ್ತಾ ಪರಿಶುದ್ಧ ಆತ್ಮಸಾಕ್ಷಾತ್ಕಾರವನ್ನು ಪಡೆದಿರುವರು. ಅಂಥಾ ಜ್ಞಾನಿಗಳಿಗೆ ಶುದ್ಧ ಪ್ರತ್ಯಗಾತ್ಮನು ಹತ್ತಿರದಲ್ಲಿಯೇ ಇರುವನು.

## 14. ಅವಿಭಕ್ತಂ–ಚ–ಭೂತೇಷು–ವಿಭಕ್ತಂ–ಇವ–ಚ–ಸ್ಥಿತಂ.

ಸರ್ವ ಭೂತಗಳಲ್ಲಿರುವ ಪರಿಶುದ್ಧ ಆತ್ಮವು ತನ್ನ ನಿಜಸ್ವರೂಪದಲ್ಲಿ ಕೇವಲ ಜ್ಞಾನಾಕಾರವುಳ್ಳದ್ದು; ಅಂದರೆ ಶುದ್ಧ ಪ್ರತ್ಯಗಾತ್ಮನು ಜ್ಞಾನಸ್ವರೂಪನು. ಎಲ್ಲಾ ಶುದ್ಧ ಪ್ರತ್ಯಗಾತ್ಮರಿಗೂ ಅರಿಯುವುದೇ ಸ್ವಭಾವವಾದ್ದರಿಂದ ಒಬ್ಬ ಶುದ್ಧ ಪ್ರತ್ಯಗಾತ್ಮನಿಗೂ ಇನ್ನೊಬ್ಬ ಶುದ್ಧ ಪ್ರತ್ಯಗಾತ್ಮನಿಗೂ ನಿಜಸ್ವರೂಪದಲ್ಲಿ ವಿಭಾಗವನ್ನೇ ಮಾಡುವುದಕ್ಕೆ ಆಗುವುದಿಲ್ಲ; ಆದುದರಿಂದ ಭೂತಗಳಲ್ಲಿರುವ ಪರಿಶುದ್ಧ ಆತ್ಮವು ಅವಿಭಕ್ತವು. ಅಂದರೇನು ಶುದ್ಧಪ್ರತ್ಯಗಾತ್ಮನನ್ನು ಇವನು ದೇವ, ಇವನು ಮನುಷ್ಯ, ಇದು ಹಸು ಎಂದು ಗುರ್ತಿಸಿ ವಿಭಾಗ ಮಾಡಲಾಗುವುದಿಲ್ಲ. ಆದರೆ ಬದ್ಧದೆಶೆಯಲ್ಲಿ ಜೀವಾತ್ಮನು ಕರ್ಮದಿಂದ ಶರೀರಗಳೊಡನೆಯೇ ಕೂಡಿರುವುದರಿಂದ ಅವನನ್ನು ಶರೀರಕ್ಕಿಂತ ಬೇರೆಯಾಗಿ ತಿಳಿಯುವುದಕ್ಕೇ ಆಗುವುದಿಲ್ಲ ಮತ್ತು ಬೇರೆ ಬೇರೆ ಜೀವಾತ್ಮರುಗಳ ಶರೀರಗಳು ಬೇರೆಬೇರೆಯಾಗಿ ಬೇರೆ ಬೇರೆ ನಾಮರೂಪಗಳನ್ನು ಪಡೆದಿವೆ. ಆದುದರಿಂದ ಈ

ದೆಶೆಯಲ್ಲಿ ಜೀವಾತ್ಮರನ್ನು ಆಯಾ ಭೂತಗಳ .ಶರೀರಗಳ ಸ್ವರೂಪಗಳ ಪ್ರಕಾರ ಬೇರೆ ಬೇರೆಯಾಗಿ ವಿಭಾಗಿಸಬಹುದು. ಅಂದರೇನು, ಇವನು ಮನುಷ್ಯ ಜೀವಾತ್ಮ, ಇದು ಹಸು ಜೀವಾತ್ಮ. ಇದು ಆನೆ ಜೀವಾತ್ಮ ಎಂದು ಬೇರೆ ಬೇರೆಯಾಗಿ ವಿಭಾಗಿಸಿ ತಿಳಿಯುತ್ತಾರೆ.

15. ಭೂತ ಭರ್ತೃ–ಚ–ತತ್–ಜ್ಞೇಯಂ–ಗ್ರಸಿಷ್ಣು–ಪ್ರಭ–ವಿಷ್ಣು ಚ.

ಇನ್ನೂ ಕೆಲವು ಪ್ರಕಾರಗಳಿಂದ ದೇಹಕ್ಕಿಂತಲೂ ಶುದ್ಧ ಪ್ರತ್ಯಗಾತ್ಮನು ಬಿನ್ನನೆಂದು ಕೆಳಗಿನ ಕಾರಣಗಳಿಂದ ತಿಳಿದು ಬರುತ್ತದೆ. ಮೃತಶರೀರದಲ್ಲಿ ಜೀವಾತ್ಮನಿಲ್ಲದಿರುವುದರಿಂದ ಅದು ಶರೀರವನ್ನು ಭರಿಸುವುದಿಲ್ಲ ಗ್ರಹಿಸುವುದಿಲ್ಲ ಮತ್ತು ಅದ ರಲ್ಲಿ ವಿಕಾರವನ್ನು ಉಂಟುಮಾಡುವುದಿಲ್ಲ. ಆದರೆ ಮನುಷ್ಯ ಶರೀರವು ಜೀವಿಸಿರುವಾಗ ಆ ಶರೀರಕ್ಕಿಂತ ಬೇರೆಯಾದ ಜೀವಾ ತ್ಮನು ಅದರೊಳಗೆ ಋಜಮಾನನಾಗಿರುವುದರಿಂದ ಆ ಜೀವಾ ತ್ಮನು ಆ ಶರೀರವನ್ನು ಭರಿಸುತ್ತಾನೆ, ಗ್ರಹಿಸುತ್ತಾನೆ ಮತ್ತು ಅದರಲ್ಲಿ ವಿಕಾರಗಳನ್ನು ಉಂಟು ಮಾಡುತ್ತಾನೆ ಎಂದು ತಿಳಿ ಯಬೇಕು. ಪರಿಶುದ್ಧಾತ್ಮ ಸ್ವರೂಪಕ್ಕೆ ಶರೀರಸಂಬಂಧವೇ ಇಲ್ಲದಿದ್ದಾಗ್ಯೂ ಕರ್ಮಬಂಧದಿಂದ ಶರೀರವನ್ನು ಪಡೆದರೆ ಆಗ ಅದು ದೇಹರೂಪವಾಗಿ ಸೇರಿರುವ ಪೃಥಿವ್ಯಾದಿ ಭೂತಗಳನ್ನು ಭರಣ ಮಾಡುವುದು, ಪೃಥಿವ್ಯಾದಿಭೂತಗಳ ಪರಿಣಾಮಗಳಾದ ಶರೀರದ ಅವಯವಗಳನ್ನು ಗ್ರಹಿಸುವದು ಮತ್ತು ಶರೀರದಲ್ಲಿ ವಿಧವಿಧವಾದ ವಿಕಾರಗಳನ್ನು ಉಂಟುಮಾಡುತ್ತಾ ಹೊಸಹೊಸ ಶರೀರಗಳನ್ನು ಸೃಷ್ಟಿಸುತ್ತದೆ. ಹೀಗೆ ನಾವು ತಿಳಿದರೆ ಜೀವಾ ತ್ಮನು ನಿಜಸ್ವರೂಪದಲ್ಲಿ ಶರೀರಕ್ಕಿಂತ ಬೇರೆಯಾದವನು ಎಂದು ತೀರ್ಮಾನವಾಗುತ್ತದೆ.

16. ಜ್ಯೋತಿಷಾಂ-ಅಪಿ-ತತ್-ಜ್ಯೋತಿಃ

ಸೂರ್ಯ, ಬೆಂಕಿ, ದೀಪ ಮೊದಲಾದ ಪ್ರಕಾಶವಸ್ತುಗಳಿ ಗೆಲ್ಲಾ ಪರಿಶುದ್ಧ ಆತ್ಮ ಸ್ವರೂಪವು ಜ್ಯೋತಿಸ್ಸಾಗಿ ಅಂದರೆ ಪ್ರಕಾಶವನ್ನು ಉಂಟುಮಾಡತಕ್ಕದ್ದಾಗಿರುವುದು. ಜ್ಞಾನ ಸ್ವರೂಪನಾದ ಜೀವಾತ್ಮನು ಈ ಜ್ಯೋತಿಸ್ಸಿನಿಂದ ಕೂಡಿದ ಪದಾ ರ್ಥಗಳಿಗೆ ಹೇಗೆ ಪ್ರಕಾಶವನ್ನು ಉಂಟುಮಾಡುತ್ತಾನೆ ಎಂಬು ದನ್ನು ತಿಳಿಯೋಣ. (i) ನಾವು ಕತ್ತಲೆಯಲ್ಲಿ ಕಣ್ಣಿನಿಂದ ಒಂದು ಕೊಡವನ್ನು ನೋಡಲು ಪ್ರಯತ್ನಪಟ್ಟಾಗ್ಯೂ ಆ ಕೊಡವು ನಮಗೆ ಕಾಣುವುದಿಲ್ಲ. ಕಾರಣವೇನು ? ಆ ಕೊಡ ವನ್ನು ಕತ್ತಲೆಯು ಆವರಿಸಿಕೊಂಡಿರುವುದರಿಂದ ಕಣ್ಣಿನಿಂದ ಅದನ್ನು ನೋಡುವುದಕ್ಕೆ ಪ್ರತಿಬಂಧಕವುಂಟಾಗಿರುತ್ತದೆ. ಆದರೆ ಸೂರ್ಯೋದಯವಾದರೆ ಸೂರ್ಯನ ಪ್ರಕಾಶವು ಕತ್ತಲೆ ಯೆಂಬ ಪ್ರತಿಬಂಧಕವನ್ನು ಹೋಗಲಾಡಿಸುತ್ತದೆ; ಅಷ್ಟೆ. ಅಚೇನವಾದ ಕಣ್ಣು ನಿಜವಾಗಿ ಕೊಡವನ್ನು ನೋಡುವುದಿಲ್ಲ. ಶರೀರದಲ್ಲಿ ಕಣ್ಣಿನ ಹಿಂದೆ ಸೂಕ್ಷ್ಮ ಸ್ವರೂಪನಾಗಿ ಇರುವ ಜ್ಞಾನಸ್ವರೂಪನಾದ ಜೀವಾತ್ಮನು ಕಣ್ಣಿನ ಸಹಾಯದಿಂದ ಸೂರ್ಯನ ಪ್ರಕಾಶದಿಂದ ಕತ್ತಲೆಯೆಂಬ ಪ್ರತಿಬಂಧಕವಿಲ್ಲದ ಕೊಡವನ್ನು ನೋಡುತ್ತಾನೆ. ಆದುದರಿಂದ ಜ್ಞಾನಸ್ವರೂಪನಾದ ಪರಿಶುದ್ಧ ಆತ್ಮನು ಕಣ್ಣಿಗೂ-ಸೂರ್ಯನಿಗೂ ಪ್ರಕಾಶಕರನಾಗಿರುವ ಜ್ಯೋತಿಸ್ಸಾಗಿದ್ದಾನೆ (ii) ಸೂರ್ಯನು ತನ್ನ ಪ್ರಕಾಶ ಸ್ವಭಾವವನ್ನು ತಾನೇ ತಿಳಿದುಕೊಳ್ಳಲಾರನು ; ಮನುಷ್ಯನಲ್ಲಿ ರುವ ಆತ್ಮಜ್ಞಾನವು ಸೂರ್ಯನಪ್ರಕಾಶವನ್ನು ತಿಳಿಯುತ್ತದೆ. ಆದುದರಿಂದ ಆತ್ಮಜ್ಞಾನವೆಲ್ಲ ಸೂರ್ಯನಿಗೆ ಪ್ರಕಾಶವನ್ನು ಕೊಡು ತ್ತದೆ. ಹಾಗೆಯೇ ದೀಪಾದಿಗಳಲ್ಲಿಯೂ ಕೂಡ ಆತ್ಮಕಾಂತಿ ಯಾದ ಜ್ಞಾನವೇ ಪ್ರಕಾಶಿಸುತ್ತದೆ.

17. ತಮಸಃ– ಪರಂ–ಉಚ್ಯತೆ.

ತಮಸ್ಸೆಂದರೆ ಪ್ರಕೃತಿಯು ; ಪರಿಶುದ್ಧ ಆತ್ಮ ವಸ್ತುವು ಸೂಕ್ಷ್ಮ ಪ್ರಕೃತಿಗಿಂತಲೂ ಬೇರೆಯಾದದ್ದು ಎಂದು ಹೇಳಲ್ಪಡು ತ್ತದೆ. ಅಂದರೇನು ಜೀವಾತ್ಮನಿಗೆ ಶರೀರ ಸಂಬಂಧವಿದೆ, ಆದರೆ ಶುದ್ಧ ಪ್ರತ್ಯಗಾತ್ಮನಿಗೆ ಕರ್ಮದಿಂದ ಉಂಟಾದ ಪ್ರಕೃತಿ ಸಂಬಂಧವು ಲವಲೇಶವೂ ಇರುವುದಿಲ್ಲ ಎಂದು ಉಪನಿಷತ್ತಿ ನಲ್ಲಿ ಹೇಳಿದೆ.

18 ಜ್ಞಾನಂ–ಜ್ಞೇಯಂ–ಜ್ಞಾನಗಮ್ಯ– ಹೃದಿಸರ್ವಸ ವಿಷ್ಠಿತಂ.

ಶುದ್ಧ ಪ್ರತ್ಯಗಾತ್ಮನು ಜ್ಞಾನಸ್ವರೂಪನು ಅಥವ ಜ್ಞಾನವೇ ಆಕಾರವಾಗಿಉಳ್ಳವನು ಎಂದು ತಿಳಿಯತಕ್ಕದ್ದು (ಜ್ಞಾನಂ ಜ್ಞೇಯಂ) ಅಮಾನಿತ್ವಾದಿಜಾನಾಭ್ಯಾಸಗಳಿಂದಲೇ ಪರಿಶುದ್ಧ ಆತ್ಮನ ಸಾಕ್ಷಾತ್ಕಾರವು ಉಂಟಾಗುತ್ತದೆ (ಜ್ಞಾನಗಮ್ಯಂ) ಮತ್ತು ಇವನು ಮನುಷ್ಯನೇ ಮುಂತಾದ ಸಕಲ ಪ್ರಾಣಿಗಳ ಹೃದಯದಲ್ಲಿಯೇ ವಿಶೇಷವಾಗಿ ನೆಲೆಗೊಂಡು ಇದ್ದಾನೆ. ಇದರ ತಾತ್ಪರ್ಯವೇನು ? ಪ್ರತಿಯೊಬ್ಬ ಮನುಷ್ಯನು “ನಾನು ನಿಜವಾಗಿ ಜ್ಞಾನಸ್ವರೂಪನು ; ನನ್ನ ಶರೀರಕ್ಕಿಂತ ಬೇರೆಯಾದ ನನ್ನ ಜ್ಞಾನಸ್ವರೂಪವನ್ನು ಸಾಕ್ಷಾತ್ಕರಿಸಬಲ್ಲೆನು; ಹಾಗೆ ಸಾಕ್ಷಾ ತ್ಕರಿಸುವುದಕ್ಕಾಗಿ ನಾನು ಅಮಾನಿತ್ವಾದಿ ಜ್ಞಾನಾಭ್ಯಾಸಗಳನ್ನು ಬಾಳಿನಲ್ಲಿ ಆಚರಿಸುತ್ತೇನೆ ; ಈ ನನ್ನ ಜ್ಞಾನಸ್ವರೂಪವು ನನ್ನ ಹೃದಯದಲ್ಲಿಯೇ ಇದೆ” ಎಂದು ಮನನ ಮಾಡುತ್ತಲೇ ಇರಬೇಕು

## ಜ್ಞೇಯವು ಸಗುಣಬ್ರಹ್ಮನು
(ಮೂರನೆಯ ಅಭಿಪ್ರಾಯ)

ಜ್ಞೇಯವು ಬೃಹತ್ತಾದ ಸಗುಣಬ್ರಹ್ಮನೇ ಆಗಿರುವನು; ಅವನು ಜನನ ಮರಣಗಳನ್ನು ಪಡೆಯುವ ಪ್ರಾಕೃತಿಕ ದೇಹಾದಿಗಳು ಮತ್ತು ಅವುಗಳಿಗೆ ಸಂಬಂಧಪಟ್ಟ ಕರ್ಮಗಳು ಇಲ್ಲದವನು (ಅನಾದಿಮತ್). ಶ್ರುತಿಯಲ್ಲಿ ಸಗುಣಬ್ರಹ್ಮನು "ಸತ್ ಅಲ್ಲ" ಎಂದು ಹೇಳಿದೆ. ಅಂದರೇನು ಅವನು ಪ್ರಪಂಚದಲ್ಲಿ ವಿಧ ವಿಧವಾದ ಆಕಾರಗಳನ್ನು ಪಡೆದಿರುವ ಪೃಥ್ವೀ, ಜಲ, ತೇಜಸ್ಸು ಅಲ್ಲ. ಅವನ ಸ್ವರೂಪವು ಅವುಗಳಿಗಿಂತ ಬೇರೆಯಾಗಿಯೇ ಇರುವುದು; ಅವನು ಅಸತ್ತೂ ಅಲ್ಲ ಎಂದೂ ಹೇಳಿದೆ, ಏಕೆಂದರೆ ಅವನ ಸ್ವರೂಪವು ಯಾವ ಆಕಾರವನ್ನೂ ಪಡೆಯದಿರುವ ವಾಯು ಆಕಾಶಗಳಲ್ಲ; ಅವುಗಳಿಗಿಂದ ಬೇರೆಯೇ ಆಗಿದೆ.

ಆಸಗುಣಬ್ರಹ್ಮನು ಎಲ್ಲಾ ಸ್ಥಳಗಳಲ್ಲಯೂ ಕೈಗಳನ್ನೂ ಕಾಲುಗಳನ್ನೂ ಕಣ್ಣುಗಳನ್ನೂ, ತಲೆಗಳನ್ನೂ, ಮುಖಗಳನ್ನೂ ಕಿವಿಗಳನ್ನೂ ತನ್ನ ವಿಶ್ವರೂಪದಲ್ಲಿ ಪಡೆದಿರುವನು. ಆ ಸಗುಣ ಬ್ರಹ್ಮನು ಪ್ರಪಂಚದಲ್ಲಿರುವ ಎಲ್ಲಾ ಪದಾರ್ಥಗಳನ್ನೂ ಒಳಗೂ ಹೊರಗೂ ಆವರಿಸಿ ವ್ಯಾಪಿಸಿದ್ದಾನೆ.

ಸಗುಣ ಬ್ರಹ್ಮನು ಎಲ್ಲಾ ಇಂದ್ರಿಯಗಳೂ ಮತ್ತು ಶಬ್ದಾದಿಗುಣಗಳೂ ಇವುಗಳನ್ನು ಪ್ರಕಾಶಪಡಿಸುವನು; ಆದರೆ ಅವನು ಪ್ರಕೃತಿಯಿಂದ ಉಂಟಾಗಿರುವ ಈ ಎಲ್ಲಾ ಇಂದ್ರಿಯಗಳನ್ನೂ ಪಡೆದಿಲ್ಲ. ಸಗುಣಬ್ರಹ್ಮನಿಗೆ ಪುಣ್ಯ ಪಾಪಗಳ ವಾಸನೆ ಇರುವುದಿಲ್ಲ. ಆದಾಗ್ಯೂ ಸಮಸ್ತವನ್ನೂ ಹೊತ್ತುಕೊಂಡಿರುವನು ಮತ್ತು ಅವನಿಗೆ ಪ್ರಾಕೃತಿಕ ಸತ್ವ-ರಜಸ್ತಮೋಗುಣಗಳು ಇಲ್ಲದಿದ್ದಾಗ್ಯೂ ಅವನು ಜ್ಞಾನ. ಬಲ, ಆನಂದ ಮೊದಲಾದ ಅನೇಕ ಕಲ್ಯಾಣಗುಣಗಳನ್ನೂ ಅನುಭವಿಸುತ್ತಿರುವನು.

ಸಗುಣಬ್ರಹ್ಮನು ಎಲ್ಲಾ ಪ್ರಾಣಿಗಳ ಹೊರಗೆ ಇರುವನು; ಆದರೆ ಅವುಗಳ ಒಂದೊಂದರೊಳಗೂ ಅಂತರ್ಯಾಮಿಯಾಗಿಯೂ ಪ್ರವೇಶಿಸಿ ಇರುವನು. ಸಗುಣಬ್ರಹ್ಮನು ಸರ್ವದಾಗುಣಪೂರ್ಣನಾಗಿರುವುದರಿಂದ ತನ್ನ ಸರ್ವಜ್ಞತ್ವಾದಿ ಗುಣಗಳಿಂದ ಯಾವಾಗಲೂ ಚಲಿಸದೇ ಇರುವನು. ಆದರೆ ಸರ್ವದೇಶಗಳಲ್ಲಿಯೂ ಸಂಚರಿಸುವವನೂ ಅವನೇ ಸಗುಣಬ್ರಹ್ಮನೂ ಕೂಡ ಬಹಳ ಸೂಕ್ಷ್ಮನಾಗಿರುವುದರಿಂದ ಅವನನ್ನು ಸಾಧಾರಣವಾದ ಬಹುಮಂದಿ ಜನರು ತಮ್ಮ ಪ್ರಾಕೃತವಾದ ಚಕ್ಷುರಾದಿಗಳಿಂದ ತಿಳಿದುಕೊಳ್ಳಲಾರರು. ಸಗುಣಬ್ರಹ್ಮನು ಅವನನ್ನು ಸಾಕ್ಷಾತ್ಕರಿಸಿದವರಿಗೆ ಸಮೀಪದಲ್ಲಿ ಇರುವನು. ಅವನನ್ನು ಸಾಕ್ಷಾತ್ಕರಿಸದವರಿಗೆಲ್ಲಾ ದೂರದಲ್ಲಿಯೇ ಇರುವನು!

ಸಗುಣ ಬ್ರಹ್ಮನು ಸರ್ವಪ್ರಾಣಿಗಳಲ್ಲಿಯೂ ಅವುಗಳ ನಿಯಾಮಕವಾಗಿ ಒಬ್ಬನೇ ಆಗಿದ್ದಾಗ್ಯೂ ಅಂದರೆ ಬಿನ್ನವಾಗದೇ ಒಂದೇ ರೂಪವನ್ನು ಪಡೆದಿದ್ದಾಗ್ಯೂ ಅವನು ಅಜ್ಞರಿಗೆ ಭೂತಗಳಲ್ಲಿ ಬೇರೆ ಬೇರೆ ರೂಪಗಳುಳ್ಳವನೆಂದು ತೋರುವ ಹಾಗೆ ನಿಂತಿರುವನು. ಸಗುಣಬ್ರಹ್ಮನು ಸರ್ವ ಪ್ರಾಣಿಗಳನ್ನೂ ರಕ್ಷಿಸುವನೂ, ಪ್ರಳಯಕಾಲದಲ್ಲಿ ಸರ್ವವನ್ನೂ ಭಕ್ಷಿಸುವನು. ಮತ್ತು ಸೃಷ್ಟಿಕಾಲದಲ್ಲಿ ಪುನಃ ಎಲ್ಲವನ್ನೂ ಸೃಷ್ಟಿಸುವನು ಎಂದು ಹೀಗೆ ತಿಳಿಯಬೇಕು.

ಆ ಸಗುಣಬ್ರಹ್ಮನು ತೇಜಸ್ಸಿನಿಂದ ಕೂಡಿರುವ ಸೂರ್ಯಾದಿಗಳಿಗೂ ಕೂಡ ಕಾಂತಿಯನ್ನು ಅಂದರೆ ಪ್ರಕಾಶ ಶಕ್ತಿಯನ್ನು ಕೊಡುವನು ಮತ್ತು ಸತ್ತ್ವ ರಜಸ್ತಮೋಗುಣಗಳಿಂದ ಕೂಡಿರುವ ಪ್ರಕೃತಿಯನ್ನು (ತಮಃಸಃ) ಮೀರಿಸಿರುವನು; ಅಂದರೆ ಅವುಗಳಿಗೆ ಬದ್ಧನಾಗಿರುವುದಿಲ್ಲ ಎಂದು ಶ್ರುತಿಯಲ್ಲಿ ಹೇಳಲ್ಪಡುತ್ತಾನೆ. ಒಟ್ಟಿನಲ್ಲಿ, ಸಗುಣ ಬ್ರಹ್ಮನು ಜ್ಞಾನಪ್ರಕಾಶಸ್ವರೂಪನು, ಸಾಕ್ಷಾತ್ಕರಿಸಲ್ಪಡತಕ್ಕವನು,ಜ್ಞಾನದಿಂದ ಹೊಂದುವುದಕ್ಕೆ ಯೋಗ್ಯನು ಮತ್ತು ಸಮಸ್ತ ಪ್ರಾಣಿಗಳ ಹೃದಯಗಳಲ್ಲಿಯೂ ನಿಯಾಮಕನಾಗಿರುವನು.

## ಜ್ಞೇಯವು ಅಖಂಡ ಶುದ್ಧ-ಶ್ರೇಷ್ಠಜ್ಞಾನ
(ನಾಲ್ಕನೆಯ ಅಭಿಪ್ರಾಯ)

ಪ್ರತಿಯೊಬ್ಬ ಮನುಷ್ಯನಲ್ಲಿಯೂ ಏಕೆ ಪ್ರತಿಯೊಂದು ಪ್ರಾಣಿಯಲ್ಲಿಯೂ ಎರಡು ವಿಧವಾದ ಜ್ಞಾನಗಳಿವೆ—ಅಜ್ಞಾನದಿಂದ ಉಂಟಾದ ಇಂದ್ರಿಯ, ಮನ, ಬುದ್ಧಿ ಇವುಗಳ ಮೂಲಕ ಉಂಟಾಗುವ ಅಂತರ ಮತ್ತು ಬಾಹ್ಯ ಪದಾರ್ಥಗಳನ್ನು ತಿಳಿಯುವ "ವೃತ್ತಿ ಜ್ಞಾನವು" ಮೊದಲನೆಯದು. ಈ ವೃತ್ತಿಜ್ಞಾನಗಳಿಗೆಲ್ಲಾ ಆಧಾರವಾದ ಆಶ್ರಯವಾದ ಕೊನೆಯಕಾರಣವಾದ ಅಖಂಡ ಶುದ್ದ ಅಥವ ಶ್ರೇಷ್ಠಜ್ಞಾನವು ಎರಡನೆಯದು. ಯಾವ ಜ್ಞಾನವು ತನ್ನಲ್ಲಿಯೇ ಇರುವ ಮತ್ತು ಎಲ್ಲಾ ಪ್ರಾಣಿಗಳಲ್ಲಿಯೂ ಇರುವ ಅಖಂಡ ಶ್ರೇಷ್ಠಜ್ಞಾನವನ್ನು ಯೋಗಾಭ್ಯಾಸದಿಂದ ಪಡೆಯುತ್ತಾನೋ ಅವನು "ಜ್ಞೇಯದ" ಸ್ವರೂಪವನ್ನು ತಿಳಿದವನಾಗಿ ಶಾಶ್ವತವಾದ ಅಮೃತತ್ವವನ್ನು ಅಥವ ಶ್ರೇಯಸ್ಸನ್ನು ಪಡೆಯುತ್ತಾನೆ. ಹಾಗಾದರೆ ಈ ಅಖಂಡ ಶುದ್ಧಶ್ರೇಷ್ಠ ಜ್ಞಾನದ ಲಕ್ಷಣವೇನು?

ಅಖಂಡ ಶುದ್ಧಜ್ಞಾನಕ್ಕೆ ಆದಿಯೂ ಇಲ್ಲ; ಅಂತ್ಯವೂ ಇಲ್ಲ ಏಕೆಂದರೆ ಇದು ಕಾಲದ ನಿಯಮಗಳಿಗೆ ಒಳಪಟ್ಟಿಲ್ಲ. ಕಾಲ ದೇಶ ಅವಸ್ಥೆಗಳು ಮನುಷ್ಯನ ಅಜ್ಞಾನದಿಂದ ಉಂಟಾದ ವೃತ್ತಿ

ಜ್ಞಾನಕ್ಕೆ ಒಳಪಟ್ಟಿದೆಯೇ ವಿನಹ ಅಖಂಡ ಶುದ್ಧಜ್ಞಾನಕ್ಕೆ ಸಂಬಧಪಟ್ಟಿಲ್ಲ. ಆದುದರಿಂದ ಕಾಲಾತೀತವಾದ ಶುದ್ಧ ಜ್ಞಾನಕ್ಕೆ ಕಾಲಸಂಬಂಧದಿಂದ ಉಂಟಾಗುವ ಆರಂಭವೂ ಇಲ್ಲ; ಕೊನೆಯೂ ಇಲ್ಲ ಅಖಂಡ ಶುದ್ಧಜ್ಞಾನವೇ ಪರಬ್ರಹ್ಮವು; ಏಕೆಂದರೆ ಅದು ಅಜ್ಞಾನದ ವಿಕಾರವನ್ನು ಪಡೆದರೆ ಜಗತ್ತಿನ ಸೃಷ್ಟಿ ಸ್ಥಿತಿ ಲಯವನ್ನುಂಟುಮಾಡುವ ಕೊನೆಯ ಕಾರಣವು ಮತ್ತು ಜಗತ್ತಿನ ಅನುಭವಗಳೊಳಗೆ ಇಲ್ಲದೆ ಅವುಗಳ ಆಚೆ ಇರುವುದು. ಅದನ್ನು ತಿಳಿಯುವ ಪ್ರಮೆಯು ಅಥವ ಸಾಕ್ಷಿಯು; ಆದರೆ ಅದು ಯಾವ ಪ್ರಮೇಯವೂ ಅಥವ ವಸ್ತುವು ಅಲ್ಲ. ಅಖಂಡ ಶುದ್ಧ ಜ್ಞಾನದ ಆಧಾರದಿಂದಲೇ ಅಜ್ಞಾನರೂಪವಾದ ಎಲ್ಲಾ ವೃತ್ತಿಜ್ಞಾನಿಗಳು ಉಂಟಾಗುವುದರಿಂದ ಅದು ಗಗನ ಪುಷ್ಪದಹಾಗೆ "ಅಸತ್" ಅಲ್ಲ. "ಸತ್" ಮತ್ತು "ಅಸತ್" ಇವುಗಳು ಬುದ್ಧಿಯಲ್ಲಿ ಉಂಟಾಗುವ ವೃತ್ತಿಜ್ಞಾನದ ಪ್ರಕಾರಗಳು. ಹೀಗಿರುವಾಗ ಈ ವೃತ್ತಿ ಜ್ಞಾನಗಳಿಗೆ ಪ್ರಕಾಶವನ್ನುಂಟುಮಾಡುವ ಅಖಂಡ ಶುದ್ಧಜ್ಞಾನವನ್ನು "ಸತ್" ಎಂದೂ ಮತ್ತು "ಅಸತ್" ಎಂದೂ ಕರೆಯಕೂಡದಲ್ಲವೆ ?

ಪ್ರಪಂಚದಲ್ಲಿ ಕೋಟ್ಯಾನುಕೋಟಿ ಮನುಷ್ಯರು ಮತ್ತು ಪ್ರಾಣಿಗಳು ಜೀವಿಸಿರುವರು ಮತ್ತು ಜೀವಿಸಿರುವುವು. ಇವುಗಳಿಗೆ ಎಲ್ಲೆಲ್ಲಿಯೂ ಕೈಗಳೂ, ಕಾಲುಗಳೂ, ಕಣ್ಣುಗಳೂ, ತಲೆಗಳೂ, ಮುಖಗಳೂ ಮತ್ತು ಕಿವಿಗಳೂ ಅನಂತವಾಗಿ ಕಂಡುಬರುವುವು. ಆದರೆ ಕೈ, ಕಾಲು, ಕಣ್ಣು, ಕಿವಿ, ಮುಖ, ತಲೆ ಮುಂತಾದುವುಗಳು ತಮ್ಮ ತಮ್ಮ ಜೀವಕಾರ್ಯಗಳನ್ನು ಯಾವ ಚೈತನ್ಯ ಶಕ್ತಿಯ ಆಧಾರದಿಂದ ನಡೆಸುತ್ತವೆ ? ಈ ಕೈಕಾಲು ಮೊದಲಾದ ಇಂದ್ರಿಯಗಳು ಅನೇಕಾನೇಕ ಪ್ರತ್ಯೇಕ ಶರೀರಗಳಲ್ಲಿ ಇರುವ ಹಾಗೆ ಕಂಡು ಬಂದರೂ ನಿಜವಾಗಿ ಅವುಗಳೆಲ್ಲವೂ ಒಂದೇ ಆದ ಅಖಂಡ ಶುದ್ಧ ಜ್ಞಾನದ ಆಧಾರದಿಂದಲೇ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತವೆ. ಆದುದರಿಂದ ಅದ್ವಿತೀಯವಾದ ಅಖಂಡ ಶುದ್ಧ ಅಥವ ಶ್ರೇಷ್ಠ ಜ್ಞಾನವು ಅನಂತಾನಂತ ಕೈಕಾಲು, ಕಣ್ಣು, ಕಿವಿ, ಮುಖ, ತಲೆಗಳನ್ನು ಪಡೆದಿದೆ. ಎಂದು ಹೇಳಬಹುದು. ಹಾಗಾದರೆ ಅಖಂಡ ಶುದ್ಧ ಜ್ಞಾನವು ಈ ಕೈಕಾಲು ಮುಂತಾದ ಇಂದ್ರಿಯಗಳು ಇರುವ ಕಡೆಯಲ್ಲಿ ಮಾತ್ರ ಇವೆಯೇ ? ಬೇರೆ ಕಡೆಗಳಲ್ಲಿ ಇಲ್ಲವೆ? ಅದು ಎಲ್ಲಿಯೂ ಇದೆ; ಅದು ಇಲ್ಲದ ಜಾಗವೇ ಇಲ್ಲ; ಅದು ಚೇತನಾಚೇತನವಾದ ಎಲ್ಲಾ ಪದಾರ್ಥಗಳನ್ನೂ ಆವರಿಸಿಕೊಂಡು ಅಖಂಡವಾಗಿ ನಿಂತಿದೆ.

ಅಖಂಡ ಶುದ್ಧ ಜ್ಞಾನವು ತೋರಿಕೆಯ ಪ್ರಪಂಚದ ಲಕ್ಷಾಂತರ ಪ್ರತ್ಯೇಕವಾದ ಜೀವಿಗಳಲ್ಲಿ ಪ್ರಕಾಶಿಸುವುದರಿಂದ ಅವುಗಳ ಇಂದ್ರಿಯ ಮನ ಬುದ್ಧಿಗಳಿಗೆ ವಿಕಾಸವನ್ನು ಉಂಟುಮಾಡುತ್ತದೆ. ಆದರೆ ಇಂದ್ರಿಯ ಸ್ವರೂಪವು ಕೆಲವು ಕಾಲ ಮಾತ್ರ ಇದ್ದು ಆ ಮೇಲೆ ಇಲ್ಲದೆ ಇರುವುದರಿಂದಲೂ ಮತ್ತು ಅಖಂಡ ಶುದ್ಧ ಜ್ಞಾನವು ಯಾವಾಗಲೂ ಇರುವುದರಿಂದಲೂ ಅಖಂಡ ಶುದ್ಧ ಜ್ಞಾನವು ಯಾವ ಇಂದ್ರಿಯಗಳನ್ನೂ ನಿಜವಾಗಿ ಪಡೆದಿಲ್ಲ. ಇಷ್ಟೇ ಅಲ್ಲ; ಯೋಗಿಗಳು ಅಖಂಡ ಶುದ್ಧಜ್ಞಾನವನ್ನೇ ಸಾಕ್ಷಾತ್ಕರಿಸಿದಾಗ ಯಾವ ಇಂದ್ರಿಯಗಳನ್ನೂ ಪಡೆಯದೇ ಇರುವ ಅನುಭವವನ್ನು ಪಡೆದಿದ್ದಾರೆ. ಅಖಂಡ ಶುದ್ಧ ಜ್ಞಾನವು ತನ್ನ ನಿಜ ಸ್ವರೂಪದಲ್ಲಿ ಅದ್ವಿತೀಯವಾಗಿರುವುದರಿಂದ ಅದು ಯಾವುದನ್ನೂ ಹೊತ್ತುಕೊಂಡು ಇಲ್ಲ ಮತ್ತು ಅದಕ್ಕೆ ಇನ್ನು ಯಾವುದರಲ್ಲಿಯೂ ಅಭಿಮಾನವಿಲ್ಲ. ಆದರೆ ಅಖಂಡ ಜ್ಞಾನವು ಅಜ್ಞಾನದಿಂದ ಜಗತ್ತಿನ ರೂಪವಾದ ವಿಕಾರವನ್ನು ಅಥವ ವೃತ್ತಿ ಜ್ಞಾನದ ರೂಪವನ್ನು ಪಡೆದರೆ ಅದು ತೋರಿಕೆಯ ಜಗತ್ತನ್ನು ಹೊತ್ತುಕೊಂಡಿರುವ ಹಾಗೆ ತೋರುತ್ತದೆ.

ಸತ್ವರಜಸ್ತಮೋಗುಣಗಳು ಪ್ರಕೃತಿಯಲ್ಲಿರುವ ಗುಣಗಳು. ಮತ್ತು ಪ್ರತಿಯೊಂದು ಪ್ರಾಣಿಯ ಮನಸ್ಸು ಮತ್ತು ಶರೀರಗಳಲ್ಲಿಯೂ ಅವು ಕಂಡುಬರುತ್ತವೆ. ಆದರೆ ಅಖಂಡ ಶುದ್ಧ ಜ್ಞಾನವು ಪ್ರಕೃತಿಗಿಂತ ಆಚೆ ಇರುವುದರಿಂದ ಅಥವ ಪ್ರಕೃತಿಯು ಶುದ್ಧ ಜ್ಞಾನದ ಅಜ್ಞಾನದ ರೂಪವಾದ ವಿಕಾರವಾಗಿರುವುದರಿಂದ ಅಖಂಡ ಶುದ್ಧ ಜ್ಞಾನವು ನಿಜವಾಗಿ ಯಾವ ಸತ್ವರಜಸ್ತಮೋಗುಣಗಳನ್ನೂ ಪಡೆದಿಲ್ಲ. ಆದರೆ ಸತ್ವರಜಸ್ತಮೋಗುಣಗಳನ್ನು ಪಡೆದಿರುವ ವ್ಯಕ್ತಿಗಳ ಅಂತಃಕರಣಗಳು ಅಚೇತನವಾದುದರಿಂದ ಅವುಗಳನ್ನು ಅನುಭವಿಸುವುದಿಲ್ಲ. ಲಕ್ಷಾಂತರ ಜೀವಿಗಳಲ್ಲಿ ತೋರಿ ಬರುವ ಈ ಗುಣಗಳನ್ನು ಅಜ್ಞಾನದಿಂದ ಅನುಭವಿಸುವವನು ಅಖಂಡ ಶುದ್ಧ ಜ್ಞಾನವೇ ಎಂಬುದನ್ನು ಮರೆಯಕೂಡದು. ಒಟ್ಟಿನಲ್ಲಿ ನಿಜಸ್ವರೂಪದಲ್ಲಿ ಅಖಂಡಶುದ್ಧ ಜ್ಞಾನವು ಗುಣರಹಿತವಾದದ್ದು; ಆದರೆ ಅದು ಅಜ್ಞಾನದ ವಿಕಾರಗಳನ್ನು ಪಡೆದಾಗ ಎಲ್ಲಾ ಗುಣಗಳನ್ನೂ ಅನುಭವಿಸುತ್ತದೆ.

ಅಖಂಡಶುದ್ಧಜ್ಞಾನವು ಎಲ್ಲೆಲ್ಲಿಯೂ ತುಂಬಿದೆ. ಆದುದರಿಂದ ಅದು ಅಜ್ಞಾನದಿಂದ ತೋರುವ ಎಲ್ಲಾ ಪದಾರ್ಥಗಳ ಒಳಗೂ ಇದೆ ಮತ್ತು ಆ ಪದಾರ್ಥಗಳಿಲ್ಲದಿದ್ದಾಗ್ಯೂ ಅದು ಇದೆ; ಅಂದರೆ ಅವುಗಳ ಹೊರಗೆಯೂ ಇದೆ; ಅದು ನಿಜಸ್ವರೂಪದಲ್ಲಿ ವಿಭುವಾಗಿ ಅಖಂಡವಾಗಿರುವುದರಿಂದ ಅದು ಚಲಿಸುವ ಅವಶ್ಯಕತೆಯೂ ಇಲ್ಲ ಮತ್ತು ಅದು ಚಲಿಸುವುದಕ್ಕೆ ಜಾಗವೂ ಇಲ್ಲ.

Re-printed from Mysore Vysya Patrika
(July 1959)

# ಭಗವದ್ಗೀತಾ ಅಧ್ಯಾಯ ೧೩. ಪಾಠ ೪

ಆದಾಗ್ಯೂ ಆದರ ಅಜ್ಞಾನವೆಂಬ ವಿಕಾರದಲ್ಲಿ ಅದು ಪ್ರತಿ
ಯೊಂದು ಪದಾರ್ಥದೊಳಗೆ ಇರುವ ಹಾಗೆ ತೋರುತ್ತಾ ಆ
ಪದಾರ್ಥವು ಒಂದು ಕಡೆಯಿಂದ ಇನ್ನೊಂದು ಕಡೆಗೆ ಚಲಿಸು
ವಾಗ ಅದೂ ಚಲಿಸುವ ಹಾಗೆ ತೋರುತ್ತದೆ. ಕಾರ್ಯಕಾರಣ
ಗಳ ಪರಂಪರೆಗಳಲ್ಲಿ ಕಾರಣಗಳು ಸೂಕ್ಷ್ಮವಾಗಿಯೂ ಕಾರ್ಯಗಳು
ಸ್ಥೂಲವಾಗಿಯೂ ಇರುವುವು. ಅಖಂಡ ಶುದ್ಧಜ್ಞಾನವು ಜಗ
ದಾಕಾರವಾದ ಎಲ್ಲಾ ವೃತ್ತಿ ಜ್ಞಾನಗಳಿಗೂ ಕೊನೆಯ ಕಾರಣ
ವಾಗಿರುವುದರಿಂದ ಅತ್ಯಂತ ಸೂಕ್ಷ್ಮವಾಗಿರುವುದು. ಸ್ಥೂಲ
ವಸ್ತುಗಳನ್ನು ಸುಲಭವವಾಗಿ ತಿಳಿಯಬಹುದು. ಸೂಕ್ಷ್ಮ
ವಸ್ತುಗಳನ್ನು ತಿಳಿಯುವುದು ಕಷ್ಟ ; ಆದುದರಿಂದ ಅತ್ಯಂತ
ಸೂಕ್ಷ್ಮವಾದ ಅಖಂಡ ಶುದ್ಧಜ್ಞಾನವನ್ನು ತಿಳಿಯುವುದಕ್ಕೇ
ಆಗುವುದಿಲ್ಲ. ತೋರಿಕೆಯ ಜಗತ್ತಿನ ಪದಾರ್ಥಗಳು ಕೆಲವು
ನಮ್ಮ ಹತ್ತಿರ ಇರಬಹುದು ; ಇನ್ನು ಕೆಲವು ದೂರದಲ್ಲಿರ
ಬಹುದು. ಆದರೆ ಅಖಂಡ ಶುದ್ಧಜಾನವು ಎಲ್ಲೆಲ್ಲಿಯೂ ಇರು
ವುದರಿಂದ ಅದು ಹತ್ತಿರಧಲ್ಲಿಯೂ ಇದೆ ಮತ್ತು ದೂರದಲ್ಲಿಯೂ
ಇದೆ. ಅಥವ ಅಖಂಡ ಶುದ್ಧಜ್ಞಾನವು ನಾಮರೂಪದಿಂದ
ಕೂಡಿದ ಪದಾರ್ಥಗಳಿಗೆ ಬಹಳ ದೂರದಲ್ಲಿದೆ ; ಆದರೆ ಅದು
ನಾಮರೂಪಗಳಿಂದ ಕೂಡಿದ ಪ್ರತಿಯೊಂದು ಪದಾರ್ಥದೊಳಗೂ
ಆಧಾರವಾಗಿರುವುದರಿಂದ ಅವಗಳ ಹತ್ತಿರದಲ್ಲಿಯೂ ಇದೆ.

ಈ ಶುದ್ಧ ಜ್ಞಾನವು ನಿಜಸ್ವರೂಪದಲ್ಲಿ ವಿಭಾಗಿಸಲು ಅನ
ರ್ಹವಾಗಿ ಅವಿಭಕ್ತವಾಗಿ ಅಂದರೆ ಅಖಂಡವಾಗಿರುವುದರಿಂದಲೇ
ಅದಕ್ಕೇ "ಅಖಂಡ ಶುದ್ಧ ಅಥವ ಶ್ರೇಷ್ಠಜ್ಞಾನ" ಎಂದು
ಹೆಸರು ಕೊಟ್ಟಿದೆ. ಆದರೆ ವ್ಯಕ್ತಿಗಳಲ್ಲಿರುವ ಅಜ್ಞಾನದಿಂದ
ವೃತ್ತಿಜ್ಞಾನರೂಪವಾಗಿ ಪರಿಣಾಮವಾದುದರಿಂದ ಪ್ರತಿಯೊಂದು
ಭೂತ ಅಥವ ಪ್ರಾಣಿಗಳಲ್ಲಿಯೂ ಚೈತನ್ಯವು ವಿಭಕ್ತವಾಗಿ
ಅಂದರೆ ಪೃಥಕ್ಕಾಗಿ ಅಥವ ಬೇರೆಬೇರೆಯಾಗಿ ಇರುವ ಹಾಗೆ
ತೋರುತ್ತದೆ. ಹೇಗೆ ಹಗ್ಗವು ಹಾವಿನ ಹಾಗೆ ಭ್ರಮೆಯಿಂದ
ತೋರುವಾಗ ಹಗ್ಗವು ಹಾವಿಗೆ ಆಧಾರವಾಗಿರುವುದೋ, ಹಗ್ಗದ
ಆಧಾರದಿಂದಲೇ ಹಾವು ಹುಟ್ಟುತ್ತದೆಯೋ, ಮತ್ತು ಕೊನೆಯಲ್ಲಿ
ಭ್ರಮೆಯು ತೊಲಗಿದಾಗ ಹಾವು ಹಗ್ಗದಲ್ಲಿಯೇ ಲಯವಾಗು
ತ್ತದೆಯೋ ಹಾಗೆಯೇ ಅಖಂಡ ಶುದ್ಧಜ್ಞಾನವೇ ಅಜ್ಞಾನದಿಂದ
ವೃತ್ತಿಜ್ಞಾನರೂಪವಾದ ಜಗತ್ತಾಗಿ ತೋರುತ್ತದೆ. ಆದುದ
ರಿಂದ ಜಗತ್ತಿನಲ್ಲಿರುವ ಭೂತಗಳೆಲ್ಲಾ ಅಖಂಡ ಶುದ್ಧಜ್ಞಾನದ
ಆಧಾರದಮೇಲೆ ನಿಂತಿವೆ. ಅದರಿಂದಲೇ ಅಜ್ಞಾನದಿಂದ
ಹುಟ್ಟುತ್ತದೆ ಮತ್ತು ಕೊನೆಯಲ್ಲಿ ಶುದ್ಧಜ್ಞಾನದ ಸಾಕ್ಷಾತ್ಕಾರ
ವಾದರೆ ಅದರಲ್ಲೇ ಲಯವಾಗುತ್ತದೆ.

ಜ್ಞಾನವನ್ನು ಬೆಳಕಿಗೆ ಹೋಲಿಸಿದೆ. ಕಾರಣವೇನು ?
ಸೂರ್ಯನ ಅಥವ ದೀಪದ ಬೆಳಕು ಪದಾರ್ಥಗಳಮೇಲೆ ಬೀಳದಿ
ದ್ದರೆ ಕಣ್ಣುಗಳು ಪದಾರ್ಥಗಳನ್ನು ನೋಡುವುದಕ್ಕೆ ಆಗುವುದಿಲ್ಲ.
ಹಾಗೆಯೇ ಜ್ಞಾನವು ಇಲ್ಲದಿದ್ದರೆ ಮನಸ್ಸಿನಲ್ಲಿರುವ ಆಂತರ
ಪದಾರ್ಥಗಳ ಮತ್ತು ಇಂದ್ರಿಯಗಳಿಗೆ ಗೋಚರವಾಗುವ ಬಾಹ್ಯ
ಪದಾರ್ಥಗಳ ಇರುವಿಕೆಯೇಪ್ರಕಾಶವಾಗುವುದಿಲ್ಲ. ಬೆಳಕನ್ನು
ಕೊಡುವ ಜ್ಯೋತಿಸ್ಸಿನಿಂದ ಕೂಡಿದ ಪದಾರ್ಥಗಳು ಯಾವು
ವೆಂದರೆ— ನಕ್ಷತ್ರಗಳು, ಸೂರ್ಯ, ಚಂದ್ರ, ದೀಪಗಳು, ಬೆಂಕಿ
ಮೊದಲಾದುವುಗಳು. ಇವುಗಳ ಇರುವಿಕೆಯೂ ಕೂಡ ಜ್ಞಾನ
ದಿಂದಲೇ ಪ್ರಕಾಶವಾಗುತ್ತದೆಯಲ್ಲವೇ ? ಆದುದರಿಂದಲೇ
ಅಖಂಡ ಶುದ್ಧಜ್ಞಾನವು ಜ್ಯೋತಿಸ್ಸಿನಿಂದ ಕೂಡಿದ ಪದಾರ್ಥಗ
ಳಿಗೂ ಪ್ರಕಾಶವನ್ನು ಕೊಡುವ ಜ್ಯೋತಿಸ್ಸಾಗಿದೆ. ಪ್ರಪಂಚ
ದಲ್ಲಿ ಬೆಳಕಿಲ್ಲದಕಡೆ ಅಂಧಕಾರವಿರುತ್ತದೆ ಹಾಗೆಯೇ ಜ್ಞಾನ
ವಿಲ್ಲದ ಕಡೆ ಕತ್ತಲೆ ಇರುತ್ತದೆಯೇ ? ಇಲ್ಲ, ಏಕೆಂದರೆ
ಅಖಂಡ ಶುದ್ಧಜ್ಞಾನವು ಎಲ್ಲೆಲ್ಲಿಯೂ ಇರುವುದರಿಂದ ಅದು
ಇಲ್ಲದ ಜಾಗವೇ ಇಲ್ಲ. ಆದುದರಿಂದ ಅದು ತಮಸ್ಸಿಗೆ ಅಥವ
ಕತ್ತಲೆಗೆ ವಿರೋಧ ಸ್ವರೂಪವಾಗಿದೆ ಅಂದರೆ ಅದನ್ನು ಮೀರಿ
ಸಿದೆ. ಜ್ಞಾನವು ಕತ್ತಲೆಯ ಇರುವಿಕೆಯೂ ಕೂಡ ತಿಳಿಯು
ತ್ತದೆ. ಅಂದರೆ ಅದನ್ನು ಪ್ರಕಾಶಪಡಿಸುತ್ತದೆ ; ಆದುದರಿಂದ
ಅದನ್ನು ಮೀರಿಸಿದೆ. ಇಂಥಾ ಅಖಂಡಜ್ಞಾನಸ್ವರೂಪವು ಶುದ್ಧ
ಜ್ಞಾನವೇ ಆಗಿರುವುದರಿಂದ ಅದನ್ನು ಜ್ಞಾನ ಎಂದು ಕರೆದಿದೆ.
ವೃತ್ತಿಜ್ಞಾನವೆಂಬ ಅಜ್ಞಾನದಲ್ಲಿರುವವರೆಲ್ಲರೂ ತಮ್ಮ ಕರ್ಮ
ಪಾಶವನ್ನು ಕತ್ತರಿಸಿ ಪರಮ ಶ್ರೇಯಸ್ಸನ್ನು ಪಡೆಯಬೇಕಾದರೆ
ಅಖಂಡ ಶುದ್ಧಜ್ಞಾನವನ್ನೇ ಪಡೆಯಬೇಕು, ಅಂದರೆ ಅದನ್ನು
ಸಾಕ್ಷಾತ್ಕರಿಸಿ ಅದರಲ್ಲಿ ಒಂದಾಗಬೇಕು, ಆದುದರಿಂದ ಅದು
"ಜ್ಞೇಯವು". ಜ್ಞಾನಿಯು ಯಾವ ಉಪಾಯದಿಂದ ಈ

ಅಖಂಡ ಜ್ಞಾನವನ್ನು ಪಡೆಯಬಹುದು ? ಹಿಂದೆ ವಿವರಿಸಿರುವ "ಅಮಾನಿತ್ವ–ಅದಂಭಿತ್ವಾದಿ" ಜ್ಞಾನಾಭ್ಯಾಸಗಳಿಂದ ಈ ಜ್ಞಾನವನ್ನು ಪಡೆಯಬುದು. ಆದುದರಿಂದ ಇದು "ಜ್ಞಾನಗಮ್ಯವು." ಇಷ್ಟೇ ಅಲ್ಲ ; ಅಖಂಡ ಶುದ್ಧಜ್ಞಾನವು ಎಲ್ಲೆಲ್ಲಿಯೂ ಇರುವುದರಿಂದ ಮತ್ತು ಎಲ್ಲಾ ವ್ಯಕ್ತಿಗಳ ಮನಸ್ಸಿನಲ್ಲಿರುವ ವೃತ್ತಿಜ್ಞಾನಗಳಿಗೂ ಕಾರಣವಾಗಿರುವುದರಿಂದ ಅದು ಎಲ್ಲಾ ಭೂತಗಳ ಹೃದಯದಲ್ಲಿಯೂ ಸ್ಥಿರವಾಗಿ ನಿಂತಿದೆ.

## ಜ್ಞೇಯವು—ನಿರ್ಗುಣ ಸಗಣ ಬ್ರಹ್ಮನು.
## (ಐದನೆಯ ಅಭಿಪ್ರಾಯ)

ಇಲ್ಲಿಯವರೆಗೆ ಜ್ಞೇಯವನ್ನು ಮೊದಲನೆಯ ಅಭಿಪ್ರಾಯದಲ್ಲಿ ನಿರ್ಗುಣ ಬ್ರಹ್ಮನನ್ನಾಗಿ, ಎರಡನೆಯ ಅಭಿಪ್ರಾಯದಲ್ಲಿ ಶುದ್ಧ ಪ್ರತ್ಯಗಾತ್ಮನನ್ನಾಗಿ, ಮೂರನೆಯ ಅಭಿಪ್ರಾಯದಲ್ಲಿ ಸಗುಣ ಬ್ರಹ್ಮನನ್ನಾಗಿ ಮತ್ತು ನಾಲ್ಕನೆಯ ಅಭಿಪ್ರಾಯದಲ್ಲಿ ಅಖಂಡ ಅದ್ವಿತೀಯ ಶುದ್ಧ ಅಥವ ಶ್ರೇಷ್ಠಜ್ಞಾನವನ್ನಾಗಿ ವಿವರಿಸಿದೆವು. ಇನ್ನು ಜ್ಞೇಯದ ಸ್ವರೂಪವು ನಿಜವಾಗಿ ಒಂದೇ ಕಾಲದಲ್ಲಿ ಸಗುಣವೂ ಆಗಿದೆ ಮತ್ತು ನಿರ್ಗುಣವೂ ಆಗಿದೆ ಎಂಬ ಐದನೆಯ ಅಭಿಪ್ರಾಯವನ್ನೂ ಕೂಡ ತಿಳಿಸುತ್ತೇವೆ. ಹಾಗಾದರೆ ಒಂದೇ ಇರುವಿಕೆಯು ಏಕಕಾಲದಲ್ಲಿ ಸಗುಣವಾಗಿಯೂ ನಿರ್ಗುಣವಾಗಿಯೂ ಇರಲು ಸಾಧ್ಯವೇ ? ಪ್ರಪಂಚದಲ್ಲಿರುವ ವಸ್ತುಗಳಲ್ಲಿ ಯಾವುದೂ ಏಕಕಾಲದಲ್ಲಿ ಸಗುಣವಾಗಿಯೂ ನಿರ್ಗುಣವಾಗಿಯೂ ಇರಲಾರದು ; ಏಕೆಂದರೆ ಇವುಗಳೆಲ್ಲವೂ ತ್ರಿಗುಣಗಳಿಂದ ಕೂಡಿದ ಪ್ರಕೃತಿಯಿಂದ ಉಂಟಾದ ಪ್ರಪಂಚದ ಭಾಗಗಳಾಗಿರುವುವು ಆದರೆ ಜಗತ್ತಿಗೆ ಕಾರಣವಾದ ಬ್ರಹ್ಮನನ್ನು ಮಾತ್ರ ಏಕಕಾಲದಲ್ಲಿ ಸಗುಣವನ್ನಾಗಿಯೂ ಮತ್ತು ನಿರ್ಗುಣವನ್ನಾಗಿಯೂ ತಿಳಿಯಬಹುದು. ಇದು ಹೇಗೆ ? ಬ್ರಹ್ಮದಿಂದ ಜಗತ್ತು ಉಂಟಾಗುತ್ತದೆ ಮತ್ತು ಅದೇ ಕೊನೆಯಲ್ಲಿ ಬ್ರಹ್ಮದಲ್ಲಿ ಲಯವಾಗುತ್ತದೆ. ಆದುದರಿಂದ ಬ್ರಹ್ಮವನ್ನು ಜಗತ್ತಿಗೆ ಸಂಬಂಧಪಡದ ಹಾಗೆ ಅದರ ಸ್ವರೂಪವನ್ನು ವಿಚಾರ ಮಾಡಬಹುದು. ಅಥವ ಬ್ರಹ್ಮನನ್ನು ಜಗತ್ತಿಗೆ ಸಂಬಂಧಪಟ್ಟಹಾಗೆ ಅಥವ ಅವನು ಜಗತ್ತಿನ ಅಂತರ್ಯಾಮಿಯಾಗಿ ಇರುವ ಹಾಗೆ ಅವನ ಸ್ವರೂಪವನ್ನು ವಿಚಾರ ಮಾಡ ಬಹುದು. ಮೊದಲನೆಯ ವಿಚಾರವು ಬ್ರಹ್ಮದ ನಿರ್ಗುಣ ಸ್ವರೂಪವನ್ನು ತಿಳಿಸುತ್ತದೆ; ಎರಡನೆಯ ವಿಚಾರವು ಅದೇ ಬ್ರಹ್ಮನ ಸಗುಣ ಸ್ವರೂಪವನ್ನು ತಿಳಿಸುತ್ತದೆ. ಆದುದರಿಂದ ಈ ಆರು ಗೀತಾ ಶ್ಲೋಕಗಳಲ್ಲಿ ಜ್ಞೇಯದ ಅಥವ ಒಂದೇ ಬ್ರಹ್ಮದ ಸಗುಣ ಮತ್ತು ನಿರ್ಗುಣ ಸ್ವರೂಪಗಳನ್ನು ಹೋಲಿಸಿ ವಿವರಿಸಿದೆ. ಈ ಎರಡು ಸ್ವರೂಪಗಳನ್ನೂ ತಿಳಿಸೋಣ.

ಜಗತ್ತಿಗೆ ಸಂಬಂಧಪಡದ ಬ್ರಹ್ಮದ ಸ್ವರೂಪವನ್ನು ಅದರ ನಿರ್ಗುಣ ಸ್ವರೂಪವೆಂದೂ ಅಥವ ಅಪ್ರಮೇಯ ಸ್ವರೂಪವೆಂದೂ ಋಷಿಗಳು ಕರೆದಿರುತ್ತಾರೆ. ಅಪ್ರಮೇಯವೆಂದರೆ ಅಳತೆಮಾಡಲು ಅಸಾಧ್ಯವೆಂದು ಅರ್ಥ. ಆದಾಗ್ಯೂ ಈ ನಿರ್ಗುಣ ಸ್ವರೂಪದ ವರ್ಣನೆಯು ಹೀಗಿದೆ. ಅದು "ಅನಾದಿ ಮತ್" ಅಂದರೆ ಆದಿಯೂ ಇಲ್ಲದ್ದು ಅಂತ್ಯವೂ ಇಲ್ಲದ್ದು ; ಅಂದರೆ ಕಾಲ ನಿಯಮಕ್ಕೆ ಒಳಪಡದೆ ಯಾವಾಗಲೂ ಇದೆ. "ಪರಬ್ರಹ್ಮವು" ; ಏಕೆಂದರೆ ಅದು ಯಾವುದರಿಂದಲೂ ಹುಟ್ಟಿಲ್ಲ ಮತ್ತ ಜಗತ್ತೂ, ಅದರ ಪದಾರ್ಥಗಳೂ ಅದರಿಂದಲೇ ಹುಟ್ಟಿರುತ್ತವೆ ; ಇನ್ನೇನು, ಅದು ಯಾವುದರ ಅಧೀನಕ್ಕೂ ಒಳಪಟ್ಟಿಲ್ಲ. ಜಗತ್ತಿನಲ್ಲಿರುವ ಪದಾರ್ಥಗಳನ್ನು "ಸತ್" "ಅಸತ್" ಎಂದೂ ವಿಂಗಡಿಸಿದ್ದಾರೆ ; ಆದರೆ ಬ್ರಹ್ಮದ ಸ್ವರೂಪವು ಮಾತ್ರ ಜಗತ್ತಿಗೆ ಸಂಬಂಧಪಡದೆ ಇರುವುದರಿಂದ ಅದನ್ನು "ಸತ್" ಎಂದು ಕರೆಯಲಾಗುವುದಿಲ್ಲ ಮತ್ತು "ಅಸತ್" ಎಂದೂ ಕರೆಯಲಾಗುವುಲ್ಲ. ಅದು ಕೇವಲ ಅಖಂಡ ಶುದ್ಧ ಜ್ಞಾನ ಸ್ವರೂಪವಾಗಿರುವುದರಿಂದ ಅದಕ್ಕೆ ಯಾವ ಇಂದ್ರಿಯಗಳೂ ಇಲ್ಲ; ಅಂದರೇನು, ಅದು "ಸರ್ವೇಂದ್ರಿಯ ವಿವರ್ಜಿತವು". ಬ್ರಹ್ಮದ ನಿರ್ಗುಣ ಸ್ವರೂಪವು ಅದ್ವಿತೀಯವಾಗಿರುವುದರಿಂದ, ಎಂದರೆ ಅದಿಲ್ಲದೆ ಬೇರೆ ಯಾವುದೂ ಇಲ್ಲದಿರುವುದರಿಂದ ಅದಕ್ಕೆ ಯಾವುದರಲ್ಲಿಯೂ ಅಭಿಮಾನವಿಲ್ಲ ; ಸಂಬಂಧವಿಲ್ಲ ಮತ್ತು ಆಸೆ ಇಲ್ಲ ; ಎಂದರೇನು , ಅದು ಅಸಕ್ತವು. ಅದಕ್ಕೆ ಪ್ರಕೃತಿಯ ಸಂಬಂಧವಾಗಲೀ ಮತ್ತು ಪ್ರಕೃತಿಯ ಸತ್ವರಜಸ್ತಮೋಗುಣಗಳ ಸಂಬಂಧವಾಗಲೀ ಇಲ್ಲದೇ ಇರುವುದರಿಂದ ಅದರ ಸ್ವರೂಪವನ್ನು "ನಿರ್ಗುಣ" ವೆಂದು ಕರೆದಿದೆ. ಬ್ರಹ್ಮದ ನಿರ್ಗುಣ ಸ್ವರೂಪವು ಜಗತ್ತಿಗೆ ಸಂಬಂಧಪಡದಿರುವುದರಿಂದ ಅದು ಜಗತ್ತಿನಲ್ಲಿರುವ ಭೂತಗಳ ಆಚೆ ಇದೆ ಎಂದು ಹೇಳಲ್ಪಟ್ಟಿದೆ (ಭೂತನಾಂಬಹಿಃ). ಅದು ಎಲ್ಲೆಲ್ಲಿಯೂ ವಿಭುವಾಗಿದ್ದು ಅನಂತವಾಗಿ ದೇಶನಿಯಮಕ್ಕೆ ಒಳಪಡದೆ ಇರುವುದರಿಂದ ಅದು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವ ಸಂದರ್ಭವೇ ಇರುವುದಿಲ್ಲ ; ಆದುದರಿಂದ ಬ್ರಹ್ಮದ ನಿರ್ಗುಣ ಸ್ವರೂಪವು "ಅಚರವು" ಆ ಸ್ವರೂಪವು ಅತ್ಯಂತ ಸೂಕ್ಷ್ಮವಾದ ಜ್ಞಾನ ಸ್ವರೂಪವಾಗಿರುವುದರಿಂದ ಅದು ಅಪ್ರಮೇಯವು ; ಅಂದರೆ ಮನುಷ್ಯರು ಅದನ್ನು ಅಳತೆಮಾಡಿ ತಿಳಿಯಲಾಗುವುದಿಲ್ಲ. (ಸೂಕ್ಷ್ಮತ್ವಾತ್ ತದ ವಿಜ್ಞೇಯಂ). ಆದುದರಿಂದಲೇ ಅದು

ಜಗತ್ತಿಗೂ ಮತ್ತು ನಮ್ಮೆಲ್ಲರಿಗೂ ದೂರವಾಗಿಯೇ ಇರುವುದು. (ದೂರಸ್ಥಂ). ಬ್ರಹ್ಮದ ನಿರ್ಗುಣ ಸ್ವರೂಪವು ಅಖಂಡ ಶುದ್ಧ ಜ್ಞಾನವೇ ಆಗಿರುವುದರಿಂದ ಅದನ್ನು ತುಂಡು ತುಂಡುಗಳಾಗಿ ವಿಭಾಗ ಮಾಡಲಾಗುವುದಿಲ್ಲ ; ಎಂದರೇನು, ಅದು " ಅವಿಭಕ್ತವು ". ಆದಾಗ್ಯೂ ಈ ಆಶ್ಚರ್ಯಕರವಾದ " ಮಹಾ ಇರುವಿಕೆ "ಯಿಂದಲೇ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳು ಅನಂತವಾಗಿ ಚಕ್ರಾಕಾರವಾಗಿ ನಡೆಯುತ್ತಲೇ ಇವೆ (ಗ್ರಸಿಷ್ಣು—ಪ್ರಭವಿಷ್ಣುಚ). ಅದು ಜ್ಞಾನಸ್ವರೂಪವಾದುದರಿಂದ ತಮಸ್ಸಿಗೆ ಅಥವ ಅಜ್ಞಾನಕ್ಕೆ ಅಥವ ಅವಿದ್ಯೆಗೆ ವಿರೋಧವಾಗಿದೆ ಅದು ಜಗತ್ತಿನ ಪ್ರಕೃತಿಗೆ ಆಚೆ ಇರುವುದರಿಂದಲೇ ಅದನ್ನು "ತಮಸಃ ಪರಂ " ಎಂದು ಹೇಳಿದೆ ಬ್ರಹ್ಮದ ನಿರ್ಗುಣ ಸ್ವರೂಪವು ಜ್ಞಾನವೂ ಹೌದು ; ಜ್ಞೇಯವೂ ಹೌದು ಮತ್ತು ಜ್ಞಾನಗಮ್ಯವೂ ಹೌದು. ಅಂದರೆ, ಅದು ಅಖಂಡ ಜ್ಞಾನಸ್ವರೂಪವು; ಸಾಧಾರಣ ಮನುಷ್ಯರನೇಕರಿಂದ ಅದನ್ನು ತಿಳಿಯಲು ಅಸಾಧ್ಯವಾದರೂ ಅದು ಋಷಿಗಳಿಂದ ಸಾಕ್ಷಾತ್ಕರಿಸಲ್ಪಡಲು ಯೋಗ್ಯವಾದುದು ಮತ್ತು ಅದನ್ನು ಅನುಭವಿಸುವುದೇ ಉತ್ತಮ ಮಾನವನ ಕೊನೆಯ ಧ್ಯೇಯವು, ಇನ್ನೇನು, ಬ್ರಹ್ಮದ ನಿರ್ಗುಣ ಸ್ವರೂಪವನ್ನು ಸಾಕ್ಷಾತ್ಕರಿಸಲು ಜ್ಞಾನಿಯು ಇದೇ ಅಧ್ಯಾಯದಲ್ಲಿ ಏಳನೇ ಶ್ಲೋಕದಿಂದ ಹನ್ನೆರಡನೆಯ ಶ್ಲೋಕದವರೆಗೆ ವಿವರಿಸಿರುವ " ಅಮಾನಿತ್ವಂ—ಅದಂಭಿತ್ವಂ " ಮೊದಲಾದ ಜ್ಞಾನಾಭ್ಯಾಸಗಳನ್ನು ಆಚರಿಸಲೇ ಬೇಕಾಗುತ್ತದೆ (ಜ್ಞಾನಂ—ಜ್ಞೇಯಂ—ಜ್ಞಾನಗಮ್ಯಂ).

ಇನ್ನು ಅದೇ ಬ್ರಹ್ಮವು ಜಗತ್ತಿಗೆ ಸಂಬಂಧ ಪಟ್ಟಿರುವ ಅಂದರೆ ಅದರ ಸಗುಣ ಸ್ವರೂಪದ ವರ್ಣನೆಯನ್ನು ತಿಳಿಯೋಣ. ಜಗತ್ತಿನಲ್ಲಿ ಪರಿಣಾಮಗಳನ್ನು ಹೊಂದುತ್ತಿರುವ ಅಚೇತನ ಪದಾರ್ಥಗಳು " ಅಸತ್ " ಎಂದು ಕರೆಯಲ್ಪಡುತ್ತವೆ ; ಪರಿಣಾಮವನ್ನು ಹೊಂದದ ಜ್ಞಾನ ಸ್ವರೂಪನಾದ ಜೀವಾತ್ಮನು " ಸತ್ " ಎಂದು ಕರೆಯಲ್ಪಡುತ್ತಾನೆ, ಆದರೆ ಜಗತ್ತಿನಲ್ಲಿಯೂ, ಆದರ ಪದಾರ್ಥಗಳಲ್ಲಿಯೂ ಅಂತರ್ಯಾಮಿಯಾಗಿರುವ ಬ್ರಹ್ಮದ ಸ್ವರೂಪವು ಅಥವ ಈಶ್ವರನು ಅಚಿತ್ತೂ ಮತ್ತು ಜೀವಾತ್ಮನೂ ಅಲ್ಲದಿರುವುದರಿಂದ ಅವನು " ಸತ್ " ಎಂದಾಗಲೀ; "ಅಸತ್" ಎಂದಾಗಲೀ ಕರೆಯಲ್ಪಡುವುದಿಲ್ಲ. (ಅಸತ್‌ನ ಉಚ್ಯತೇ–ಸತ್‌ನ ಉಚ್ಯತೇ). ಬ್ರಹ್ಮನು ತನ್ನ ಸಗುಣ ಸ್ವರೂಪದಲ್ಲಿ ಅಂದರೆ ಈಶ್ವರ ಸ್ವರೂಪದಲ್ಲಿ ಒಟ್ಟು ಜಗತ್ತಿನಲ್ಲೂ ಮತ್ತು ಅದರೊಳಗೆ ನಡೆಯುವ ಎಲ್ಲಾ ಕಾರ್ಯಗಳಲ್ಲೂ ಅಂತರ್ಯಾಮಿಯಾಗಿರುವನು ; ಆದುದರಿಂದ ಅವನು ಜಗತ್ತಿನಲ್ಲಿ ವಿಶ್ವರೂಪಿಯಾಗಿದ್ದು ಅವನಿಗೆ ಎಲ್ಲೆಲ್ಲಿಯೂ ಕೈಕಾಲುಗಳೂ, ಎಲ್ಲೆಲ್ಲಿಯೂ ಕಣ್ಣು ತಲೆ ಮುಖಗಳೂ ಮತ್ತು ಎಲ್ಲೆಲ್ಲಿಯೂ ಕಿವಿಗಳೂ ಕಂಡು ಬರುತ್ತವೆ. (ಸರ್ವತಃ ಪಾಣಿಪಾದಂ ಇತ್ಯಾದಿ) ಇಷ್ಟೇ ಅಲ್ಲ; ಅವನು ಜಗತ್ತಿನಲ್ಲಿರುವ ಎಲ್ಲಾ ಪದಾರ್ಥಗಳನ್ನೂ ಕಾರ್ಯಗಳನ್ನೂ ಆವರಿಸಿಕೊಂಡಿರುವನು (ಸರ್ವಮಾವೃತ್ಯತಿಷ್ಠತಿ). ಬ್ರಹ್ಮನಿಗೆ ಸಗುಣ–ಸ್ವರೂಪದಲ್ಲಿ (ಈಶ್ವರ ಸ್ವರೂಪದಲ್ಲಿ) ಯಾವ ಪ್ರಾಕೃತೇಂದ್ರಿಯಗಳೂ ಇಲ್ಲ ; ಆದಾಗ್ಯೂ ಅವನು ತನಗೆ ಸ್ವಾಭಾವಿಕವಾದ ಕಲ್ಯಾಣ ಗುಣಗಳಿಂದಲೇ ಈ ಪಂಚೇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಇವುಗಳಿಂದ ಉಂಟಾಗುವ ಕಾರ್ಯಗಳೆಲ್ಲವನ್ನೂ ಮಾಡಬಲ್ಲನು, ಎಂದರೇನು, ಕಣ್ಣುಗಳಿಲ್ಲದೆಯೇ ಕೆಲಸ ಮಾಡಬಲ್ಲನು ;—ಇತ್ಯಾದಿ (ಸರ್ವೇಂದ್ರಿಯ ಗುಣಾಭಾಸಂ). ಅವನು ಜಗತ್ತಿನಲ್ಲೂ, ಅದರೊಳಗಿರುವ ಎಲ್ಲಾ ಪದಾರ್ಥಗಳಲ್ಲೂ ಅಂತರ್ಯಾಮಿಯಾಗಿರುವುದರಿಂದ ಅವೆಲ್ಲವನ್ನೂ ಸದಾಕಾಲದಲ್ಲೂ, ಎಲ್ಲಾ ಅವಸ್ಥೆಗಳಲ್ಲೂ ಭರಿಸುತ್ತಾನೆ; ಹಾಗಿಲ್ಲದಿದ್ದರೆ, ಆಯಾ ಪದಾರ್ಥಗಳ ಸ್ವರೂಪವೇ ನಿಲ್ಲಲಾರದು (ಸರ್ವಭೃಚ್ಚೈವ). ಬ್ರಹ್ಮನು ಸಗುಣ ಸ್ವರೂಪದಲ್ಲಿ ಪ್ರಕೃತಿಯಲ್ಲಿರುವ ಸತ್ವರಜಸ್ತಮೋ ಗುಣಗಳಿಗೂ ಅಂತರ್ಯಾಮಿಯಾಗಿರುತ್ತಾ ಅವುಗಳಿಗೆ ಕಾರ್ಯಮಾಡುವ ಮತ್ತು ಫಲಗಳನ್ನು ಕೊಡುವ ಶಕ್ತಿಯನ್ನು ಕೊಡುತ್ತಾನೆ ಮತ್ತು ಅವುಗಳ ಸಂಪರ್ಕವನ್ನು ಪಡೆದಿದ್ದಾನೆ (ಗುಣಭೋಕ್ತೃಚ). ಅವನು ಪೃಥಕ್ಕಾದ ಭೂತಗಳಲ್ಲಿ ಅಂತರ್ಯಾಮಿಯಾಗಿರುವುದರಿಂದ, ಆಯಾ ಭೂತಗಳು ಒಂದು ಕಡೆಯಿಂದ ಇನ್ನೊಂದು ಕಡೆಗೆ ಚಲಿಸುವಾಗ ಅವನೂ ಚಲಿಸುವ ಹಾಗೆ ತೋರುವವನು (ಚರಯೇವಚ). ಅಂತರ್ಯಾಮಿಯಾದ ಈಶ್ವರನು ಬಹು ಸೂಕ್ಷ್ಮವಾಗಿರುವುದರಿಂದ ಅವನನ್ನು ಮನುಷ್ಯರಲ್ಲಿ ಬಹುಮಂದಿ ಸಾಕ್ಷಾತ್ಕರಿಸಲಾರರು. (ಸೂಕ್ಷ್ಮತ್ವಾತ್ ತದವಿಜ್ಞೇಯಂ). ಆದರೆ ಯೋಗಿಗಳು ಧ್ಯಾನಮಾಡಿ ತಮ್ಮ ಹೃದಯದಲ್ಲಿಯೇ ಅವನನ್ನು ಸಾಕ್ಷಾತ್ಕರಿಸುವುದರಿಂದ ಅವನು ಅವರಿಗೆ ಹತ್ತಿರದಲ್ಲಿಯೇ ಇರುವನು (ಅಂತಿಕೇಚ–ತತ್). ಮತ್ತು ಪ್ರತಿಯೊಂದು ಭೂತದ ಜೀವಾತ್ಮನಲ್ಲಿ ಈಶ್ವರನು ಅಂತರ್ಯಾಮಿಯಾಗಿರುವುದರಿಂದ ಬ್ರಹ್ಮದ ಸಗುಣ ಸ್ವರೂಪವು ಬೇರೆ ಬೇರೇ ವಿಭಾಗವಾಗಿರುವಂತೆ ತೋರುತ್ತದೆ. (ಭೂತೇಷು ವಿಭಕ್ತಮಿವಚ ಸ್ಥಿತಂ). ಬ್ರಹ್ಮನು ಸಗುಣ ಸ್ವರೂಪದಲ್ಲಿ ಪ್ರತಿಯೊಂದು ಪದಾರ್ಥದಲ್ಲಿಯೂ ಅಂತರ್ಯಾಮಿಯಾಗಿರುತ್ತಾ ಅವುಗಳನ್ನು ಭರಿಸುವನು. (ಭೂತ ಭರ್ತೃಚ). ಅವನು ಜ್ಯೋತಿಸ್ಸಿನಿಂದ ಕೂಡಿರುವ ಸೂರ್ಯ, ಚಂದ್ರ, ಅಗ್ನಿ ಮುಂತಾದವುಗಳಿಗೆ ಅಂತರ್ಯಾಮಿಯಾಗಿದ್ದು, ಅವನೇ ಅವುಗಳಿಗೆಲ್ಲಾ ಪ್ರಕಾಶ ಶಕ್ತಿಯನ್ನು ಕೊಡುವನು ಮತ್ತು ಯೋಗಿಗಳು ಅವನ ದಿವ್ಯಮಂಗಳ ವಿಗ್ರಹಗಳನ್ನು ಸಾಕ್ಷಾತ್ಕರಿಸುವಾಗ ಅವನು ಮಿತಿಯಿಲ್ಲದ ತೇಜಸ್ಸಿನಿಂದ ಪ್ರಕಾಶಿಸುವನು (ಜ್ಯೋತಿಷಾಮಪಿತಜ್ಜ್ಯೋತಿಃ).

ಒಟ್ಟಿನಲ್ಲಿ, ಬ್ರಹ್ಮನು ತನ್ನ ಸಗುಣ ಸ್ವರೂಪದಲ್ಲಿ ಅಂದರೆ ಈಶ್ವರ ಸ್ವರೂಪದಲ್ಲಿ ಚೇತನಾಚೇತನ ಪದಾರ್ಥಗಳಿಗೆ ಶರೀರಿಯಾಗಿ ಅಂದರೆ ಧಾರಕನಾಗಿ, ನಿಯಾಮಕನಾಗಿ ಮತ್ತು ಶೇಷಿಯಾಗಿ ಇರುವನು. ಎಂದರೇನು, ಜಗತ್ತೂ ಮತ್ತು ಅದರಲ್ಲಿರುವ ಸರ್ವ ಪದಾರ್ಥಗಳೂ ಅವನ ಶರೀರವಾಗಿರುವುದು (ಹೃದಿಸರ್ವಸ್ಯ ವಿಷ್ಠಿತಂ).

### ಶ್ಲೋಕ—ಹದಿನೆಂಟು

ಇತಿಕ್ಷೇತ್ರಂ ತಥಾಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ |
ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ || ೧೮ ||

### ಶ್ಲೋಕದ ವಾಕ್ಯಗಳು

1. ಇತಿ ಕ್ಷೇತ್ರಂ ಸಮಾಸತಃ ಉಕ್ತಂ= ಈ ಪ್ರಕಾರವಾಗಿ ಕ್ಷೇತ್ರ ತತ್ವವು ಸಂಗ್ರಹವಾಗಿ ಹೇಳಲ್ಪಟ್ಟಿತು.
2. ತಥಾಜ್ಞಾನಂ ಸಮಾಸತಃ ಉಕ್ತಂ= ಹಾಗೆಯೇ, ಜ್ಞಾನಾಭ್ಯಾಸಗಳು ಸಂಗ್ರಹವಾಗಿ ಹೇಳಲ್ಪಟ್ಟವು.
3. ಚ ಜ್ಞೇಯಂ ಸಮಾಸತಃ ಉಕ್ತಂ= ಮತ್ತು ಜ್ಞೇಯದ ಸ್ವರೂಪವು ಸಂಗ್ರಹವಾಗಿ ಹೇಳಲ್ಪಟ್ಟಿತು.
4. ಮದ್ಭಕ್ತಃ ಏತತ್ ವಿಜ್ಞಾಯ ಮದ್ಭಾವಾಯ ಉಪಪದ್ಯತೇ= ನನ್ನ ಭಕ್ತನು ಕ್ಷೇತ್ರ, ಜ್ಞಾನ ಮತ್ತು ಜ್ಞೇಯ ಇವುಗಳನ್ನು ಚೆನ್ನಾಗಿ ತಿಳಿದುಕೊಂಡು ನನ್ನ ಭಾವಕ್ಕೆ ಅಂದರೆ ನನ್ನ ಭಾವವನ್ನು ಹೊಂದುವುದಕ್ಕೆ ಯೋಗ್ಯನಾಗುತ್ತಾನೆ (ತಕ್ಕವನಾಗುತ್ತಾನೆ)

### ತಾತ್ಪರ್ಯ

ಮಹಾಭೂತಾನ್ಯಹಂಕಾರೋ ಬುದ್ಧಿ ರವ್ಯಕ್ತ ಮೇವಚ |
ಇಂದ್ರಿಯಾಣಿ ದಶೈಕಂಚ ಪಂಚಚೇಂದ್ರಿಯ ಗೋಚರಾಃ ||೬||
ಇಚ್ಛಾದ್ವೇಷ ಸ್ಸುಖಂ ದುಃಖಂ ಸಂಘಾತ ಶ್ಚೇತನಾಧೃತಿಃ |

ಎಂಬುದಾಗಿ ಕ್ಷೇತ್ರವು ಸಂಗ್ರಹವಾಗಿ ವಿವರಿಸಲ್ಪಟ್ಟಿತು.

ಅಮಾನಿತ್ವಮದಂಭಿತ್ವಮಹಿಂಸಾಕ್ಷಾಂತಿ ರಾರ್ಜವಂ |
ಆಚಾರ್ಯೋ ಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ||
ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವಚ |
ಜನ್ಮಮೃತ್ಯು ಜರಾವ್ಯಾಧಿ ದುಃಖದೋಷಾನುದರ್ಶನಂ ||
ಅಸಕ್ತಿರನಭಿಷ್ವಂಗಃ ಪುತ್ರದಾರ ಗೃಹಾದಿಷು |
ನಿತ್ಯಂಚ ಸಮಚಿತ್ತತ್ವ ಮಿಷ್ಟಾನಿಷ್ಟೋಪಪತ್ತಿಷು ||
ಮಯಿಚಾನನ್ಯ ಯೋಗೇನಭಕ್ತಿರ ವ್ಯಭಿಚಾರಿಣೀ |
ವಿವಿಕ್ತ ದೇಶಸೇವಿತ್ವಮರತಿರ್ಜನ ಸಂಸದಿ ||
ಅಧ್ಯಾತ್ಮ ಜ್ಞಾನ ನಿತ್ಯತ್ವಂ ತತ್ವಜ್ಞಾನಾರ್ಥ ದರ್ಶನಂ |

ಎಂಬುದಾಗಿ ಜ್ಞಾನಾಭ್ಯಾಸಗಳು ಸಂಗ್ರಹವಾಗಿವಿವರಿಸಲ್ಪಟ್ಟವು,

ಅನಾದಿ ಮತ್ಪರಂ ಬ್ರಹ್ಮ ನಸತ್ತನ್ನಾ ಸದುಚ್ಯತೇ |
ಸರ್ವತಃ ಪಾಣಿಪಾದಂ ತತ್ಸರ್ವತೋಕ್ಷಿ (ಽ) ಕ್ಷಿ ಶಿರೋಮುಖಂ
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ||
ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ |
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃಚ ||
ಬಹಿರಂತಶ್ಚ ಭೂತಾನಾ ಮಚರಂ ಚರಯೇವಚ |
ಸೂಕ್ಷ್ಮತ್ವಾತ್ತದ ವಿಜ್ಞೇಯಂ ದೂರಸ್ಥಂ ಚಾಂತಿಕೇಚತತ್ ||
ಅವಿಭಕ್ತಂಚಭೂತೇಷು ವಿಭಕ್ತಮಿವಚಸ್ಥಿತಂ |
ಭೂತ ಭರ್ತಚ ತ ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣುಚ ||
ಜ್ಯೋತಿಷಾಮಪಿ ತಜ್ಜ್ಯೋತಿ ಸ್ತಮಸಃ ಪರಮುಚ್ಯತೇ |
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹದಿ ಸರ್ವಸ್ಯವಿಷ್ಟಿತಂ ||

ಎಂಬದಾಗಿ ಜ್ಞೇಯವು ಸಂಗ್ರಹವಾಗಿ ವಿವರಿಸಲ್ಪಟ್ಟಿತು.

ಮನುಷ್ಯನು ಹೀಗೆ ಕ್ಷೇತ್ರದ, ಜ್ಞಾನಾಭ್ಯಾಸಗಳ ಮತ್ತು ಜ್ಞೇಯದ ಸ್ವರೂಪಗಳನ್ನೂ ಚೆನ್ನಾಗಿ ತಿಳಿದು, ಮನನ ಮಾಡಿ ಅವುಗಳನ್ನು ದೃಢವಾಗಿ ನಂಬಿದರೆ, ಅವನು ಪಡೆಯುವ ಲಾಭವೇನು ? ಅಥವ ಶ್ರೇಯಸ್ಸು ಏನು ? (1) ಅಂಥಾ ಮನುಷ್ಯನು ನಿಜವಾಗಿ ಭಗವಂತನ ಭಕ್ತನಾಗುತ್ತಾನೆ. ಎಂದರೇನು ಅವನು ಸರ್ವಜ್ಞನೂ, ಪಸಮ ಗುರುವೂ, ಈಶ್ವರನೂ ಆದ ವಾಸುದೇವನಲ್ಲಿ ಸರ್ವಾತ್ಮ ಭಾವನೆಯನ್ನೂ ಪಡೆಯುತ್ತಾನೆ. ಅಂಥಾ ಭಕ್ತನು ತಾನು ಯಾವುದನ್ನು ನೋಡುತ್ತಾನೆಯೋ, ಯಾವುದನ್ನು ಕೇಳುತ್ತಾನೆಯೋ ಮತ್ತು ಯಾವುದನ್ನು ಮುಟ್ಟುತ್ತಾನೆಯೋ ಅಂಥ ಸಕಲ ವಸ್ತುಗಳಲ್ಲಿವೂ ವಾಸುದೇವನಾದ ಭಗವಂತನೇ ಎಂಬ ಭಾವನೆಯನ್ನು ಬೆಳೆಸುತ್ತಾ, ಅಂದರೆ ಸಮ್ಯಗ್ದರ್ಶನವನ್ನು ಕ್ರಮೇಣ ಪಡೆಯುತ್ತಾ ಪರಮಾತ್ಮನ ಭಾವನ್ನೇ ಪಡೆಯಲು ಯೋಗ್ಯತೆಯನ್ನೂ ಪಡೆಯುತ್ತಾನೆ. ಇದು ಮೊದಲದೆಯ ಅಭಿಪ್ರಾಯ. (2) ಈ ಕ್ಷೇತ್ರ, ಜ್ಞಾನ, ಶುದ್ಧ ಪ್ರತ್ಯಗಾತ್ಮ ಎಂಬ ಜ್ಞೇಯ ತತ್ವಗಳ ನಿಶ್ಚಯ ಸ್ವರೂಪಗಳನ್ನು ಯಾವನು ಅರಿಯುತ್ತಾ ಭಕ್ತನಾಗಿರುವನೋ ಅವನು ಭಗವಂತನ ಸ್ವಭಾವವನ್ನು ಅಂದರೆ ಸಂಸಾರಕ್ಕೆ ಒಳಪಡದೆ ಇರುವಿಕೆಯನ್ನು ಹೊಂದತಕ್ಕಂಥಾ ಸ್ಥಿತಿಯನ್ನು ಪಡೆಯುವವನು. ಇದು ಎರಡನೆಯ ಅಭಿಪ್ರಾಯ (3) ಕ್ಷೇತ್ರ, ಜ್ಞಾನಸ್ವರೂಪಗಳನ್ನೂ ಮತ್ತು ಸಗುಣಬ್ರಹ್ಮನಾದ ಜ್ಞೇಯಸ್ವರೂಪವನ್ನೂ ಯಾವನು ತಿಳಿಯುತ್ತಾನೆಯೋ ಅವನು ಪರಮಾತ್ಮನ ಸಮೀಪದಲ್ಲಿಯೇ ಇರುವ ಸಾಯುಜ್ಯ ಮೋಕ್ಷವನ್ನು ಪಡೆಯಲು ಯೋಗ್ಯನಾಗುತ್ತಾನೆ ; ಇದು ಮೂರನೆಯ ಅಭಿಪ್ರಾಯ

ಒಟ್ಟಿನಲ್ಲಿ, ಕ್ಷೇತ್ರ ಜ್ಞಾನ ಮತ್ತು ಜ್ಞೇಯ ಇವುಗಳ ವಿಚಾರಗಳನ್ನು ಬುದ್ಧಿಯಲ್ಲಿ ಮಾತ್ರ ತಿಳಿದರೆ ಸಾಲದು ; ಮುಮುಕ್ಷುವು ಇವುಗಳನ್ನೂ ತಿಳಿದು ಭಗವಂತನ ಭಕ್ತನೂ ಆಗಬೇಕು ಆಗ ಅವನು ಕ್ರಮೇಣ ಪರಮಾತ್ಮನ ಸ್ವರೂಪವನ್ನೇ ಪಡೆಯುವ ಪರಿಪೂರ್ಣ ವ್ಯಕ್ತಿತ್ವವನ್ನು ಈ ಜೀವನದಲ್ಲಿಯೇ ಪಡೆಯಲು ಅರ್ಹನಾಗುತ್ತಾನೆ.

Re-printed from Mysore Vysya Patrika
(August 1959)

# ಭಗವದ್ಗೀತಾ ಅಧ್ಯಾಯ ೧೩. ಪಾಠ ೫

### ಪುರುಷನಿಗೆ ಜನ್ಮಗಳುಂಟಾಗಲು ಕಾರಣ

ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ |
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿ ಸಮ್ಭವಾನ್|| ೧೯ ||
ಕಾರ್ಯ ಕಾರಣ* ಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ |
ಪುರುಷಃ ಸುಖಃದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ || ೨೦ ||

ಪುರುಷಃ ಪ್ರಕೃತಿಸ್ಥೋಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್ |
ಕಾರಣಂ ಗುಣ ಸಙ್ಗೋಽಸ್ಯ ಸದಸದ್ಯೋನಿ ಜನ್ಮಸು || ೨೧ ||

*೨೦ ನೇ ಶ್ಲೋಕದಲ್ಲಿ "ಕಾರಣಂ" ಎನ್ನುವುದಕ್ಕೆ ಬದಲಾಗಿ "ಕರಣಂ" ಎಂಬುದಾಗಿ ಇನ್ನೊಂದು ಪಾಠವಿದೆ.

### ಈ ಶ್ಲೋಕಗಳಿಲ್ಲಿರುವ ವಾಕ್ಯಗಳ ಸಾಮಾನ್ಯ ಅರ್ಥ.

1. ಪ್ರಕೃತಿಂ ಪುರುಷಂಚ ಏವ ಉಭಾ ಅಪ್ಪಿಅನಾದಿ ವಿದ್ಧಿ=ಪ್ರಕೃತಿಯನ್ನೂ ಮತ್ತು ಪುರುಷನನ್ನೂ ಕೂಡ, ಈ ಎರಡು ತತ್ವಗಳನ್ನೂ ಆದಿಯೇ ಇಲ್ಲದವುಗಳನ್ನಾಗಿ ತಿಳಿ.

2. ವಿಕಾರಾಂಶ್ಚ ಗುಣಾಂಶ್ಚೈವ ಪ್ರಕೃತಿ ಸಂಭವಾನ್ ವಿದ್ದಿ=ವಿಕಾರಗಳೂ ಮತ್ತು ಗುಣಗಳೂ ಪ್ರಕೃತಿಯಿಂದಲೇ ಹುಟ್ಟುವುವು ಎಂಬದಾಗಿ ತಿಳಿ.

3. ಪ್ರಕೃತಿಃ ಕಾರ್ಯ ಕಾರಣ ಕರ್ತೃತ್ವೇ ಹೇತುಃ ಉಚ್ಯತೇ=ಪ್ರಕೃತಿಯು ಕಾರ್ಯ ಮತ್ತು ಕಾರಣದ ಕರ್ತೃತ್ವಕ್ಕೆ ಕಾರಣವೆಂದು ಹೇಳಲ್ಪಟ್ಟಿದೆ. (ಇಲ್ಲಿ "ಕಾರಣ"ಕ್ಕೆ ಬದಲಾಗಿ "ಕರಣ" ಎಂದು ಇನ್ನೊಂದು ಪಾಠವಿದೆ.

4. ಪುರುಷಃ ಸುಖದುಃಖಾನಾಂಭೋಕ್ತೃತ್ವೇ ಹೇತುಃ ಉಚ್ಯತೇ = ಪುರುಷನು ಸುಖದುಃಖಗಳ ಭೋಕ್ತೃತ್ವಕ್ಕೆ ಅಥವ ಅನುಭವಕ್ಕೆ ಕಾರಣನೆಂದು ಹೇಳಲ್ಪಡುತ್ತಾನೆ.

5. ಪುರುಷಃ ಪ್ರಕೃತಿ ಸ್ಥೋಹಿ ಪ್ರಕೃತಿಜಾನ್ಗುಣಾನ್ ಭುಙ್ಕ್ತೇ = ಪುರುಷನು ಪ್ರಕೃತಿಯಲ್ಲಿರುವವನಾಗಿಯೇ ಪ್ರಕೃತಿಯ ಮೂಲಕ ಉಂಟಾಗುವ ಗುಣಗಳನ್ನು ಅನುಭವಿಸುತ್ತಿರುವನು.

6. ಗುಣಸಂಗಃ ಅಸ್ಯ ಸದಸದ್ಯೋನಿ ಜನ್ಮಸು ಕಾರಣಂ= ಗುಣಗಳ ಸಂಗವು ಈ ಪುರುಷನಿಗೆ ಒಳ್ಳೆಯ ಮತ್ತು ಕೆಟ್ಟ ಯೋನಿಗಳಲ್ಲಿ ಹುಟ್ಟುವುದಕ್ಕೆ ಕಾರಣವು.

ಈ ಅಧ್ಯಾಯದ ಹಿಂದಿನ ಶ್ಲೋಕಗಳ ತಾತ್ಪರ್ಯದಲ್ಲಿ ಅಭಿಪ್ರಾಯ ಬೇಧಗಳಿರುವ ಹಾಗೆ ಈ ಶ್ಲೋಕಗಳ ತಾತ್ಪರ್ಯಗಳಲ್ಲಿಯೂ ಅಭಿಪ್ರಾಯ ಬೇಧಗಳಿವೆ. ಆದುದರಿಂದ ಒಂದೊಂದು ಅಭಿಪ್ರಾಯಕ್ಕೆ ಅನುಗುಣವಾಗಿ ಮುಖ್ಯ ಪದಗಳ ವಿಶೇಷ ಅರ್ಥಗಳನ್ನೂ ತಾತ್ಪರ್ಯಗಳನ್ನೂ ಬೇರೆ ಬೇರೆಯಾಗಿ ವಿವರಿಸುತ್ತೇವೆ.

### ಮೊದಲನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ಅಭಿಪ್ರಾಯದ ಪ್ರಕಾರ ಮುಖ್ಯ ಪದಗಳ ವಿಶೇಷ ಅರ್ಥಗಳು ಹೀಗೆ ಇವೆ.

೧೯. **ಪ್ರಕೃತಿ** = ಸತ್ವರಜಸ್ತಮೋಗುಣಗಳ ರೂಪವಾದ ವಿಕಾರಗಳನ್ನು ಉಂಟು ಮಾಡುವ ಈಶ್ವರನ ಮಾಯಾ ಶಕ್ತಿ ಅಥವ ಅಪರಾ ಪ್ರಕೃತಿ

**ಪುರುಷಃ** = ಅವಿದ್ಯೆಯಿಂದ ಕೂಡಿರುವ ಜೀವಾತ್ಮನೆಂದು ಕರೆಯಲ್ಪಡುವ ಚೈತನ್ಯ ರೂಪವಾದ ಈಶ್ವರನ ಪರಾಪ್ರಕೃತಿ.

**ಅನಾದಿ** = ಆರಂಭವು ಯಾವುದಕ್ಕೆ ಇಲ್ಲವೋ ಅದು ಅನಾದಿ.

**ವಿಕಾರಃ** = ಬುದ್ಧಿ, ಅಹಂಕಾರ, ಮನಸ್ಸು, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು ಮತ್ತು ಪಂಚ ಭೂತಗಳಿಂದ ಕೂಡಿದ ಸ್ನೇಹ ಎಂಬ ವಿಕಾರಗಳು.

**ಗುಣಾಃ** = ಸುಖ, ದುಃಖ, ಮೋಹಾದಿಗಳ ರೂಪವಾಗಿರುವ ಪರಿಣಾಮಗಳು.

೨೦. **ಕಾರ್ಯ** = ಶರೀರ.

**ಕರಣ** = ಶರೀರದಲ್ಲಿರುವ ಮತ್ತು ಅದಕ್ಕೆ ಕಾರಣವಾದ ಮಹತ್ತು, ಅಹಂಕಾರ, ಮನಸ್ಸು, ಹತ್ತು ಇಂದ್ರಿಯಗಳು, ಐದು ಮಹಾ ಭೂತಗಳು ಮತ್ತು ಸುಖದುಃಖ ಮೋಹಾದಿಗಳ ರೂಪವಾಗಿರುವ ಗುಣಗಳು.

**ಕರ್ತೃತ್ವೇ** = ಕಾರ್ಯ ಕರಣಗಳನ್ನು ಉಂಟು ಮಾಡುವುದರಲ್ಲಿ.

೨೧. **ಪ್ರಕೃತಿ ಸ್ಥೋಹಿ** = ಅವಿದ್ಯಾ ಕಲ್ಪಿತವಾದ ಕಾರ್ಯ ಕರಣಗಳ ರೂಪದಿಂದ ಪರಿಣಾಮವಾಗಿರುವ ಪ್ರಕೃತಿಯಲ್ಲಿದ್ದು ಕೊಂಡಿರುತ್ತಾ ಅಂದರೆ " ಆ ಪ್ರಕೃತಿಯೇ ನಾನು " ಎಂದು ಭಾವಿಸಿಕೊಳ್ಳುತ್ತಾ.

**ಪ್ರಕೃತಿಜಾ** = ಅವಿದ್ಯಾ ಕಲ್ಪಿತವಾದ ಪ್ರಕೃತಿಯಲ್ಲಿ ಹುಟ್ಟಿರುವ

**ಗುಣಸಂಗಃ** = ಸುಖ ದುಃಖ ಮೋಹಗಳೆಂಬ ಗುಣಗಳನ್ನು ಅನುಭವಿಸುವಾಗ ಉಂಟಾಗುವ ಸಂಗವು, ಅಂದರೆ " ನಾನೇ ಸುಖ, ದುಃಖ, ಮೋಹಗಳು " ಎಂಬ ಭಾವವು.

**ಸದ್ಯೋನಿ** = ದೇವತೆ ಮುಂತಾದವರ ಒಳ್ಳೆಯ ಗರ್ಭ.

**ಅಸದ್ಯೋನಿ** = ಮೃಗಗಳೇ ಮುಂತಾದವುಗಳ ಹೀನವಾದ ಗರ್ಭ

ಬದ್ಧ ಜೀವಾತ್ಮನು ಅವಿದ್ಯೆಯಿಂದ ಕೂಡಿದವನಾಗಿ ನಿರ್ಗುಣ ಬ್ರಹ್ಮನು ಅದ್ವಿತೀಯನು, ತಾನೂ ಅವನೂ ಒಂದೇ ಎಂಬುದನ್ನು ಮರೆತು, ಅವನನ್ನು ಅವಿದ್ಯಾ ಕಲ್ಪಿತವಾದ ಕ್ಷೇತ್ರ ಕ್ಷೇತ್ರಜ್ಞ ರೂಪವಾದ ಅಪರಾ ಪರಾ ಪ್ರಕೃತಿಗಳೆರಡನ್ನೂ ಹೊಂದಿರುವ ಸಗುಣಬ್ರಹ್ಮನನ್ನಾಗಿ ಅಥವ ಈಶ್ವರನನ್ನಾಗಿ ತಿಳಿಯುತ್ತಾನೆ ಆದುದರಿಂದ ಸಗುಣಬ್ರಹ್ಮನಿಗೆ ಕ್ಷೇತ್ರಜ್ಞಕ್ಷೇತ್ರ ಅಥವ ಪುರುಷ ಪ್ರಕೃತಿ ಎಂಬ ಪರ ಮತ್ತು ಅಪರ ಎರಡು ಪ್ರಕೃತಿಗಳಿವೆ. ಈಶ್ವರನಿಗೆ ಹೇಗೆ ಆರಂಭವೇ ಇಲ್ಲವೋ ಹಾಗೆಯೇ ಅವನ ಅಪರ ಪರ ಪ್ರಕೃತಿ ಪುರುಷರಿಗೂ ಆರಂಭವೇ ಇಲ್ಲವೆಂದು ತಿಳಿಯಬೇಕು. ತನ್ನ ಅಪರ ಪರ ಪ್ರಕೃತಿಗಳಾದ ಪ್ರಕೃತಿ ಪುರುಷರಿಗೆ ಈಶ್ವರನು ಅವಿದ್ಯಾಕಲ್ಪಿತವಾದ ಸಂಯೋಗವನ್ನು ಉಂಟು ಮಾಡಿ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ನಡೆಸುತ್ತಲೇ ಇರುವನು. ಈಶ್ವರನಿಗೆ ಯಾವ ಸಂಬಂಧವೂ ಇಲ್ಲದ ಸ್ವತಂತ್ರರಾದ ಪ್ರಕೃತಿ ಪುರುಷರು ನಿತ್ಯರು ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಈ ಅಭಿಪ್ರಾಯವನ್ನು ಒಪ್ಪುವುದಕ್ಕೆ ಆಗುವುದಿಲ್ಲ; ಏಕೆಂದರೆ, ಆಗ ಈಶ್ವರನು ಜಗತ್ತಿಗೆ ಕರ್ತನಲ್ಲ ಎಂದು ಹೇಳಬೇಕಾಗುತ್ತದೆ.

ಈ ಜಗತ್ತಿನಲ್ಲಿ ಅನಂತಾನಂತ ವಿಕಾರಗಳೂ ಮತ್ತು ಅವುಗಳಿಗೆ ಸಂಬಂಧಪಟ್ಟ ಗುಣಗಳೂ ಕಂಡು ಬರುತ್ತಲೇ ಇವೆ. ಬುದ್ಧಿ, ಅಹಂಕಾರ, ಮನಸ್ಸು ಐದು ಜ್ಞಾನೇಂದ್ರಿಯಗಳೂ ಐದು ಕರ್ಮೇಂದ್ರಿಯಗಳೂ ಐದು ತನ್ಮಾತ್ರೆಗಳು, ಐದು ಭೂತಗಳು ಇವೆಲ್ಲವೂ ಕಾರ್ಯಗಳು ; ಈ ಕಾರ್ಯಗಳೇ ವಿಕಾರಗಳು. ಸುಖ, ದುಃಖ ಮೋಹ ಮೊದಲಾದವುಗಳ ರೂಪದಲ್ಲಿ ಯಾವುವು ಪರಿಣಾಮಗಳನ್ನು ಹೊಂದುತ್ತಿರುವುವೋ ಅವುಗಳೇ ಗುಣಗಳು. ಈ ವಿಕಾರಗಳೂ ಗುಣಗಳೂ ಪ್ರಕೃತಿಯಿಂದ ಹುಟ್ಟಿದವುಗಳನ್ನಾಗಿ ತಿಳಿಯಬೇಕು. ಅವಿದ್ಯಾ ಕಲ್ಪಿತವಾದ ಈಶ್ವರನ ಅಪಾರ ಪ್ರಕೃತಿಯು ಶರೀರ ಮತ್ತು ಅದರಲ್ಲಿರುವ ಹದಿನಾರು ತತ್ವಗಳು ಐದು ತನ್ಮಾತ್ರೆಗಳು, ಐದು ಭೂತಗಳು ಮತ್ತು ಸುಃಖ ದುಃಖ ಮೋಹಗಳ ರೂಪವಾಗಿರುವ ಗುಣಗಳು ಇವುಗಳೆಲ್ಲವನ್ನು ಉಂಟು ಮಾಡುವುದಕ್ಕೆ ಹೇತುವಾಗಿದೆ. ಅಥವ ಕಾರಣವಾಗಿದೆ. ಹಾಗೆಯೇ ಈಶ್ವರನ ಪರಾಪ್ರಕೃತಿಯಾದ ಅವಿದ್ಯೆಯಿಂದ ಕೂಡಿದ ಜೀವಾತ್ಮನು ಸುಖ ದುಃಖ ಮೋಹಾದಿಗಳನ್ನು (ಅವು ತಾನೇ ಎಂದು ಭ್ರಮಿಸುತ್ತಾ) ಅನುಭವಿಸುವುದಕ್ಕೆ ಹೇತುವಾಗಿ ಅಥವ ಕಾರಣನಾಗಿರುವನು.

ಜೀವಾತ್ಮನು ಶರೀರದ ಬಂಧನಕ್ಕೆ ಒಳಪಟ್ಟು ಸುಖ ದುಃಖ ಮೋಹಾದಿಗಳನ್ನು ಅನುಭವಿಸುವುವೇ ಅವನಿಗೆ ಸಂಸಾರವು. ಆದರೆ ಪುರುಷನ ನಿಜಸ್ವರೂಪವಾದ ಬ್ರಹ್ಮಕ್ಕೆ ಈ ವಿಧವಾದ ಸಂಸಾರವೇ ಇಲ್ಲ. ಹಾಗಾದರೆ ಅವಿದ್ಯಾಕಲ್ಪಿತವಾದ ಈ ಸಂಸಾರಪರಂಪರೆಯೂ ಬ್ರಹ್ಮ ಸ್ವರೂಪನಾದ ಪುರುಷನಿಗೆ ಹೇಗೆ ಉಂಟಾಗುತ್ತಲೇ ಇರುವುದು ? ಈಶ್ವರನ ಪರಾಪ್ರಕೃತಿಯಾದ ಜೀವಾತ್ಮನು ಅವಿದ್ಯಾಕಲ್ಪಿತವಾದ ಕಾರ್ಯಕರಣರೂಪದಿಂದ ಪರಿಣಾಮವಾಗಿರುವ ಈಶ್ವರನ ಅಪಾರ ಪ್ರಕೃತಿಯಲ್ಲಿದ್ದು, ಅಂದರೆ, ಆ ಅಪರಾ ಪ್ರಕೃತಿಯೇ ತಾನು ಎಂದು ತಪ್ಪಾಗಿ ಭಾವಿಸಿಕೊಂಡು, ಅವಿದ್ಯಾಕಲ್ಪಿತವಾಗಿರುವ ಅಪರಾ ಪ್ರಕೃತಿಯಲ್ಲಿ ಉಂಟಾಗುತ್ತಿರುವ ತ್ರಿಗುಣಗಳನ್ನೂ ಅನುಭವಿಸುತ್ತಿರುವನು. ಈ ಪ್ರಕಾರವಾಗಿ ಪುರುಷನು ಸುಖ, ದುಃಖ ಮೋಹಗಳೆಂಬ ಗುಣಗಳನ್ನೂ ಅನುಭವಿಸುವಾಗ ಅವನಿಗೆ " ನಾನೇ ಅವುಗಳು " ಎಂಬ ಭಾವವುಂಟಾಗುತ್ತದೆ. ಈ ಭಾವವೇ " ಗುಣ ಸಂಗವು ". ಅವನು ಯಾವಾಗಲೂ " ನಾನು ಈಗ ಸುಖಿಯು, ನಾನು ಈಗ ದುಃಖಿಯು, ನಾನು ನಾನು ಬುದ್ಧಿವಂತನು " ಎಂದು ಅನೇಕ ಪ್ರಕಾರವಾಗಿ ಅನುಭವಿಸು

ತ್ತಿರುವನು ಅಥವ ತಿಳಿದುಕೊಳ್ಳುತ್ತಿರುವನು. ಈ ವಿಧವಾದ ಗುಣಸಂಗವೇ ಜೀವಾತ್ಮನು ಪುನಃ ಪುನಃ ದೇವತೆ, ಉತ್ತಮ ಮನುಷ್ಯ ಮುಂತಾದ ಒಳ್ಳೇ ಗರ್ಭಗಳಲ್ಲಾಗಲೀ ಹುಟ್ಟುವುದಕ್ಕೆ ಕಾರಣವಾಗುತ್ತದೆ. ಅಂದರೇನು, ಈಶ್ವರನ ಪರಾಪ್ರಕೃತಿಯಾದ ಪುರುಷನು ಅವನ ಅಪರಾ ಪ್ರಕೃತಿಯ ಗುಣಗಳನ್ನು ಅವಿದ್ಯೆಯಿಂದ ತಾನೇ ಎಂದು ತಪ್ಪಾಗಿ ಭಾವಿಸಿ ಅವುಗಳನ್ನು ಅನುಭವಿಸುತ್ತಾ, ಅವುಗಳ ಸಂಗವನ್ನು ಪಡೆಯುತ್ತಿರುವುದರಿಂದ ಅವನಿಗೆ ಸದಸದ್ಯೋನಿಗಳಲ್ಲಿ ಜನ್ಮಗಳ ಅನುಭವವು ಉಂಟಾಗುತ್ತಲೇ ಇರುವುವು. ಒಟ್ಟಿನಲ್ಲಿ, ಪ್ರಕೃತಿಯು ಇರುವುದೆಂಬ ಅವಿದ್ಯೆಯೂ, ಅವುಗಳಲ್ಲಿ ಉಂಟಾಗುತ್ತಿರುವ ಕಾಮವೂ, ಜೀವಾತ್ಮನ ಸಂಸಾರ ಪರಂಪರೆಗಳಿಗೆ ಕಾರಣವು. ಅವಿದ್ಯೆಯು ಇದ್ದರೂ ಇರಬಹುದು; ಆದರೆ ಪುರುಷನು ಅವಿದ್ಯೆಯಿಂದ ಆ ಪ್ರಕೃತಿಯನ್ನು ತಾನೇ ಎಂದು ಭಾವಿಸುವುದು ಮತ್ತು ಸುಖ ದುಃಖ ಮೋಹಗಳನ್ನು " ತಾನೇ ಅವು " ಎಂದು ಭಾವಿಸುವುದು ಎಂಬ ಗುಣಸಂಗವು ಜೀವಾತ್ಮನು ಜನ್ಮಗಳನ್ನು ಪಡೆಯಲು ಮುಖ್ಯವಾದ ಕಾರಣವು.

### ಎರಡನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ಅಭಿಪ್ರಾಯದ ಪ್ರಕಾರ ಮುಖ್ಯ ಪದಗಳ ವಿಶೇಷ ಅರ್ಥಗಳು ಹೀಗೆವೆ.

೧೯. **ಪ್ರಕೃತಿ**=ಮಹತ್ತು, ಅಹಂಕಾರ, ಮನಸ್ಸು, ಹತ್ತು ಇಂದ್ರಿಯಗಳು, ಐದು ತನ್ಮಾತ್ರೆಗಳು, ಐದು ಮಹಾಭೂತಗಳು, ಎಂಬ ಇಪ್ಪತ್ತುಮೂರು ತತ್ವಗಳಾಗಿ ಪರಿಣಮಿಸುವ ಮತ್ತು ಸತ್ವ, ರಜಸ್ಸು, ತಮೋಗುಣಗಳನ್ನು ಪಡೆದಿರುವ ಮೂಲ ಪ್ರಕೃತಿಯು

**ಪುರುಷಃ**=ಸ್ಥಾವರ, ಜಂಗಮ–ತರು, ತಿರ್ಯಕ್ ಮನುಷ್ಯ, ದೇವಾದಿಗಳ ಶರೀರಗಳಲ್ಲಿರುವ ಪ್ರತಿಯೊಂದು ಪ್ರತ್ಯಗಾತ್ಮ ಅಥವ ಜೀವಾತ್ಮ.

**ಅನಾದಿ**=ಆರಂಭವೇ ಇಲ್ಲದ್ದು ; ಅದಕ್ಕೆ ಕೊನೆಯೂ ಇರುವುದಿಲ್ಲ.

**ವಿಕಾರಃ**=ಇಚ್ಛೆ, ದ್ವೇಷ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಶೋಕ, ಭಯ ಮೊದಲಾದ ಚಿತ್ತದ ಕಾರಣವಾದ ಮತ್ತು ಅದನ್ನು ವೃದ್ಧಿಪಡಿಸುತ್ತಿರುವ ಸಂಸಾರಕ್ಕೆ ವಿಕಾರಗಳು.

**ಗುಣಾಃ**=ಅಮಾನಿತ್ವ, ಅದಂಭಿತ್ವ, ಅಹಿಂಸೆ, ಕ್ಷಾಂತಿ ಇವೇ ಮೊದಲಾದ ಹಿಂದೆ ವಿವರಿಸಿರುವ ಹತ್ತೊಂಭತ್ತು ಜ್ಞಾನಾಭ್ಯಾಸಗಳು.

೨೦. **ಕಾರ್ಯ**=ಐದು ತನ್ಮಾತ್ರೆಗಳು ಮತ್ತು ಐದು ಭೂತಗಳ ಸಂಯೋಗದಿಂದ ಉಂಟಾಗಿರುವ ಶರೀರ,

**ಕಾರಣ**=ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಮನಸ್ಸು, ಅಹಂಕಾರ, ಮತ್ತು ಬುದ್ಧಿ ಇವುಗಳು.

**ಕರ್ತೃತ್ವೇ**=ಇವುಗಳು ಕಾರ್ಯಮಾಡುವ ವಿಷಯದಲ್ಲಿ.

**ಸುಖಃದುಃಖಾನಾಂ**=ಸುಖಃದುಃಖಗಳ.

**ಭೋಕ್ತೃತ್ವೇ**=ಅನುಭವಿಸುವುದರಲ್ಲಿ.

೨೧. **ಪ್ರಕೃತಿಸ್ಥೋಹಿ**=ಪ್ರಕೃತಿ ಸಂಬಂಧವುಳ್ಳವನಾಗಿ

**ಪ್ರಕೃತಿಜಾನ್ಗುಣಾನ್**=ಪ್ರಕೃತಿ ಸಂಬಂಧದಿಂದ ಉಂಟಾಗುವ ಗುಣಗಳ ಕಾರ್ಯಗಳಾದ ಸುಖ ದುಃಖಗಳನ್ನು

**ಭುಙ್ಕ್ತೇ**=ಭೋಗಿಸುತ್ತಾನೆ ಅಥವ ಅನುಭವಿಸುತ್ತಾನೆ.

**ಗುಣಸಂಗಃ**=ಪ್ರಕೃತಿ ಸಂಬಂಧದಿಂದ ಉಂಟಾಗುವ ಸತ್ವರಜಸ್ಸು ತಮೋಗುಣಗಳ ಸಂಪರ್ಕವು ಮತ್ತು ಅವುಗಳ ಕಾರ್ಯಗಳಾದ ಸುಖದುಃಖಗಳ ಸಂಪರ್ಕವು.

**ಸದಸದ್ಯೋನಿ ಜನ್ಮಸು**=ಒಳ್ಳೆಯದು ಮತ್ತು ಕೆಟ್ಟದ್ದು ಹುಟ್ಟುವ ಯೋನಿಗಳು ಅಥವ ಗರ್ಭಗಳ ವಿಷಯದಲ್ಲಿ.

ಜೀವಾತ್ಮನು ತನ್ನ ನಿಜಸ್ವರೂಪದಲ್ಲಿ ಶುದ್ಧಜ್ಞಾನ ಸ್ವರೂಪನು; ಪ್ರಕೃತಿಯು ಜ್ಞಾನರಹಿತವಾಗಿ ಪರಿಣಾಮಗಳನ್ನು ಹೊಂದುತ್ತಿರುವ ಸ್ವರೂಪವು. ಹೀಗೆ ಇವೆರಡೂ ವಿರುದ್ಧ ಸ್ವರೂಪಗಳನ್ನು ಪಡೆದಿದ್ದಾಗ್ಯೂ, ಅವು ಪ್ರತಿಯೊಂದು ಜೀವಿಯಲ್ಲೂ ಯಾವಾಗಲೂ ಸೇರಿಕೊಂಡೇ ಇರುವುವು. ಆದರೆ, ಇವು ಯಾವಾಗ ಒಂದಕ್ಕೊಂದು ಸೇರಿದವು ? ಎಂಬುದು ಯಾರಿಗೂ ಗೊತ್ತಿಲ್ಲ ಮತ್ತು ಗೊತ್ತಾಗುವುದೂ ಇಲ್ಲ : ಉದಾಹರಣೆಗಾಗಿ, ಬೀಜ ವೃಕ್ಷ ನ್ಯಾಯವನ್ನು ಪರೀಕ್ಷಿಸೋಣ. ಬೀಜವನ್ನು ಭೂಮಿಯಲ್ಲಿ ಬಿತ್ತಿದರೆ ವೃಕ್ಷವು ಸೂಕ್ಷ್ಮವಾಗಿ ಸೇರಿಕೊಂಡು ಇದೆ ಎಂದು ಹೇಳಬೇಕು. ವೃಕ್ಷವು ಬೆಳೆದ ಮೇಲೆ ಫಲಗಳುಂಟಾಗಿ ಅವುಗಳಲ್ಲಿ ಬೀಜವು ಉತ್ಪತ್ತಿಯಾಗುತ್ತದೆ ; ಆದುದರಿಂದ ವೃಕ್ಷದಲ್ಲಿ ಬೀಜವು ಸೂಕ್ಷ್ಮವಾಗಿ ಸೇರಿಕೊಂಡು ಇದೆ ಎಂದು ಹೇಳಬೇಕು. ಹೀಗಿರುವಲ್ಲಿ ಬೀಜವು ವೃಕ್ಷದಲ್ಲಿ ಮೊದಲು ಸೇರಿತೆ ಅಥವ ವೃಕ್ಷವು ಬೀಜದಲ್ಲಿ ಮೊದಲು ಸೇರಿತೆ ? ಎಂಬ ಪ್ರಶ್ನೆಗೆ ಯಾರೂ ಉತ್ತರ | ಹೇಳಲಾಗುವುದಿಲ್ಲ. ಈ ಸಂದೇಹವನ್ನು ಪರಿಹರಿಸುವುದಕ್ಕಾಗಿ ಬೀಜ ವೃಕ್ಷ ಎರಡೂ

ಅನಾದಿ ಅಂದರೆ ಅವುಗಳಿಗೆ ಆರಂಭವೇ ಇಲ್ಲ ಎಂದು ಹೇಳತ್ತೇವೆ ; ಅವು ಯಾವಾಗಲೂ ಇದ್ದವು ಮತ್ತು ಎಂದೆಂದಿಗೂ ಇರುತ್ತವೆ. ಹಾಗೆಯೇ ಪ್ರಕೃತಿ ಪುರುಷರ. ಕಲೆತಿರುವ ಜೀವಿಯಲ್ಲಿ ಪ್ರಕೃತಿಯು ಮೊದಲು ಹುಟ್ಟಿ ಪುರುಷನನ್ನು ಬಂಧಿಸಿತೇ? ಅಥವ ಪುರುಷನು ಮೊದಲು ಹುಟ್ಟಿ ಪ್ರಕೃತಿಯಲ್ಲಿ ಆಸೆಪಟ್ಟು ಅದರೊಳಗೆ ಸೇರಿಕೊಂಡನೆ ? ಎಂಬ ಪ್ರಶ್ನೆಗೆ ಯಾರೂ ಉತ್ತರ ಹೇಳಲಾಗುವುದಿಲ್ಲ. ಆದುದರಿಂದ ಪ್ರಕೃತಿಯೂ ಪುರುಷನೂ ಇಬ್ಬರೂ ಅನಾದಿ ಎಂದು ಇಲ್ಲಿ ಹೇಳಿದೆ ; ಅವೆರಡೂ ಯಾವಾಗಲೂ ಇದ್ದವು ಮತ್ತು ಎದೆಂದಿಗೂ ಇರುತ್ತವೆ. ಅನಾದಿಯಾದ ಈ ಪ್ರಕೃತಿ ಪುರುಷರು ಯಾವಾಗ ಒಂದಕ್ಕೊಂದು ಸೇರಿಕೊಂಡವು ಎಂಬುದೂ ಕೂಡ ಯಾರಿಗೂ ಗೊತ್ತಾಗಿಲ್ಲ ಮತ್ತು ಗೊತ್ತಾಗುವುದೂ ಇಲ್ಲ. ಆದುಹರಿಂದ ಇವು ಯಾವಾಗ ಒಂದಕ್ಕೊಂದು ಸೇರಿದವು ? ಎಂದು ಕೇಳುವುದಕ್ಕೆ ಬದಲಾಗಿ ಇವು ಅನಾದಿಯಾಗಿಯೇ ಸೇರಿಕೊಂಡು ಇವೆ ಎಂದು ಹೇಳುತ್ತೇವೆ. ಇನ್ನೇನು, ಮನುಷ್ಯನು ಸಾಯುವಾಗ ಅವನ ಆತ್ಮ ಅಥವ ಪುರುಷನು ನಾಶವಾಗುವದಿಲ್ಲವೆಂದೂ ಮತ್ತು ಅವನ ಶರೀರವೂ ಕೂಡ ಪರಿಣಾಮವನ್ನು ಹೊಂದತ್ತದೆಯೇ ವಿನಹ ಅದು ನಾಶವಾಗುವುದಿಲ್ಲವೆಂದೂ ಗೀತೆಯ ಎರಡನೆಯ ಅಧ್ಯಾಯದಲ್ಲಿ ಉಪದೇಶವಿದೆ ; ಆದುದರಿಂದ ಆದಿಯೇ ಇಲ್ಲದ ಪ್ರಕೃತಿ ಪುರುಷರಿಗೆ ಅಂತ್ಯ ಅಥವ ಕೊನೆಯೂ ಇಲ್ಲವೆಂದು ತಿಳಿಯಬೇಕು.

ಆತ್ಮನಿಗೆ ನಿಜಸ್ವರೂಪದಲ್ಲಿ ವಿಕಾರಗಳೂ ಇಲ್ಲ ಮತ್ತು ಗುಣಗಳೂ ಇಲ್ಲ ; ಆದರೆ ಪ್ರಕೃತಿಯ ಬಂಧನಕ್ಕೆ ಒಳಪಟ್ಟಿರುವ ಅಂದರೆ ಶರೀರವನ್ನು ಪಡೆದಿರುವ ಬದ್ಧಜೀವಾತ್ಮನಿಗೆ ಮಾತ್ರ ವಿಕಾರಗಳೂ ಗುಣಗಳೂ ಇವೆ. ವಿಕಾರಗಳೆಂದರೇನು ? ಇದೇ ಅಧ್ಯಾಯದ ಐದು ಮತ್ತು ಆರನೆಯ ಶ್ಲೋಕಗಳಲ್ಲಿ ಮಹಾಭೂತಗಳು, ಅಹಂಕಾರ, ಬುದ್ಧಿ, ಅವ್ಯಕ್ತ ಹತ್ತು ಇಂದ್ರಿಯಗಳು ಮನಸ್ಸು, ಐದು ಇಂದ್ರಿಯಗೋಚರಗಳು, ಇಚ್ಛೆ, ದ್ವೇಷ, ಸುಖ ದುಃಖ ಸಂಘಾತ, ಚೈತನ್ಯ, ಧೃತಿ ಎಂಬಿವು ಕ್ಷೇತ್ರದ ವಿಕಾರಗಳೆಂದು ತಿಳಿಸಿದೆ. ಹಾಗೆಯೇ ಏಳನೆಯ ಶ್ಲೋಕದಿಂದ ಹನ್ನೊಂದನೆಯ ಶ್ಲೋಕದವರೆಗೆ ಅಮಾನಿತ್ವ, ಅದಂಭಿತ್ವ, ಕ್ಷಾಂತಿ, ಆರ್ಜವ, ಮೊದಲಾದ ಹತ್ತೊಂಬತ್ತು ಜ್ಞಾನಾಭ್ಯಾಸಗಳನ್ನು ಉಪದೇಶಮಾಡಿದೆ ; ಇವುಗಳೆಲ್ಲವೂ ಗುಣಗಳು. ಈ ವಿಕಾರಗಳೂ ಮತ್ತು ಗುಣಗಳೂ ಶರೀರವನ್ನು ಪಡೆದಿರುವ ಚೇತನನ ಶರೀರ ಅಥವ ಪ್ರಕೃತಿಯಲ್ಲೇ ಇವೆ ಎಂಬುದನ್ನು ಗಮನಿಸಿ ತಿಳಿಯ ಬೇಕು. ಪ್ರಕೃತಿಯಲ್ಲಿ ಬಂಧವನ್ನು ಹೆಚ್ಚಿಸುವ ಮೇಲೆ ವಿವರಿಸಿದ ವಿಕಾರಗಳೂ ಇವೆ ಮತ್ತು ಬಂಧವನ್ನು ಕತ್ತರಿಸಿ ಮೋಕ್ಷವನ್ನು ಹೊಂದಲು ಸಹಾಯ ಮಾಡುವ ಜ್ಞಾನಾಭ್ಯಾಸಗಳೆಂಬ ಗುಣಗಳೂ ಇವೆ. ಪದಾರ್ಥಗಳಲ್ಲಿ ಮತ್ತು ಜೀವಿಗಳಲ್ಲಿ ಇಚ್ಛೆ ಮತ್ತು ದ್ವೇಷ ಮತ್ತು ಅವುಗಳ ವಿಚಾರದಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಶೋಕ, ಭಯ ಮೊದಲಾದುವುಗಳು ಪುರುಷನಿಗೆ ಪ್ರಕೃತಿ ಬಂಧವನ್ನು ವೃದ್ಧಿಪಡಿಸುತ್ತವೆ. ಅಮಾನಿತ್ವಾದಿ ಹತ್ತೊಂಬತ್ತು ಗುಣಗಳು ಅವನಿಗೆ ಮೋಕ್ಷವನ್ನು ಹೊಂದಲು ಸಹಾಯ ಮಾಡುತ್ತವೆ. ಒಟ್ಟಿನಲ್ಲಿ ಪ್ರಕೃತಿ ಬಂಧನವನ್ನು ಹೆಚ್ಚಿಸುವ ವಿಕಾರಗಳೂ ಮತ್ತು ಮೋಕ್ಷವನ್ನು ಹೊಂದಲು ಸಹಾಯ ಮಾಡುವ ಜ್ಞಾನಾಭ್ಯಾಸಗಳೂ ಇವೆಲ್ಲವೂ ಪುರುಷನೊಂದಿಗೆ ಅನಾದಿಕಾಲದಿಂದ ಕಲೆತು ಸೂಕ್ಷ್ಮ ಮತ್ತು ಸ್ಥೂಲ ಶರೀರಗಳ ರೂಪದಲ್ಲಿರುವ ಪ್ರಕೃತಿಯಿಂದಲೇ ಉಂಟಾಗುತ್ತವೆ.

ಮನುಷ್ಯನು ಮಾಡುವ ಕಾರ್ಯಗಳಲ್ಲಿ ಪ್ರತಿಯೊಂದರಲ್ಲಿಯೂ ಮೂರು ಭಾಗಗಳಿವೆ. ಅವು ಯಾವುವೆಂದರೆ ಕಾರ್ಯ ಕಾರಣ ಮತ್ತು ಸುಖ ದುಃಖಗಳ ಅನುಭವವು. ಉದಾಹರಣೆಗಾಗಿ ನಾನು ಮಾತನಾಡುತ್ತೇನೆ ; ನೀವು ಕೇಳುತ್ತೀರಿ ; ಇದರ ಫಲವಾಗಿ ನಾವು ಸಂತೋಷಪಡುತ್ತೇವೆ ಅಥವ ದುಃಖಪಡುತ್ತೇವೆ. ಬಾಯಿನಲ್ಲಿ ಮಾತನಾಡುವುದಕ್ಕೆ ಮತ್ತು ಕಿವಿಯಲ್ಲಿ ಕೇಳುವುದಕ್ಕೆ ಕಾರ್ಯವಾದ ಶರೀರವಿರಬೇಕು. ಮತ್ತು ಕಾರಣವಾದ ವಾಕ್ ಮತ್ತು ಶ್ರೋತ್ರೇಂದ್ರಿಯಗಳು ಇರಬೇಕು. ಹೀಗೆ ಮಾತನಾಡುವುದರಿಂದ ಮತ್ತು ಕೇಳುವದರಿಂದ ಸುಖ ದುಃಖಾನುಭವಗಳು ಉಂಟಾಗುತ್ತವೆ. ಆದುದರಿಂದ ಕಾರ್ಯವೆಂದರೆ ಶರೀರ ; ಕಾರಣವೆಂದರೆ ಜ್ಞಾನೇಂದ್ರಿಯಗಳು, ಮನ, ಅಹಂಕಾರ ಬುದ್ಧಿಗಳು ಮತ್ತು ಇವುಗಳಲ್ಲದೆ ಸುಖ ದುಃಖಾನುಭವಗಳು ಬೇರೆ ಇವೆ. ಹೀಗೆ ಶರೀರ ಮತ್ತು ಇಂದ್ರಿಯಾದಿಗಳು ವ್ಯಾಪಾರ ಮಾಡುವ ವಿಷಯಗಳೆಲ್ಲಕ್ಕೂ, ಅಂದರೆ, ಕಾರ್ಯ ಕಾರಣಗಳಿಗೆ ಮನುಷ್ಯನಲ್ಲಿರುವ ಕ್ಷೇತ್ರ ಅಥವ ಪ್ರಕೃತಿಯೇ ಕಾರಣ. ಅಂದರೇನು ಭೋಗಕ್ಕೆ ಸಾಧನಗಳಾದ ಕ್ರಿಯೆಗಳೆಲ್ಲಕ್ಕೂ ಪುರುಷನಿಂದ ಹೊಂದಲ್ಪಟ್ಟ ಸ್ಥೂಲ ಮತ್ತು ಸೂಕ್ಷ್ಮ ಶರೀರಾಕಾರವಾಗಿರುವ ಪ್ರಕೃತಿಯೇ ಕಾರಣವೆಂದು ಹೇಳಲ್ಪಟ್ಟಿದೆ. ಆದರೆ ಪ್ರಕೃತಿಯೊಂದಿಗೆ ಕಲೆತಿರುವ ಅಥವ ಶರೀರವನ್ನು ಪಡೆದಿರುವ ಪುರುಷನು ಮಾತ್ರ ಕಾರ್ಯ ಕಾರಣದ ಕ್ರಿಯೆಗಳಿಂದ ಉಂಟಾಗುವ ಸುಖದ ಮತ್ತು ದುಃಖದ ಅನುಭವಗಳಿಗೆ ಕಾರಣನಾಗಿದ್ದಾನೆ. ಅಂದರೇನು, ಪುರುಷನು ಹುಟ್ಟಿದಂದಿನಿಂದ ಸಾಯುವವರೆಗೂ ಸ್ಥೂಲಶರೀರ ಮತ್ತು ಅಂತಃಕರಣಗಳ ಮೂಲಕ ನಡೆಯುತ್ತಿರುವ ವ್ಯಾಪಾರಗಳಿಂದ ಉಂಟಾಗುತ್ತಿರುವ ಸುಖದುಃಖಗಳಿಗೆ ಆಶ್ರಯವಾದ ಸ್ಥಾನನಾಗಿರುತ್ತಾನೆ ಎಂದು ಹೇಳಲ್ಪಟ್ಟಿದೆ.

(Re-printed from Mysore Vysya Patrika September 1959)

# ಭಗವದ್ಗೀತಾ ಅಧ್ಯಾಯ ೧೩. ಪಾಠ ೫

### ಪುರುಷನಿಗೆ ಜನ್ಮಗಳುಂಟಾಗಲು ಕಾರಣ.

ಇಲ್ಲಿಯವರೆಗೆ ಒಂದಕ್ಕೊಂದು ಕಲೆತಿರುವ ಪ್ರಕೃತಿ ಪುರುಷರ ವಿಚಾರದಲ್ಲಿ ಇವೆರಡೂ ಅನಾದಿಯೆಂದೂ, ವಿಕಾರಗಳೂ ಗುಣಗಳೂ ಪ್ರಕೃತಿಯಿಂದಲೇ ಉಂಟಾಗುತ್ತವೆಯೆಂದೂ, ಕಾರ್ಯಕಾರಣ ಕರ್ತೃತ್ವಕ್ಕೆ ಪ್ರಕೃತಿಯೇ ಕಾರಣವೆಂದೂ, ಸುಖದುಃಖಗಳ ಭೋಕ್ತೃತ್ವಕ್ಕೆ ಪುರುಷನೇ ಕಾರಣನೆಂದೂ ಹೇಳಲ್ಪಟ್ಟಿತು. ಇನ್ನು ಪುರುಷನು ಏಕೆ ಪ್ರಕೃತಿಬಂಧನಕ್ಕೆ ಇಲ್ಲಿಯವರೆಗೆ ಒಳಪಡುತ್ತಾ ಇದ್ದಾನೆ ಎಂಬುದನ್ನು ವಿಚಾರ ಮಾಡಬೇಕು. ಪುರುಷನು ತನ್ನ ನಿಜಸ್ವರೂಪದಲ್ಲಿ ತನ್ನ ಸ್ವಂತ ಸ್ವರೂಪವನ್ನು ತಾನೇ ಅನುಭವಿಸುತ್ತಾ ಆನಂದದಿಂದ ಕೂಡಿದ ಸ್ವಭಾವವುಳ್ಳವನಾದಾಗ್ಯೂ ಏಕೆ ಇಲ್ಲಿಯವರೆಗೆ ತನ್ನ ಸ್ವಂತ ಆನಂದ ಸ್ವರೂಪವನ್ನು ಮರೆತು ಸಂಸಾರವೆಂಬ ಒಳ್ಳೆಯ ಮತ್ತು ಕೆಟ್ಟ ಜನ್ಮಗಳಲ್ಲಿ ಆಸಕ್ತನಾಗಿ, ಅವುಗಳಲ್ಲಿ ಹುಟ್ಟುತ್ತಾ ಸಾಯುತ್ತಾ, ಶಬ್ಧಾದಿ ವಿಷಯಗಳಲ್ಲಿ ಆಸಕ್ತನಾಗಿರುವನು ? ಏಕೆ ಈಗಲೂ ಕೂಡ ಇವನು ಶರೀರಾದಿಗಳ ರೂಪದ ಪ್ರಕೃತಿಯಲ್ಲಿ ಕಲೆತು ಅದರ ಬಂಧನಕ್ಕೆ ಒಳಪಟ್ಟಿರುವನು ? ಒಂದು ಜನ್ಮದಲ್ಲಿ ಪ್ರಕೃತಿಯ ವಿಕಾರಗಳಾದ ದೇವ, ಮನುಷ್ಯ, ಪಶು ಮೊದಲಾದ ವಿಶೇಷ ಗರ್ಭಗಳಲ್ಲಿ ಇದ್ದ ಪುರುಷನು ಮುಂದಿನ ಜನ್ಮದಲ್ಲಿ ಆಯಾ ಗರ್ಭಗಳಿಂದ ಅವನಿಗೆ ಸ್ವಾಭಾವಿಕವಾಗಿ ಬಂದ ಸತ್ವ, ರಜಸ್ಸು, ತಮಸ್ಸುಗುಣಮಯವಾದ ಸುಖದುಃಖಾನುಭವಗಳಲ್ಲಿ ಸಂಬಂಧವುಳ್ಳವನಾಗಿ, ಅದಕ್ಕೆ ಸಾಧಕಗಳಾದ ಪುಣ್ಯ–ಪಾಪಕರ್ಮಗಳಲ್ಲಿ ಪ್ರವರ್ತಿಸಿದನು. ಅನಂತರ ಆ ಪುಣ್ಯ ಪಾಪಗಳ ಫಲಗಳನ್ನು ಭುಜಿಸುವುದಕ್ಕೋಸ್ಕರ ಅದಕ್ಕೆ ಮುಂದಿನ ಜನ್ಮದಲ್ಲಿ ಪುನಃ ಒಳ್ಳೆಯದೂ ಕೆಟ್ಟದ್ದೂ ಆದ ಗರ್ಭಗಳಲ್ಲಿ ಹುಟ್ಟಿದನು. ಅನಂತರ ತಿರುಗಿಯೂ ಕರ್ಮವನ್ನು ಮಾಡಲು ಪ್ರಾರಂಭಿಸಿ ಅದರಿಂದ ಇನ್ನೂ ಹಲವು ಬಗೆಯ ಗರ್ಭಗಳಲ್ಲಿ ಹುಟ್ಟಿದನು. ಹೀಗೆ ಪುರುಷನು ಪ್ರತಿಜನ್ಮದಲ್ಲಿಯೂ ಪ್ರಕೃತಿಯೊಂದಿಗೆ ಸೇರಿದವನಾಗಿ ಅದರಿಂದ ಬರುವ ಸತ್ವ, ರಜಸ್ಸು, ತಮಸ್ಸು ಎಂಬ ಗುಣಗಳ ಕಾರ್ಯಗಳಾದ ಸುಖದುಃಖಗಳನ್ನು ಅನುಭವಿಸುತ್ತಾ ಒಂದಾದ ಮೇಲೆ ಇನ್ನೊಂದು ಜನ್ಮವನ್ನು ಇಲ್ಲಿಯವರೆಗೆ ಪಡೆಯುತ್ತಲೇ ಇರುವನು.

ಹಾಗಾದರೆ ಈ ಜನ್ಮಗಳಿಗೆ ಅಥವ ಚಕ್ರಾಕಾರವಾಗಿ ಹುಟ್ಟುತ್ತಾ ಸಾಯುತ್ತಾ ಇರುವ ಆತ್ಮನ ಬಂಧನಕ್ಕೆ ಅಂತ ಅಥವ ಕೊನೆಯೇ ಇಲ್ಲವೆ ? ಮುಂದಿನ ನಾಲ್ಕು ಶ್ಲೋಕಗಳಲ್ಲಿ ಈ ಪ್ರಶ್ನೆಗೆ ಉತ್ತರವನ್ನು ಹೇಳಿದೆ ಪರಿಶುದ್ಧ ಆತ್ಮನಿಗೆ ಗುಣಗಳೂ ಇಲ್ಲ ಮತ್ತು ವಿಕಾರಗಳೂ ಇಲ್ಲ; ಆದರೆ ಬದ್ಧಚೇತನನು ಹಿಂದಿನ ಜನ್ಮದಲ್ಲಿ ಕಾಲವಾದಾಗ ಸಾತ್ವಿಕಗುಣವನ್ನು ಪಡೆದಿದ್ದುದರಿಂದ ಮುಂದಿನ ಜನ್ಮದಲ್ಲಿ ಅವನು ಸಾತ್ವಿಕಗರ್ಭದಲ್ಲಿ ಹುಟ್ಟಿ ಸಾತ್ವಿಕ ವಿಕಾರಗಳಿಂದಕೂಡಿದ ಶರೀರವನ್ನು ಪಡೆದನು. ಹಾಗೆಯೇ ಅವನು ಹಿಂದಿನ ಜನ್ಮದಲ್ಲಿ ಕಾಲವಾದಾಗ ರಜೋಗುಣವನ್ನು ಪಡೆದಿದ್ದುದರಿಂದ ಮುಂದಿನ ಜನ್ಮದಲ್ಲಿ ಅವನು ರಜೋಗುಣದ ವಿಕಾರಗಳಿಂದ ಕೂಡಿರುವ ಶರೀರವನ್ನು ಪಡೆದನು. ಇನ್ನೇನು, ಅವನು ಹಿಂದಿನ ಜನ್ಮದಲ್ಲಿ ಕಾಲವಾದಾಗ ತಮೋಗುಣವನ್ನು ಪಡೆದಿದ್ದುದರಿಂದ ಮುಂದಿನ ಜನ್ಮದಲ್ಲಿ ಅವನು ತಮೋಗುಣದ ಗರ್ಭದಲ್ಲಿ ಹುಟ್ಟಿ ತಮೋಗುಣದ ವಿಕಾರಗಳಿಂದ ಕೂಡಿರುವ ಶರೀರವನ್ನು ಪಡೆದನು ಇದೇ ರೀತಿಯಲ್ಲಿ ಮಾನವನು ಈ ಜನ್ಮದಲ್ಲಿ ಪಡೆದಿರುವ ಸಾತ್ವಿಕ, ರಾಜಸಿಕ, ತಾಮಸಿಕಗುಣಗಳ ಪ್ರಾಚುರ್ಯವು ಅವನಿಗೆ ಮುಂದಿನ ಜನ್ಮದ ಗರ್ಭದಲ್ಲಿ ಹುಟ್ಟುವುದಕ್ಕೂ ಮತ್ತು ಸಾತ್ವಿಕ, ರಾಜಸಿಕ, ತಾಮಸಿಕ ಶರೀರಗಳನ್ನು ಪಡೆಯುವುದಕ್ಕೂ ಕಾರಣವಾಗುತ್ತದೆ.

### ಮೂರನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ಅಭಿಪ್ರಾಯದ ಪ್ರಕಾರ ಮುಖ್ಯ ಪದಗಳ ತಾತ್ಪರ್ಯ ಹೀಗಿದೆ :—

**ಪ್ರಕೃತಿ**= ಇಪ್ಪತ್ತುನಾಲ್ಕು ತತ್ವಗಳಿಂದ ಕೂಡಿದ ಪ್ರಕೃತಿ ಮತ್ತು ಲಕ್ಷ್ಮೀದೇವಿ.

**ಪುರುಷಂ**= ಪರಮಾತ್ಮನು ಮತ್ತು ಜೀವಾತ್ಮನು ;

**ವಿಕಾರಾನ್**=ಇಚ್ಛೆ ಮೊದಲಾದ ವಿಕಾರವಾಗುವ ಪದಾರ್ಥಗಳನ್ನು ;

**ಗುಣಾನ್**= ಸತ್ವ, ರಜಸ್ಸು ಮತ್ತು ತಮಸ್ಸು ಎಂಬ ಗುಣಗಳನ್ನು (೧೯)

**ಕಾರ್ಯ**=ಜೀವಾತ್ಮನ ಶರೀರ ;

**ಕಾರಣ**=ಅವನ ಇಂದ್ರಿಯಗಳು.

**ಕರ್ತೃತ್ವೇ**=ಉತ್ಪತ್ತಿಮಾಡುವುದರಲ್ಲಿ ;

**ಪುರುಷಃ**=ಪರಮಾತ್ಮನು ;

**ಸುಖದುಃಖಾನಾಂ**=ಆತ್ಮನ ಸುಖದುಃಖಗಳ (೨೦)

**ಪ್ರಕೃತಿಸ್ಥಃ**=ದೇಹದಲ್ಲಿರುವ ;

**ಪುರುಷಃ**=ಜೀವನು ;

**ಪ್ರಕೃತಿಜಾನ್ ಗುಣಾನ್**=ಪ್ರಕೃತಿಯ ದ್ವಾರಾ ಉಂಟಾಗುವ ಗುಣಗಳನ್ನು ಅಂದರೆ ಸುಖದುಃಖಗಳನ್ನು ;

**ಭುಂಕ್ತೇ**=ಅನುಭವಿಸುತ್ತಾನೆ

**ಇತಿಹಿ**=ಇದು ನಮ್ಮೆಲ್ಲರ ಅನುಭವದಲ್ಲಿದೆ.

ಪುರುಷನೆಂದರೆ ಒಬ್ಬ ವ್ಯಕ್ತಿಯ ಶರೀರದಲ್ಲಿರುವ ಒಬ್ಬ ಜೀವಾತ್ಮ ಎಂಬುದು ಸಂಕುಚಿತವಾದ ಅರ್ಥ ; ಒಟ್ಟು ಜಗತ್ತನ್ನು ಶರೀರವಾಗಿ ಪಡೆದಿರುವ ಪರಮಾತ್ಮನೇ ಪುರುಷನು ಎಂಬುದು ವಿಶಾಲವಾದ ಅರ್ಥ. ಹಾಗೆಯೇ ಪ್ರಕೃತಿ ಎಂದರೆ ಐದು ಮಹಾಭೂತಗಳು, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಮನಸ್ಸು, ಅಹಂಕಾರ, ಬುದ್ಧಿ ಎಂಬ ಪರಿಣಾಮಗಳನ್ನು ಹೊಂದುವ ಮೂಲಪ್ರಕೃತಿ ಎಂಬುದು ಸಾಮಾನ್ಯ ಅರ್ಥ. ಮೂಲಪ್ರಕೃತಿಯಲ್ಲಿ ಪರಿಣಾಮಗಳನ್ನುಂಟುಮಾಡಲು ಪರಮಾತ್ಮನಿಗೆ ಸಹಾಯಮಾಡುವ ಲಕ್ಷ್ಮೀದೇವಿಯನ್ನೂ ಕೂಡ “ ಪ್ರಕೃತಿ ” ಎನ್ನುವ ಪದವು ತಿಳಿಸುತ್ತದೆ ಎಂಬುದು ವಿಶೇಷಾರ್ಥ. ಆದುದರಿಂದ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳು ಮುಖ್ಯವಾಗಿ ಪರಮಾತ್ಮ–ಲಕ್ಷ್ಮೀದೇವಿಯರಿಂದಲೂ, ಎರಡನೆಯದಾಗಿ ಮೂಲಪ್ರಕೃತಿ ಮತ್ತು ಜೀವಾತ್ಮರಿಂದಲೂ ನಡೆಯುತ್ತವೆ ಎಂದು ತಿಳಿಯಬೇಕು ಅಂತು ಪರಮಾತ್ಮ, ಲಕ್ಷ್ಮೀದೇವಿ, ಅನಂತಜೀವರುಗಳು, ಅಖಂಡ–ಮೂಲಪ್ರಕೃತಿ ಈ ನಾಲ್ಕು ತತ್ವಗಳೂ ಅನಾದಿಯಾಗಿ ಬೇರೆ ಬೇರೆಯಾಗಿ ಸತ್ಯಗಳಾಗಿವೆ. ಅಂದರೆ ಇವುಗಳಿಗೆ ಉತ್ಪತ್ತಿಯೇ ಇಲ್ಲವೆಂದು ತಿಳಿಯಬೇಕು. ನಮ್ಮ ಅನುಭವದಲ್ಲಿ ಕಂಡು ಬರುವ ಪ್ರಪಂಚದ ಬೆಟ್ಟ, ನದಿ, ಸಮುದ್ರ, ಸೂರ್ಯ, ನಕ್ಷತ್ರ ಮೊದಲಾದ ಹೊರಗಿನ ಪದಾರ್ಥಗಳೂ, ಅಂತಃಕರಣ ಅಥವ ಮನಸ್ಸಿನಲ್ಲಿರುವ ಇಚ್ಛೆ, ದ್ವೇಷ, ಮೊದಲಾದ ಚಿತ್ತವೃತ್ತಿರೂಪದ ಪದಾರ್ಥಗಳೂ ಮತ್ತು ಇವುಗಳೊಡನೆ ಇರುವ ಸತ್ವರಜಸ್ತಮೋಗುಣಗಳೂ ಇವೆಲ್ಲವೂ ಪ್ರಕೃತಿಯಿಂದಲೇ ಹುಟ್ಟಿದವುಗಳನ್ನಾಗಿ ತಿಳಿಯಬೇಕು. ಅಂದರೇನು, ಪ್ರಕೃತಿಯೇ ಇವುಗಳಿಗೆಲ್ಲಾ ಉಪಾದಾನ ಕಾರಣವಾಗಿವೆ ಎಂಬುದನ್ನು ಗಮನಿಸಬೇಕು.

ಮನುಷ್ಯನು ಶರೀರೇಂದ್ರಿಯ ಮನೋಬುದ್ಧಿಗಳ ಮೂಲಕ ಕರ್ಮಗಳನ್ನು ಮಾಡಿ ಸುಖದುಃಖಗಳನ್ನು ಅನುಭವಿಸುತ್ತಾನೆ. ಈ ಕರ್ಮಗಳನ್ನು ಮಾಡಲು ಆಧಾರವಾದ ದೇಹಗಳನ್ನೂ ಇಂದ್ರಿಯಗಳನ್ನೂ ಉತ್ಪತ್ತಿಮಾಡಲು ಮತ್ತು ಅವುಗಳಿಂದ ಪರಿಣಾಮವುಂಟಾಗಲು ಜಡಪ್ರಕೃತಿಯೇ ನಿಮಿತ್ತ ಕಾರಣವು ಮಾತ್ರ. ಆದರೆ ಜೀವಾತ್ಮನಿಗೆ ಸಂಬಂಧಪಟ್ಟ ಶರೀರೇಂದ್ರಿಯ ಪರಿಣಾಮಗಳನ್ನು ಲಕ್ಷ್ಮೀದೇವಿಯು ತನ್ನ ಶಕ್ತಿಯಿಂದ ನಡೆಸುತ್ತಾಳೆ. ಹಾಗಾದರೆ, ಜೀವನು ಸುಖದುಃಖಗಳನ್ನು ಅನುಭವಿಸಲು ಕಾರಣವಾವುದು ? ಜೀವಾತ್ಮನೇ ಅವನ ಸುಖದುಃಖಗಳ ವಿಷಯದಲ್ಲಿ ಕರ್ತನು ಅಕಾರಣನು ಎಂದು ಸಾಮಾನ್ಯವಾಗಿ ಹೇಳಬಹುದು. ಆದರೆ ಜೀವನು ಸುಖದುಃಖಗಳನ್ನು ಅನುಭವಿಸುವುದಕ್ಕೆ ಪರಮಾತ್ಮನೇ ಮುಖ್ಯವಾದ ಕಾರಣನೆಂದು ಶಾಸ್ತ್ರದಲ್ಲಿ ಹೇಳಿದೆ ; ಏಕೆಂದರೆ ಪರಮಾತ್ಮನು ಚೇತನ ಮತ್ತು ಅಚೇತನಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳಿಗೂ ನಿಜವಾದ ಕರ್ತೃವು. ಒಟ್ಟನಲ್ಲಿ ಕರ್ಮದ ಕಾರ್ಯಕಾರಣಗಳಿಗೆ ಮೂಲಪ್ರಕೃತಿಯು ನಿಮಿತ್ತವಾದ ಕರ್ತೃವು ಮತ್ತು ಲಕ್ಷ್ಮೀದೇವಿಯು ಮುಖ್ಯವಾದ ಕರ್ತೃವು. ಹಾಗೆಯೇ ಮನುಷ್ಯನು ಅನುಭವಿಸುವ ಸುಖದುಃಖಗಳಿಗೆ ಜೀವನು ನಿಮಿತ್ತವಾದ ಕರ್ತೃವು ಮತ್ತು ಪರಮಾತ್ಮನು ಮುಖ್ಯವಾದ ಕರ್ತೃವು.

ಪ್ರತಿಯೊಂದು ಜೀವಿಯಲ್ಲಿಯೂ ಜೀವಾತ್ಮರು ಭಿನ್ನಭಿನ್ನರಾಗಿ ಪ್ರಕೃತಿಯ ಕಾರ್ಯವಾದ ದೇಹಾದಿಗಳಲ್ಲಿ ಇರುವರು. ಆದುದರಿಂದ ಅವರು ತಮ್ಮ ದೇಹಗಳೆಂಬ ಪ್ರಕೃತಿಯಲ್ಲಿ ಉಂಟಾಗುತ್ತಿರುವ ಸುಖದುಃಖ ಮೊದಲಾದವುಗಳನ್ನು ಅನುಭವಿಸುತ್ತಲೇ ಇರುವರು. ಸುಖದುಃಖಗಳು ಮನುಷ್ಯರಲ್ಲಿ ಪ್ರತಿಯೊಬ್ಬನ ಅನುಭವಕ್ಕೆ ಒಳಪಟ್ಟದೆಯಲ್ಲವೆ ? ತನ್ನ ನಿಜಸ್ವರೂಪದಲ್ಲಿ ಪರಿಶುದ್ಧ ಜ್ಞಾನಸ್ವರೂಪನಾದ ಜೀವಾತ್ಮನು ಪ್ರಕೃತಿಯ ಕಾರ್ಯವಾದ ದೇಹದಲ್ಲಿ ಇರುವುದಕ್ಕೆ ಏನು ಕಾರಣ ? ಜೀವಾತ್ಮನಿಗೆ ತನ್ನ ಶರೀರದಲ್ಲಿ ಉಂಟಾಗುವ ಸುಖಗಳನ್ನು ಯಾವಾಗಲೂ ಅನುಭವಿಸುತ್ತ ಇರಬೇಕು ಮತ್ತು ದುಃಖಗಳನ್ನು ಆದಷ್ಟುಮಟ್ಟಿಗೆ ಕಮ್ಮಿಮಾಡಿಕೊಳ್ಳಬೇಕು ಎಂಬ ಅನುರಾಗವು ಅಥವ ಉತ್ಕಟೇಚ್ಛೆಯು ಇರುವುದರಿಂದ ಅದು ಆಯಾ ಗುಣಗಳ ವಾಸನೆಗಳ ಪ್ರಕಾರ ಅವನು ಪುನಃ

ಪುನಃ ಒಳ್ಳೆಯ ಅಥವ ಹೀನವಾದ ಗರ್ಭಗಳಲ್ಲಿ ಹುಟ್ಟುವುದಕ್ಕೆ ಕಾರಣವಾಗುತ್ತದೆ. ಅತಿ ಬಡವನು ತನ್ನ ಜೀವನವನ್ನು ಉಳಿಸಿಕ್ಕೊಳ್ಳುವುದಕ್ಕೆ ಧಾರಕವಸ್ತುಗಳನ್ನು ಪಡೆಯಲು ಸರ್ವಪ್ರಯತ್ನಗಳನ್ನೂ ಮಾಡುವನು. ಧಾರಕವಸ್ತುಗಳನ್ನು ಪಡೆದಿರುವ ಬಹುಮಂದಿ ಆ ಸುಖಗಳಲ್ಲಿ ತೃಪ್ತರಾಗದೆ ಪೋಷಕ ವಸ್ತುಗಳು ಬೇಕೆಂದೂ ಆಶೆಪಡುವರು. ಅವರಲ್ಲಿ ಕೆಲವರಿಗೆ ಹೆಚ್ಚು ಹಣ ಸಂಪಾದನೆಯಾದರೆ ಅವರುಗಳು ಈ ಸುಖಗಳಲ್ಲಿ ತೃಪ್ತಿಯನ್ನು ಪಡೆಯದೆ ಭೋಗ್ಯವಸ್ತುಗಳನ್ನು ಪಡೆಯಬೇಕೆಂದು ಆಶೆಪಡುವರು ಒಂದು ವೇಳೆ ಅವರಲ್ಲಿ ಕೆಲವರು ಬಹಳ ಐಶ್ವರ್ಯವಂತರಾದರೆ ಅವರಿಗೆ ಸಾಧಾರಣ ಭೋಗಗಳಲ್ಲಿ ತೃಪ್ತಿಯಾಗುವುದಿಲ್ಲ ; ಆಗ ಅವರಿಗೆ ವಿಲಾಸವಸ್ತುಗಳು ಬೇಕೆಂಬ ಆಶೆಯುಂಟಾಗುವುದು. ವಿಲಾಸವಸ್ತುಗಳ ಅನುಭವಕ್ಕೆ ಮಿತಿಯೇ ಇಲ್ಲ; ಕೋಟ್ಯಾಧೀಶ್ವರನಿಗೂ ಮತ್ತು ಮಹಾರಾಜನಿಗೂ ಕೂಡ ವಿಲಾಸವಸ್ತುಗಳ ಮೇಲಿನ ಆಶೆಗಳು ಅಧಿಕವಾಗುತ್ತಲೇ ಇರುವುವು. ಎಲ್ಲಾ ಕಾಲದಲ್ಲಿಯೂ ತಾನು ಪತ್ನಿ, ಪುತ್ರ, ಬಂಧುಗಳು, ಸ್ನೇಹಿತರು ಮತ್ತು ಪುರಜನರು ಇವರೊಡನೆ ಕೂಡಿಯೇ ಇರುತ್ತಾ, ಅವರೊಡನೆ ಇಂದ್ರಿಯಗಳ ಸುಖ, ಸಾಮಾಜಿಕ ಮತ್ತು ಲಲಿತಕಲೆಗಳ ಸುಖಗಳನ್ನು ಪಡೆಯುತ್ತಲೇ ಇರಬೇಕೆಂಬ ತ್ವರೆಯು ಅವನಲ್ಲಿ ಯಾವಾಗಲೂ ಇದ್ದೇ ಇರುತ್ತದೆ. ಆದುದರಿಂದ ಮನುಷ್ಯನು ಈ ಉದ್ದೇಶಗಳನ್ನು ಒಂದಾದಮೇಲೆ ಇನ್ನೊಂದನ್ನು ಸಾಧಿಸುವುದಕ್ಕಾಗಿ ನಾನಾ ಪ್ರಕಾರವಾದ ಧರ್ಮಾಧರ್ಮ ಕರ್ಮಗಳನ್ನು ಮಾಡುತ್ತಲೇ ಇರುವನು. ಈ ಆಸೆಗಳು ಮತ್ತು ಧರ್ಮಾಧರ್ಮ ಕರ್ಮಗಳ ಫಲವಾಗಿ ಉತ್ತಮ ಜನ್ಮಗಳು ಅಥವ ಹೀನಜನ್ಮಗಳು ಒಂದಾದ ಮೇಲೆ ಇನ್ನೊಂದು ಪರಂಪರೆಯಾಗಿ ಉಂಟಾಗುತ್ತಲೇ ಇರುವುದು.

# ಭಗವದ್ಗೀತಾ ಅಧ್ಯಾಯ ೧೩ ಪಾಠ ೬

**(ಶ್ಲೋಕಗಳು ೨೨, ೨೩, ೨೪, ೨೫)**

**ಪುರುಷನು ಪ್ರಕೃತಿ ಬಂಧನದಿಂದ ಬಿಡುಗಡೆಯನ್ನು ಹೊಂದಲು ಉಪಾಯ.**

ಉಪದ್ರಷ್ಟಾಽನುಮಂತಾಚ ಭರ್ತಾ ಭೋಕ್ತಾ ಮಹೇಶ್ವರಃ |
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ
|| ೨೨ ||

ಯ ಏವಂ ವೇತ್ತಿ ಪುರುಷಂ ಪ್ರಕೃತಿಂಚ ಗುಣೈಃ ಸ್ಸಹ |
ಸರ್ವಥಾ ವರ್ತಮಾನೋಪಿ ನ ಸ ಭೂಯೋಽಭಿಜಾಯತೇ
|| ೨೩ ||

ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ |
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ
|| ೨೪ ||

ಅನ್ಯೇ ತ್ವೇವಮ ಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ |
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿ ಪರಾಯಣಾಃ
|| ೨೫ ||

**ಈ ಶ್ಲೋಕಗಳಲ್ಲಿರುವ ವಾಕ್ಯಗಳ ಸಾಮಾನ್ಯ ಅರ್ಥ**

1. ಅಸ್ಮಿನ್ ದೇಹೇ ಪರಃ ಪುರುಷಃ ಉಪದ್ರಷ್ಟಾ, ಅನುಮಂತಾ, ಭರ್ತಾ, ಭೋಕ್ತಾ, ಮಹೇಶ್ವರಃ, ಪರಮಾತ್ಮಾ, ಇತಿ ಚ ಉಕ್ತಃ= ಈ ದೇಹದಲ್ಲಿರುವ ಪರನಾದ ಪುರುಷನು ಉಪದ್ರಷ್ಟನು, ಅನುಮಂತನು, ಭರ್ತನು, ಭೋಕ್ತನು, ಮಹೇಶ್ವರನು, ಪರಮಾತ್ಮನು ಎಂದು ಹೇಳಲ್ಪಡುತ್ತಾನೆ.

2. ಯಃ ಏವಂ ಪುರುಷಂ ಚ ಗುಣೈಃ ಸಹ ಪ್ರಕೃತಿಂ ವೇತ್ತಿ = ಯಾವನು ಹೀಗೆ ಪುರುಷನನ್ನೂ, ಗುಣಗಳೊಡನೆ ಕೂಡಿದ ಪ್ರಕೃತಿಯನ್ನೂ ತಿಳಿಯುತ್ತಾನೆಯೋ.

3. ಸಹ ಸರ್ವಥಾ ವರ್ತಮಾನೋಪಿ ಭೂಯಃ ನಾಭಿಜಾಯತೇ= ಅವನು ಯಾವ ಪ್ರಕಾರದಲ್ಲಿ ಜೀವಿಸುತ್ತಿದ್ದರೂ ಇನ್ನು ಮುಂದೆ ಪುನಃ ಹುಟ್ಟುವುದಿಲ್ಲ. ಅಥವ ಜನ್ಮಗಳನ್ನು ಪಡೆಯುವುದಿಲ್ಲ.

4. ಕೇಚಿತ್ ಧ್ಯಾನೇನ ಆತ್ಮನಿ ಆತ್ಮಾನಂ ಆತ್ಮನಾ ಪಶ್ಯಂತಿ = ಕೆಲವರು ಧ್ಯಾನದಿಂದ ಆತ್ಮನಲ್ಲಿ ಆತ್ಮನನ್ನು ಆತ್ಮನಿಂದ ನೋಡುತ್ತಾರೆ.

5. (ಕೇಚಿತ್) ಅನ್ಯೇ ಸಾಂಖ್ಯೇನ ಯೋಗೇನ (ಆತ್ಮನಿ ಆತ್ಮಾನಂ ಆತ್ಮನಾ ಪಶ್ಯಂತಿ)= ಇನ್ನು ಕೆಲವರು ಸಾಂಖ್ಯ ಯೋಗದಿಂದ (ಆತ್ಮನಲ್ಲಿ, ಆತ್ಮನನ್ನು ಆತ್ಮನಿಂದ ನೋಡುತ್ತಾರೆ.)

6. ಚ ಅಪರೇ ಕರ್ಮಯೋಗೇನ (ಆತ್ಮನಿ ಆತ್ಮಾನಂ ಆತ್ಮನಾ ಪಶ್ಯಂತಿ) = ಮತ್ತು ಬೇರೆ ಕೆಲವರು ಕರ್ಮಯೋಗ ದಿಂದ (ಆತ್ಮನಲ್ಲಿ ಆತ್ಮನನ್ನು ಆತ್ಮನಿಂದ ನೋಡುತ್ತಾರೆ.)

7. ತು ಅನ್ಯೇಷು ಏವಂ ಅಜಾನಂತಃ ಅನ್ಯೇಭ್ಯ ಶ್ರುತ್ವಾ ಉಪಾಸತೇ = ಆದರೆ ಬೇರೆ ಕೆಲವರು ಮೇಲೆ ಹೇಳಿದ ರೀತಿ ಗಳಲ್ಲಿ ತಿಳಿದುಕೊಳ್ಳದೆ ಮತ್ತೊಬ್ಬರಿಂದ ಕೇಳಿ ಉಪಾಸನೆ ಮಾಡುತ್ತಾರೆ.

8. ಶ್ರುತಿಪರಾಯಣಃ ತೇಪಿ ಮೃತ್ಯುಂ ತರಂತ್ಯೇವ= ಶ್ರುತಿಪರಾಯಣರಾಗಿದ್ದ ಅವರೂ ಕೂಡ ಮೃತ್ಯುವನ್ನು ಖಂಡಿತ ವಾಗಿ ದಾಟುತ್ತಾರೆ.

ಹಿಂದಿನ ಶ್ಲೋಕಗಳ ತಾತ್ಪರ್ಯಗಳಲ್ಲಿ ಅಭಿಪ್ರಾಯ ಬೇಧ ಗಳಿರುವ ಹಾಗೆ ಈ ಶ್ಲೋಕಗಳ ತಾತ್ಪರ್ಯಗಳಲ್ಲಿಯೂ ಅಭಿ ಪ್ರಾಯ ಬೇಧಗಳಿವೆ. ಆದುದರಿಂದ ಒಂದೊಂದು ಅಭಿ ಪ್ರಾಯಕ್ಕೆ ಅನುಗುಣವಾಗಿ ತಾತ್ಪರ್ಯಗಳನ್ನು ಬೇರೆ ಬೇರೆಯಾಗಿ ವಿವರಿಸುತ್ತೇವೆ.

## ಮೊದಲನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

(ಶ್ಲೋಕ ೨೯) ನಿಜಸ್ವರೂಪದಲ್ಲಿ ಈ ದೇಹದಲ್ಲಿರುವ ಪರ ಪುರುಷನು ಅದ್ವಿತೀಯನಾದ ನಿರ್ಗುಣ ಬ್ರಹ್ಮನು. ಆದರೆ ವ್ಯಾವಹಾರಿಕ ದೆಶೆಯಲ್ಲಿ ಅವನು ಅವಿದ್ಯಾ ಕಲ್ಪಿತವಾದ ಅನೇಕ ದೇಹಗಳಲ್ಲಿ ಪ್ರತಿಯೊಂದು ದೇಹದಲ್ಲಿಯೂ ಪ್ರತ್ಯೇಕ ವಾಗಿ ಇರುವ ಅನೇಕ ಕ್ಷೇತ್ರಜ್ಞರ ಹಾಗೆ ತೋರುವನು ನಿಜ ವಾಗಿ ಒಬ್ಬನೇ ಕ್ಷೇತ್ರಜ್ಞನಿರುವನು; ಅನೇಕ ಕ್ಷೇತ್ರಜ್ಞರು ಇಲ್ಲ. ಉದಾಹರಣೆಗಾಗಿ, ಸೂರ್ಯನು ಒಬ್ಬನೇ ಆಗಿದ್ದಾಗ್ಯೂ ಕೆರೆಯ ಬೇರೆ ಬೇರೆ ಭಾಗಗಳಲ್ಲಿ ಅನೇಕ ಪ್ರತಿಬಿಂಬರೂಪವಾದ ಸೂರ್ಯರು ತೋರುವರು. ಹಾಗೆಯೇ ಅದ್ವಿತೀಯನಾದ ನಿರ್ಗುಣ ಬ್ರಹ್ಮನು ಬೇರೆ ಬೇರೆ ಅಂತಃಕರಣಗಳಲ್ಲಿ ಪ್ರತಿಬಿಂಬ ರೂಪದಲ್ಲಿ ಬೇರೆ ಬೇರೆ ಕ್ಷೇತ್ರಜ್ಞರಾಗಿ ತೋರುವನು. ಪ್ರತಿ ಯೊಂದು ದೇಹದಲ್ಲಿಯೂ ತೋರುವ ಇಂಥಾ ಕ್ಷೇತ್ರಜ್ಞನು ಅಥವ ಪುರುಷನು " ಉಪದ್ರಷ್ಟನು, ಅನುಮಂತನು, ಭರ್ತನು, ಭೋಕ್ತನು, ಮಹೇಶ್ವರನು ಮತಿತ್ತು ಪರಮಾತ್ಮನು " ಎಂದು ಈ ಶ್ಲೋಕದಲ್ಲಿ ಹೇಳಿದೆ. ಇದು ಹೇಗೆ ಎಂಬುದನ್ನು ತಿಳಿ ಯೋಣ. 1. ಯಾವನು ಕೆಲಸವನ್ನು ಮಾಡದೆ ಬೇರೆ ಕಾರಣ ಗಳಿಂದ ತನ್ನ ಹತ್ತಿರದಲ್ಲಿ ನಡೆಯುತ್ತಿರುವ ಕೆಲಸಗಳನ್ನು ನೋಡುತ್ತಿರುವನೋ ಅವನೇ ಉಪದ್ರಷ್ಟನು. ಉದಾಹರಣೆ ಗಾಗಿ ಒಬ್ಬ ವೈದ್ಯನು ಶಸ್ತ್ರ ಚಿಕಿತ್ಸೆ ಮಾಡುತ್ತಿರುವಾಗ ಹತ್ತಿರ ದಲ್ಲಿರುವ ಇನ್ನೊಬ್ಬ ವೈದ್ಯನು ತಾನು ಆ ಶಸ್ತ್ರ ಚಿಕಿತ್ಸೆಯಲ್ಲಿ ಭಾಗವಹಿಸದೆ ಆ ಕಾರ್ಯಗಳನ್ನು ನೋಡುತ್ತಿದ್ದರೆ ಎರಡನೆಯ ವೈದ್ಯನು ಉಪದ್ರಷ್ಟನು. ಹಾಗೇಯೇ ಒಂದು ದೇಹದಲ್ಲಿ ಇರುವ ಹಾಗೆ ತೋರುವ ಪರಪುರುಷನು ಅಥವ ಕ್ಷೇತ್ರಜ್ಞನು ಶರೀರ ಇಂದ್ರಿಯಗಳು ಮನಸ್ಸು ಬುದ್ಧಿ ಇವುಗಳಿಗಿಂತ ಬೇರೆ ಯಾದ ಸ್ವಭಾವವನ್ನು ಪಡೆದು ತಾನು ಯಾವ ಕೆಲಸವನ್ನೂ ಮಾಡದೆ ತನ್ನ ಹತ್ತಿರ ಇರುವ ಅಂತಃಕರಣದಲ್ಲಿ ಮತ್ತು ದೇಹ ದಲ್ಲಿ ಉಂಟಾಗುತ್ತಿರುವ ವ್ಯಾಪಾರಗಳನ್ನೂ ಮತ್ತು ಅವುಗಳ ಗುಣ ದೋಷಗಳನ್ನೂ ಸಾಕ್ಷಿಯಾಗಿ ನೋಡುತ್ತಿರುವನು. ಆದ್ದರಿಂದ ಪುರುಷನು ಉಪದ್ರಷ್ಟನು. (2) ತಾನು ಯಾವ ಕೆಲಸವನ್ನೂ ಮಾಡದೆ ಒಬ್ಬನು ತನ್ನ ಹತ್ತಿರ ಇರುವ ಇನ್ನೊ ಬ್ಬನು ಮಾಡುವ ಕೆಲಸವನ್ನು ಒಪ್ಪಿ ಅದರಲ್ಲಿ ತೃಪ್ತಿಯನ್ನು ಹೊಂದಿದರೆ ಮೊದಲನೆಯವನು ಅನುಮಂತನು. ಉದಾಹರಣೆ ಗಾಗಿ, ಮೇಲೆ ಸೂಚಿಸಿದ ಉಪದ್ರಷ್ಟನಾದ ವೈದ್ಯನು ಇನ್ನೊಬ್ಬ ವೈದ್ಯನು ಮಾಡಿದ ಚಿಕಿತ್ಸೆಯಲ್ಲಿ ತೃಪ್ತಿಯನ್ನು ಹೊಂದಿದರೆ ಅವನು ಅನುಮಂತನಾಗುತ್ತಾನೆ.

ಹಾಗೆಯೇ ಪುರುಷನು ಅಥವ ಕ್ಷೇತ್ರಜ್ಞನು ತಾನು ಯಾವ ಕೆಲಸವನ್ನೂ ಮಾಡದಿದ್ದಾಗ್ಯೂ ಅಂತಃಕರಣದಲ್ಲಿ ಮತ್ತು ದೇಹ ದಲ್ಲಿ ನಡೆಯುವ ವ್ಯಾಪಾರಗಳನ್ನು ಒಪ್ಪಿ ಅವುಗಳಿಗೆ ಅನುಕೂಲ ನಾಗಿ ಇರುವ ಹಾಗೆ ತೋರುವುದರಿಂದ ಅವನು ಈ ಕಾರ್ಯಗಳು ವಿಚಾರದಲ್ಲಿ ಅನುಮಂತನು. (3) ಒಂದು ಪದಾರ್ಥವನ್ನು ತನ್ನ ಸ್ವರೂಪವನ್ನು ಪಡೆದಿರುವುದಕ್ಕೆ ಇನ್ನೊಂದು ಪದಾರ್ಥದ ಇರುವಿಕೆಯು ಅವಶ್ಯಕವಾದರೆ ಎರಡನೆಯ ಪದಾರ್ಥವು ಮೊದ ಲನೆಯ ಪದಾರ್ಥಕ್ಕೆ ' ಭರ್ತ ' ಎನ್ನಿಸಿಕೊಳ್ಳುತ್ತದೆ ಉದಾ ಹರಣೆಗಾಗಿ, ಸೂರ್ಯನ ಕಿರಣಗಳು ಸೂರ್ಯನನ್ನು ಆಧಾರವಾಗಿ ಪಡೆದಿವೆ, ಮತ್ತು ಭ್ರಮೆಯಿಂದ ತೋರುವ ಸರ್ಪಕ್ಕೆ ಹಗ್ಗವು ಆಧಾರವಾಗಿದೆ. ಈ ಶರೀರವೂ, ಅಂತಃಕರಣವು ಮತ್ತು ಇವುಗಳ ಸೇರುವಿಕೆಯಿಂದ ಉಂಟಾಗುವ ಚೈತನ್ಯವು ಇವೆಲ್ಲವೂ ಆತ್ಮಜ್ಞಾನದ ಆಭಾಸವೇ ಆಗಿರುವುದರಿಂದ ಇವುಗಳಿಗೆ ಆತ್ಮಜ್ಞಾನವು ಆಧಾರವು. ಆದುದರಿಂದ ಪುರುಷನು ಭರ್ತನು. (4) ಒಂದು ಜೀವಿಯು ಒಂದು ವಸ್ತುವಿನ ಮೂಲಕ ಸುಖದುಃಖಗಳನ್ನು ಅನುಭವಿಸುತ್ತಿದ್ದರೆ ಆ ಜೀವಿಯು ಆ ವಸ್ತುವಿನ ವಿಷಯದಲ್ಲಿ ಭೋಕ್ತನು. ಪುರುಷನು ಅಥವ ಕ್ಷೇತ್ರಜ್ಞನು ನಿಜವಾಗಿ ಸುಖದುಃಖಗಳನ್ನು ಅನುಭವಿಸದ ಸಚ್ಚಿದಾನಂದ ಸ್ವರೂಪನಾದಾಗ್ಯೂ ವ್ಯಾವಹಾರಿಕ ದೆಸೆಯಲ್ಲಿ ಶರೀರ ಮತ್ತು ಅಂತಃಕರಣದೊಳಗೆ ಇರುವ ಹಾಗೆ ತೋರುತ್ತಾ

Re-printed from Mysore Vysya Patrika
December 1959)

# ಭಗವದ್ಗೀತಾ ಅಧ್ಯಾಯ ೧೩. ಪಾಠ ೬

ದೇಹವನ್ನೂ, ಅಂತಃಕರಣವನ್ನೂ, ಅವುಗಳ ವ್ಯಾಪಾರಗಳನ್ನೂ, ಅವುಗಳಲ್ಲಿ ಉಂಟಾಗುವ ಸುಖ ದುಃಖಗಳನ್ನೂ ತಿಳಿದು ಅನುಭವಿಸುವ ಹಾಗೆ ತೋರುವನು. ಆದುದರಿಂದ ಅವನು ಭೋಕ್ತನು. (5) ಪುರುಷನು ನಿಜಸ್ವರೂಪದಲ್ಲಿ ಸರ್ವಾತ್ಮನೂ ಆಗಿರುವನು. ವ್ಯಾವಹಾರಿಕ ದೆಸೆಯಲ್ಲಿಯೂ ಕೂಡ ಅವನು ಅವಿದ್ಯಾ ಕಲ್ಪಿತಗಳಾದ ಸಜೀವ ನಿರ್ಜೀವ ಅಥವ ಚೇತನಾಚೇತನ ವಸ್ತುಗಳಿಗಿಂತ ಮೇಲಾಗಿರುವನು. ಆದುದರಿಂದ ಕ್ಷೇತ್ರಜ್ಞನು ಮಹೇಶ್ವರನು.

(6) ಇವನನ್ನು ಪರಮಾತ್ಮನೆಂದೂ ಕರೆದಿದೆ; ಏಕೆಂದರೆ, ಇವನು ಬೇರೆ ಬೇರೆಯಾಗಿ ತೋರುವ ಜೀವಾತ್ಮರಿಗೆಲ್ಲಾ ಶ್ರೇಷ್ಠನಾಗಿರುವುದರಿಂದ ಇವನು ಪರಮಾತ್ಮನು. ಅಥವ, ಅವಿದ್ಯಾ ಕಲ್ಪಿತಗಳಾದ ದೇಹ, ಇಂದ್ರಿಯಗಳು ; ಮನಸ್ಸು ಬುದ್ಧಿ ಇವುಗಳ ಒಳಗೆ ಇವನು ಆತ್ಮನಾಗಿ ಇರುವ ಹಾಗೆ ತೋರುತ್ತಿರುವುದರಿಂದ ಪುರುಷನು ದೇಹದಲ್ಲಿರುವ ಪರಮಾತ್ಮನು ; ಅಂದರೆ ಇವುಗಳೆಲ್ಲಕ್ಕಿಂತಲೂ ಹೆಚ್ಚಿನವನ ಹಾಗೆ ತೋರುತ್ತಾನೆ.

(ಶ್ಲೋಕ–೨೩) ಜ್ಞಾನಿಯು ಅವನ ಶರೀರವು ವಿಯೋಗವಾದಾಗ (ಅಂದರೆ ಅವನು ಕಾಲವಾದಾಗ) ಪುನಃ ಜನ್ಮವನ್ನು ಪಡೆಯುವುದಿಲ್ಲ, ಅಂದರೆ ಮತ್ತೊಂದು ದೇಹವನ್ನು ತೆಗೆದುಕೊಂಡು ಹುಟ್ಟುವುದಿಲ್ಲ. ಅಂಥ ಜ್ಞಾನಿಯು ಯಾರು? ಅವನು ಹದಿಮೂರನೆಯ ಅಧ್ಯಾಯದಲ್ಲಿ ಇಲ್ಲಿಯವರೆಗೆ ತಿಳಿಸಿರುವ ಪುರುಷನ ಸ್ವರೂಪವನ್ನೂ, ವಿಕಾರದೊಡನೆ ಕೂಡಿರುವ ಪ್ರಕೃತಿಯ ಸ್ವರೂಪವನ್ನು ಮತ್ತು ಹದಿನಾಲ್ಕನೆಯ ಅಧ್ಯಾಯದಲ್ಲಿ ವಿವರಿಸಿರುವ ಸತ್ವ, ರಜಸ್ಸು ತಮೋಗುಣಗಳ ಸ್ವರೂಪವನ್ನೂ ಚೆನ್ನಾಗಿ ತಿಳಿದಿರುವನು. ಅವನು ಕಾರ್ಯಗಳನ್ನು ಯಾವುವನ್ನಾದರೂ ಮಾಡುತ್ತಿರುವ ಕಾಲದಲ್ಲಿ ಹೀಗೆ ಮನನ ಮಾಡುತ್ತಿರುವನು. " ಉಪದ್ರಷ್ಟನೂ, ಅನುಮಂತನೂ, ಭರ್ತನೂ, ಭೋಕ್ತನೂ, ಮಹೇಶ್ವರನೂ, ಪರಮಾತ್ಮನೂ ಆದ ಆ ಪರ ಪುರುಷನೇ ನಿಜವಾಗಿ ' ನಾನು ' ನನ್ನ ಶರೀರವಾದ ಮತ್ತು ಅಂತಃಕರಣವಾದ ಈ ಪ್ರಕೃತಿಯೂ, ಅದರ ವಿಕಾರಗಳೂ ಮತ್ತು ಅದರ ಗುಣಗಳೂ ಅವಿದ್ಯಾ ಕಲ್ಪಿತಗಳು ; ಅವುಗಳಲ್ಲಿ ನನಗೆ ನಿಜವಾದ ಸಂಬಂಧವಿಲ್ಲ. ಇಷ್ಟೇ ಅಲ್ಲ ; ನಾನು ವಿದ್ಯೆಯಿಂದ ಅಥವ ಜ್ಞಾನದಿಂದ ಇವುಗಳನ್ನೂ ಮತ್ತು ಇವುಗಳ ಸಂಬಂಧವನ್ನೂ ನಾಶಮಾಡಬಲ್ಲೆನು. " ಇಂಥಾ ಜ್ಞಾನಿಯು ಅಥವ ಮಹಾತ್ಮನು ಕಾಲವಾದ ಮೇಲೆ ತನ್ನ ನಿಜಸ್ವರೂಪವಾದ, ಶಾಶ್ವತವಾದ ಆತ್ಮಜ್ಞಾನದಲ್ಲಿಯೇ ಇರುತ್ತಾನೆ ; ಪುನರ್ಜನ್ಮವನ್ನು ಪಡೆಯುವುದಿಲ್ಲ". ಹಾಗಾದರೆ. ಈ ಜ್ಞಾನವು ಉಂಟಾದ ಮೇಲೆ ಆ ಮಹಾತ್ಮನ ನಡತೆಯು ಹೇಗಿರಬೇಕು ? " ಸರ್ವಥಾವರ್ತಮಾನೋಽಪಿ " ಎಂದು ಹೇಳಿದೆ. ಇದರ ಅರ್ಥವೇನು ? ಅವನು ಯಾವ ಆಶ್ರಮದಲ್ಲಿಯಾದರೂ ಇರಬಹುದು, ಯಾವ ವೃತ್ತಿಯಲ್ಲಾದರೂ ಜೀವನವನ್ನು ನಡೆಸಬಹುದು. ಮತ್ತು ಯಾವ ಪ್ರಕಾರದಲ್ಲಿಯಾದರೂ ಕಾಲವನ್ನು ಕಳೆಯಬಹುದು. ಗುಣಗಳಿಂದ ಕೂಡಿದ ಪ್ರಕೃತಿ ಮತ್ತು ಪುರುಷನ ನಿಜಸ್ವರೂಪದಲ್ಲಿ ಜ್ಞಾನವಿದ್ದು " ಅಂಥಾ ಪುರುಷನು ನಾನೇ " ಎಂಬ ದೃಢವಾದ ಅಧ್ಯವಸಾಯವಿದ್ದರೆ ಸಾಕು ; ಅವನ ನಡತೆಯು ಹೇಗಿದ್ದರೂ ಅವನು ಕಾಲವಾದ ಮೇಲೆ ಮುಂದಿನ ಜನ್ಮಗಳಿಂದ ಮುಕ್ತಿಯನ್ನು ಪಡೆಯುವದರಲ್ಲಿ ಯಾವ ಸಂದೇಹವೂ ಇಲ್ಲ : ಹಾಗಾದರೆ ಇಂಥಾ ಜ್ಞಾನಿಯು ಸ್ವಾರ್ಥ ಭಾವನೆಗಳಿಂದ ಕೂಡಿದ ಪಾಪಕಾರ್ಯಗಳನ್ನು ಮಾಡುತ್ತಿದ್ದರೆ ಈ ಉತ್ತಮ ಫಲವು ದೊರೆಯುತ್ತದೆಯೆ ? ಈ ಪ್ರಶ್ನೆಗೆ ಅವಕಾಶವೇ ಇರುವುದಿಲ್ಲ ; ಏಕೆಂದರೆ ಜ್ಞಾನಿಯು ಅಹಂಕಾರ ಮಮಕಾರ ಭಾವಗಳನ್ನು ಸಂಪೂರ್ಣವಾಗಿ ತ್ಯಜಿಸಿ, ಯಾವಾಗಲೂ ಆತ್ಮಜಾನದಲ್ಲಿ ಮನಸ್ಸನ್ನು ಇಟ್ಟಿರುವುದರಿಂದ ಅವನು ಎಂದಿಗೂ ಕೆಟ್ಟ ಕೆಲಸವನ್ನು ಮಾಡುವುದಿಲ್ಲ. ಅಹಂಕಾರ ಮಮಕಾರಗಳ ಭಾವನೆಗಳೇ ಪಾಪದ ಮೂಲ ; " ನಾನು " ಎಂಬ ಭಾವನೆ ಇಲ್ಲದಿದ್ದಲ್ಲಿ ಪಾಪಕಾರ್ಯಗಳು ಇರುವುದಿಲ್ಲ. ಎಲ್ಲಾ ಕರ್ಮಗಳನ್ನು ಭಗವಂತನಿಗೆ ಅರ್ಪಿಸುವವನು ಧರ್ಮವಾದ ಕೆಲಸಗಳನ್ನು ಮಾಡುತ್ತಾನೆಯೇ ಹೊರತು ತಾನು ಜೀವಿಸಿರುವವರೆಗೂ ಪಾಪಕಾರ್ಯಗಳನ್ನು ಮಾಡುವುದಿಲ್ಲ.

(ಶ್ಲೋಕಗಳು ೨೪–೨೫) ಗುಣಗಳಿಂದ ಕೂಡಿದ ಪ್ರಕೃತಿ ಮತ್ತು ಪುರುಷ ಇವಳುಗಳ ನಿಜಸ್ವರೂಪವನ್ನು ತಿಳಿದು, ಅವುಗಳಲ್ಲಿ ಪುರುಷನು ತಾನೇ ಎಂದೂ ಮತ್ತು ಪ್ರಕೃತಿಯೂ ಅದರ ಗುಣಗಳೂ ತಾನಲ್ಲವೆಂದು ತಿಳಿದರೆ ಮನುಷ್ಯನು ಪುನರ್ಜನ್ಮವನ್ನು ಪಡೆಯುವದಿಲ್ಲವೆಂದು ಇಪ್ಪತ್ತು ಮೂರನೆಯ ಶ್ಲೋಕದಲ್ಲಿ ತಿಳಿಸಿದೆ. ಹಾಗಾದರೆ ಈ ವಿಚಾರಗಳನ್ನು ಕೇವಲ ತರ್ಕದಿಂದ ಊಹಿಸಿ ಬುದ್ಧಿಯಲ್ಲಿ ತಿಳಿದರೆ ಈ ಉತ್ತಮ ಫಲವು ದೊರಕುತ್ತದೆಯೆ ? ಇಲ್ಲ ; ಈ ವಿಚಾರಗಳನ್ನು ಕೇವಲ ಬುದ್ಧಿಯಿಂದ ತಿಳಿದರೆ ಸಾಲದು. ಜಗತ್ತಿನಲ್ಲಿರುವ ಪದಾರ್ಥಗಳನ್ನು ನಾವು ಹೇಗೆ ಸಂದೇಹರಹಿತವಾಗಿ ಸಾಕ್ಷಾತ್ಕರಿಸುತ್ತೇವೆಯೋ ಹಾಗೆಯೇ ಪುರುಷನ ನಿಜಸ್ವರೂಪವನ್ನೂ, ಆ ಪುರುಷನು ತಾನೇ ಎಂಬುದನ್ನೂ, ಮತ್ತು ಗುಣಗಳಿಂದ ಕೂಡಿದ ಪ್ರಕೃತಿಯು ಮಾಯೆಯು ಅಂದರೆ, ನಿಜವಾಗಿ ಇಲ್ಲ ಎಂಬುದನ್ನು ಸಾಕ್ಷಾತ್ಕರಿಸಬೇಕು ; ಇಲ್ಲದಿದ್ದರೆ. ಮೇಲೆ ಹೇಳಿದ ಉತ್ತಮ ಫಲವು ದೊರೆಯುವುದಿಲ್ಲ. ಆತ್ಮಸಾಕ್ಷಾತ್ಕಾರವಾದ ಕೂಡಲೇ ಪ್ರಕೃತಿಯು ಮಾಯೆಯು ಎಂಬುದು ತಾನಾಗಿಯೇ ಸಾಕ್ಷಾತ್ಕಾರವಾಗುತ್ತದೆ. ಹಾಗಾದರೆ, ಈ ವಿಧವಾದ ಆತ್ಮಸಾಕ್ಷಾತ್ಕಾರವಾಗಲು ಉಪಾಯವೇನು ಅಥವ ಸಾಧನೆಗಳಾವುವು ? ಎಂಬ ವಿಚಾರವನ್ನು ಇಪ್ಪತ್ತುನಾಲ್ಕು ಮತ್ತು ಇಪ್ಪತ್ತೈದನೆಯ ಶ್ಲೋಕಗಳಲ್ಲಿ ಹೀಗೆ ತಿಳಿಸಿದೆ. ಕೆಲವರು ಜ್ಞಾನಯೋಗ ಸಾಧನದಿಂದ ತಮ್ಮಲ್ಲಿ ಆತ್ಮನನ್ನು ಸಾಕ್ಷಾತ್ಕರಿಸ್ಸುತ್ತಾರೆ ; ಇನ್ನು ಕೆಲವರು ಸಾಂಖ್ಯಯೋಗ ಸಾಧನದಿಂದ ತಮ್ಮಲ್ಲಿ ಆತ್ಮನನ್ನು ಸಾಕ್ಷಾತ್ಕಾರ ಮಾಡುತ್ತಾರೆ ; ಮತ್ತೆ ಕೆಲವರು ಕರ್ಮಯೋಗ ಸಾಧನದಿಂದ ತಮ್ಮಲ್ಲಿ ಆತ್ಮನನ್ನು ಸಾಕ್ಷಾತ್ಕರಿಸ್ಸುತ್ತಾರೆ. ಅನೇಕರು ಈ ಧ್ಯಾನಯೋಗ, ಸಾಂಖ್ಯಯೋಗ, ಕರ್ಮಯೋಗ ಸಾಧನಗಳನ್ನು ತಾವಾಗಿಯೇ ಅರಿಯಲು ಶಕ್ತರಲ್ಲದುದರಿಂದ ಅವರು ಇತರರಿಂದ ಅಂದರೆ, ಜ್ಞಾನಿಗಳಿಂದ ಅಥವ ಆಚಾರ್ಯರುಗಳಿಂದ, ಗುಣಗಳಿಂದ ಕೂಡಿದ ಪ್ರಕೃತಿಯ ಮತ್ತು ಪುರುಷನ ನಿಜಸ್ವರೂಪವನ್ನು ಕೇಳಿ, ನಂಬಿ ಆಮೇಲೆ ಸತ್ಯಾನ್ವೇಷಣೆಯಲ್ಲಿ ಶ್ರದ್ಧೆಯಿಟ್ಟು, ಉಪದೇಶವನ್ನು ಪಡೆದು ಆತ್ಮನ ನಿಜಸ್ವರೂಪವನ್ನು ಉಪಾಸನೆ ಮಾಡುತ್ತಾರೆ ಈ ರೀತಿಯಾಗಿ ಆಚಾರ್ಯರುಗಳಿಂದ ಪಡೆದ ಉಪದೇಶಗಳಲ್ಲಿ ನಂಬಿಕೆಯನ್ನು ಇಟ್ಟು ಆತ್ಮೋಪಾಸನೆಯನ್ನು ಮಾಡುವವರೂ ಕೂಡ ಮೃತ್ಯುವಿನಿಂದ ಪಾರಾಗುತ್ತಾರೆ.

ಇಪ್ಪತ್ತುನಾಲ್ಕು ಮತ್ತು ಇಪ್ಪತ್ತೈದನೆಯ ಶ್ಲೋಕಗಳ ಒಟ್ಟು ತಾತ್ಪರ್ಯವು ಹೀಗಿದೆ.

ಪಾತಂಜಲ ಯೋಗಾನುಸಾರವಾಗಿ ಧ್ಯಾನ್ಯ ಮಾಡುವುದು, ಸಾಂಖ್ಯಯೋಗಾನುಸಾರವಾಗಿ ವಿವೇಕ ಜ್ಞಾನ ಉಂಟಾಗಿ ನೈಷ್ಕರ್ಮ್ಯ ಸಿದ್ಧಿಯನ್ನು ಪಡೆಯುವುದು, ಕರ್ಮಯೋಗಾನುಸಾರವಾಗಿ ನಿಷ್ಕಾಮಭಗವದರ್ಪಣ ಬುದ್ಧಿಯಿಂದ ಕರ್ತವ್ಯ ಕರ್ಮಗಳನ್ನು ಮಾಡುವುದು ಮತ್ತು ಆಚಾರ್ಯರ ಅಥವ ಜ್ಞಾನಿಗಳಾದ ಗುರುಗಳ ಉಪದೇಶಗಳಲ್ಲಿ ಶ್ರದ್ಧೆಯನ್ನಿಟ್ಟು ಆತನನ್ನು ಅಥವ ಪರಮೇಶ್ವರನನ್ನು ಉಪಾಸಿಸುವುದು ಅಥವ ಭಜನೆ ಮಾಡುವುದು ಇವುಗಳು ಆತ್ಮನನ್ನು ಸಾಕ್ಷಾತ್ಕರಿಸಲು ಬೇರೆ ಬೇರೆ ಮಾರ್ಗಗಳು. ಇವುಗಳಲ್ಲಿ ಯಾವುದೊಂದು ಮಾರ್ಗವನ್ನು ಅವಲಂಬಿಸಿದರೂ ಕಡೆಗೆ ಆತ್ಮಜ್ಞಾನವಾಗಿ ಮೋಕ್ಷವಾಗುತ್ತದೆ. ಆದರೆ ಲೋಕ ಸಂಗ್ರಹಣಕ್ಕಾಗಿ ದೇಶದ ಜನರೆಲ್ಲರೂ ಕರ್ಮಯೋಗವನ್ನು ಆಚರಿಸುವುದು ಮೇಲು. ಕರ್ಮಯೋಗದ ಆಧಾರದ ಮೇಲೆ ಸಾಂಖ್ಯಯೋಗ್ಯವನ್ನೂ, ಧ್ಯಾನಯೋಗವನ್ನೂ ಆದಷ್ಟುಮಟ್ಟಿಗೆ ಆಚರಿಸಬಹುದು.

## ಎರಡನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

(ಶ್ಲೋಕ ೨೨) ಇಲ್ಲಿ ದೇಹದಲ್ಲಿರುವ " ಪರಪುರುಷನು " ಪರಿಶುದ್ಧನಾದ ಜೀವಾತ್ಮ ಅಥವ ಪ್ರತ್ಯಗಾತ್ಮನೇ ಹೊರತು ನಿರ್ಗುಣ ಬ್ರಹ್ಮನಲ್ಲ ಅಥವ ಸಗುಣ ಬ್ರಹ್ಮನಾದ ಪರಮಾತ್ಮನಲ್ಲ ಎಂಬುದೇ ಎರಡನೆಯ ಅಭಿಪ್ರಾಯ ಆದುದರಿಂದ " ಉಪದ್ರಷ್ಟ, ಅನುಮಂತ, ಭರ್ತ, ಭೋಕ್ತ. ಪರಮೇಶ್ವರ, ಪರಮಾತ್ಮ " ಎಂಬ ಲಕ್ಷಣಗಳು ಹೇಗೆ ಶುದ್ಧ ಪ್ರತ್ಯಗಾತ್ಮನಿಗೆ ಅಥವ ಜೀವಾತ್ಮನಿಗೆ ಅನ್ವಯಸುತ್ತದೆ ಎಂಬುದನ್ನು ಒಂದೊಂದಾಗಿ ತಿಳಿಯೋಣ, ಜೀವಾತ್ಮನು ಅಥವ ವೈಯಕ್ತಿಕ ಪುರುಷನು " ಅನಾದಿ–ಮತ್ಪರಂ–ಬ್ರಹ್ಮ " ಮೊದಲಾದ ಅನೇಕ ಗುಣಗಳನ್ನು ಪಡೆದಿರುವನೆಂದು ಹಿಂದೆ ಹೇಳಿದೆ. ಹೀಗೆ ಅಪರಿಮಿತವಾದ ಜ್ಞಾನ ಶಕ್ತಿಗಳಿಂದ ಕೂಡಿದ ಈ ಶುದ್ಧ ಪ್ರತ್ಯಗಾತ್ಮನು ಈಗ ಪ್ರಕೃತಿ ಸಂಬಂಧದಿಂದ ಉಂಟಾಗುವ ಸತ್ವ, ರಜಸ್ತಮೋಗುಣಗಳಿಂದ ಕೂದಿರುವನು. ಆದುದರಿಂದ ಅವನು ಸಂಸಾರದೆಸೆಯಲ್ಲಿ ತನ್ನ ಒಂದು ದೇಹಕ್ಕೆ ಮಾತ್ರ ವಿಧವಿಧವಾದ ಸಂಬಂಧಗಳನ್ನು ಪಡೆದು ಅದಕ್ಕೆ ಮಾತ್ರ ಮಹೇಶ್ವರನಾಗಿಯೂ ಪರಮಾತ್ಮನಾಗಿಯೂ ಇರುತ್ತಾನೆಂದು ಇಲ್ಲಿ ತಿಳಿಸಿದೆ. ಹಾಗಾದರೆ ಈ ಸಂಬಂಧಗಳಾವುವು ? ಈ ದೇಹದಲ್ಲಿರುವ ಪುರುಷನು ಈ ದೇಹಕ್ಕೆ ಉಪದ್ರಷ್ಟಾವಾಗಿರುವನು ; ಏಕೆಂದರೆ ಅವನು ತನ್ನ ದೇಹದಲ್ಲಿ ಅನೇಕ ಶಾರೀರಿಕ ಮತ್ತು ಮಾನಸಿಕ ಪ್ರವೃತ್ತಿಗಳು ನಡೆಯುತ್ತಿರುವದನ್ನು ಅನುಭವಿಸುವನು ಅಥವ ನೋಡುವನು. ಹಾಗೆಯೇ ಅವನು ತನ್ನ ದೇಹಕ್ಕೆ ಅನುಮಂತನಾಗಿರುವನು ; ಏಕೆಂದರೆ ಆಯಾ ಪ್ರವೃತ್ತಿಗಳಿಗೆ ಅನುಕೂಲವಾಗಿ ದುಃಖಗಳನ್ನು ಕಮ್ಮಿ ಮಾಡುತ್ತಾ, ವಿಧ ವಿಧ

ವಾದ ಸುಖಗಳನ್ನು ಅನುಭವಿಸಲು ಆಸೆಪಡುತ್ತಾನೆ. ಇನ್ನೇನು, ಅವನು ಈ ದೇಹಕ್ಕೆ ಭರ್ತಾವಾಗಿರುವನು ; ಏಕೆಂದರೆ, ಹುಟ್ಟಿದಂದಿನಿಂದ ಸಾಯುವವರೆಗೂ ಈ ದೇಹವನ್ನು ಭರಿಸುತ್ತಾನೆ. ಮತ್ತು ಈ ದೇಹದಲ್ಲಿ ನಡೆಯುತ್ತಿರುವ ಪ್ರವೃತ್ತಿಗಳಿಂದ ಉಂಟಾಗುವ ಸುಖದುಃಖಗಳನ್ನು ಅನುಭವಿಸುತ್ತಾನಾದುದರಿಂದ ಅವನು ಭೋಕ್ತಾವಾಗಿಯೂ ಇರುತ್ತಾನೆ. ಇಷ್ಟೇ ಅಲ್ಲ ; ಹೀಗೆ ದೇಹವನ್ನು ಧರಿಸಿಯೂ, ಆಳಿಯೂ, ಅದಕ್ಕೆ ಸ್ವಾಮಿಯಾಗಿದ್ದು ಅದನ್ನು ನಡೆಸುವುದರಿಂದ ಅವನು ದೇಹ, ಇಂದ್ರಿಯ, ಮನಸ್ಸು, ಬುದ್ಧಿಗಳನ್ನು ಕುರಿತು ಮಹೇಶ್ವರನೆಂದು ಹೇಳಲ್ಪಡುತ್ತಾನೆ. ಮತ್ತು ದೇಹೇಂದ್ರಿಯಾದಿಗಳನ್ನು ಕುರಿತು ಪರಮಾತ್ಮನೆಂದೂ ಹೇಳಲ್ಪಡುತ್ತಾನೆ.

ಶ್ಲೋಕ ೨೩. ನಾವು ಪುರುಷನ ಅಥವ ಕ್ಷೇತ್ರಜ್ಞಾನ ಸ್ವಭಾವವನ್ನೂ ಮತ್ತು ಪ್ರಕೃತಿಯ ಸ್ವಭಾವವನ್ನೂ ತಿಳಿದಿದ್ದೇವೆ ; ಮುಂದೆ ಹದಿನಾಲ್ಕನೆಯ ಅಧ್ಯಾಯದಲ್ಲಿ ಸತ್ವ, ರಜಸ್ಸು, ತಮಸ್ಸು ಎಂಬ ಗುಣಗಳ ಕಾರ್ಯವನ್ನೂ ತಿಳಿಯುತ್ತೇವೆ. ಯಾವನು ಹೀಗೆ ಪ್ರತ್ಯಗಾತ್ಮ ಅಥವ ಪುರುಷನ ಸ್ವಭಾವವನ್ನೂ, ಪ್ರಕೃತಿಯ ಸ್ವಭಾವವನ್ನೂ, ಸತ್ವಾದಿಗುಣಗಳ ಸ್ವಭಾವವನ್ನೂ ವಿಂಗಡಿಸಿ ತಿಳಿಯುತ್ತಾನೆಯೋ ಮತ್ತು ಪರಿಶುದ್ಧನಾದ ಆತ್ಮ ಪ್ರಕೃತಿ ಮತ್ತು ಅದರ ಗುಣಗಳು ಇವುಗಳಿಗಿಂತ ಬೇರೆಯಾದವನು ಎಂದು ಸಂದೇಹರಹಿತವಾಗಿ ತೀರ್ಮಾನಿಸಿ, ಈ ತತ್ವಕ್ಕೆ ಅನುಗುಣವಾಗಿ ಆಚರಿಸುತ್ತಾನೆಯೋ ಆ ವಿವೇಕಿಯು ದೇವ ಮನುಷ್ಯಾದಿ ದೇಹಗಳನ್ನು ಪಡೆದಿದ್ದರೂ, ಆ ದೇಹದ ಮೂಲಕ ಯಾವ ಧರ್ಮಕಾರ್ಯಗಳನ್ನು ಮಾಡುತ್ತಿದ್ದರೂ ಮತ್ತು ತನ್ಮೂಲಕ ವಿಧವಿಧವಾದ ಸುಖಗಳನ್ನು ಅಥವ ಅತ್ಯಂತ ಕಷ್ಟಗಳನ್ನೂ ಅನುಭವಿಸುತ್ತಿದ್ದರೂ ಕೂಡ ಅವನು ಇನ್ನು ಮುಂದೆ ಪ್ರಕೃತಿ ಬಂಧನದಿಂದ ಕಟ್ಟಲ್ಪಡುವುದಿಲ್ಲ ಅಂದರೇನು, ಆ ಮುಮುಕ್ಷುವು ಹಿಂದಿನ ಪಾಪಗಳನ್ನೆಲ್ಲಾ ಕಳೆದು ಕೊಳ್ಳುವನು ಮತ್ತು ಮುಂದೆ ಪಾಪಕಾರ್ಯಗಳನ್ನು ಮಾಡುವುದಿಲ್ಲ. ಹೀಗೆ ಪಾಪಗಳು ನಾಶವಾದ ಹಾಗೆಲ್ಲಾ ಅವನ ಧರ್ಮ ಭೂತ ಜ್ಞಾನವು ಪರಿಶುದ್ಧವಾಗುತ್ತಾ ಕೊನೆಯಲ್ಲಿ ಅಪರಿಮಿತವಾದ ಜ್ಞಾನಾಕಾರವಾಗಿಯೇ ಆಗುತ್ತಾನೆ. ಅಂಥಾ ಮಹಾತ್ಮನು ಈ ಸ್ಥೂಲ ದೇಹವನ್ನು ಬಿಡುವ ಕಾಲದಲ್ಲಿ ಅಂದರೆ ಸಾಯುವ ಕಾಲದಲ್ಲಿ ರೋಗಾದಿಗಳಿಂದ ನೋವುಗಳನ್ನು ಅನುಭವಿಸಿದರೂ ಪುನಃ ಜನ್ಮವನ್ನು ಪಡೆಯುವುದಿಲ್ಲ ; ಅಂದರೆ ಆತ್ಮನನ್ನು ಸಾಕ್ಷಾತ್ಕರಿಸುತ್ತಾನೆ. ಮುಮುಕ್ಷುವು ಗೃಹಸ್ಥನಾಗಿರಬಹುದು, ಸನ್ಯಾಸಿಯಾಗಿರಬಹುದು, ರೈತನಾಗಿರಬಹುದು, ವ್ಯಾಪಾರಿಯಾಗಿರಬಹುದು, ಸರ್ಕಾರದ ನೌಕರನಾಗಿರಬಹುದು, ಯೋಧನಾಗಿರಬಹುದು ; ಯಾವ ಕಾರ್ಯಗಳನ್ನು ಮಾಡುತ್ತಿದ್ದರೂ ಸರಿಯೇ ಅವನು "ಪ್ರಕೃತಿಯೂ ಮತ್ತು ಅದರ ಗುಣಗಳೂ ಅಲ್ಲದ ಆತ್ಮನು ನಾನು" ಎಂದು ತಿಳಿದರೆ ಮತ್ತು ಆ ತಿಳುವಳಿಕೆಗೆ ಅನುಗುಣವಾಗಿ ಫಲಾಪೇಕ್ಷೆರಹಿತವಾದ ಸಾತ್ವಿಕ ಜೀವನವನ್ನು ನಡೆಸಿದರೆ ಮತ್ತು ಇಂದ್ರಿಯಗಳಿಗೆ ಗುಲಾಮನಾಗಿ ಇರುವ ಸ್ವಾರ್ಥತೆಯನ್ನು ಹೊರದೂಡಿದರೆ ಅವನು ಖಂಡಿತವಾದ ಆತ್ಮಸಾಕ್ಷಾತ್ಕಾರವನ್ನು ಪಡೆಯುತ್ತಾನೆ ಮತ್ತು ಇನ್ನೊಂದು ಜನ್ಮವನ್ನು ಪಡೆಯುವುದಿಲ್ಲ.

(ಶ್ಲೋಕಗಳು ೨೪–೨೫) ಧ್ಯಾನಯೋಗ, ಜ್ಞಾನಯೋಗ, ಕರ್ಮಯೋಗ, ಶ್ರುತಿ ಪರಾಯಣರ ಉಪಾಸನಯೋಗ ಎಂಬ ನಾಲ್ಕು ಸಾಧನಗಳಿಂದ ಮುಮುಕ್ಷುಗಳು ತಮ್ಮ ಪರಿಶುದ್ಧ ಮನಸ್ಸಿನಿಂದ ತಮ್ಮಲ್ಲಿಯೇ ಪರಿಶುದ್ಧ ಜೀವಾತ್ಮನನ್ನು ಸಾಕ್ಷಾತ್ಕರಿಸುತ್ತಾರೆ ಎಂಬ ವಿಚಾರವನ್ನು ಈ ಶ್ಲೋಕಗಳಿಂದ ತಿಳಿಯುತ್ತೇವೆ. ಯೋಗಸಿದ್ಧಿಯನ್ನು ಪಡೆದ ಕೆಲವರು ತಮ್ಮ ಮನಸ್ಸನ್ನು ಧ್ಯಾನಯೋಗದಲ್ಲಿ ನಿಲ್ಲಿಸಿ ತಮ್ಮ ಶರೀರದಲ್ಲಿಯೇ ಪ್ರತ್ಯಗಾತ್ಮನನ್ನು ಸಾಕ್ಷಾತ್ಕರಿಸುತ್ತಾರೆ. ಹೀಗೆ ಧ್ಯಾನಯೋಗದಲ್ಲಿ ಮನಸ್ಸನ್ನು ನಿಲ್ಲಿಸಲು ಯೋಗ್ಯತೆಯನ್ನು ಪಡೆಯದಿರುವ ಇನ್ನು ಕೆಲವರು ಸಾಂಖ್ಯಯೋಗ ಅಥವ ಜ್ಞಾನಯೋಗವನ್ನು ಸ್ವೀಕರಿಸಿ, ತನ್ಮೂಲಕ ಧ್ಯಾನಯೋಗ ಮಾಡಲು ಅರ್ಹತೆಯನ್ನು ಪಡೆದು ಅಂದರೆ ತಮ್ಮ ಮನಸ್ಸನ್ನು ಧ್ಯಾನಯೋಗಕ್ಕೆ ಯೋಗ್ಯವಾಗುವ ಹಾಗೆ ಮಾಡಿಕೊಂಡು ತಮ್ಮಲ್ಲಿ ಆತ್ಮನನ್ನು ನೋಡುತ್ತಾರೆ. ಈ ಸಾಂಖ್ಯಯೋಗ ಅಥವ ಜ್ಞಾನಯೋಗವನ್ನೂ ಕೈಗೊಳ್ಳಲು ಯೋಗ್ಯತೆ ಇಲ್ಲದ ಮತ್ತೆ ಕೆಲವರು ಮೊದಲು ಆತ್ಮ ಚಿಂತನೆಯಿಂದ ಕೂಡಿದ ಕರ್ಮಯೋಗ ಅನುಷ್ಠಾನಗಳನ್ನು ಆಚರಿಸುವರು. ತನ್ಮೂಲಕ ಜ್ಞಾನಯೋಗ ಅಭ್ಯಾಸವನ್ನು ಮಾಡುವ ಯೋಗ್ಯತೆಯನ್ನು ಪಡೆದು, ತನ್ಮೂಲಕ ಧ್ಯಾನಯೋಗ ಅಭ್ಯಾಸವನ್ನು ಮಾಡುವ ಅರ್ಹತೆಯನ್ನು ಪಡೆದು ಕೊನೆಯಲ್ಲಿ ಆತ್ಮನನ್ನು ಸಾಕ್ಷಾತ್ಕರಿಸುತ್ತಾರೆ. ಹಾಗಾದರೆ ಈ ಕರ್ಮಯೋಗವನ್ನೂ ಕೂಡ ಅನುಷ್ಠಿಸಲು ಯೋಗ್ಯತೆಯನ್ನು ಪಡೆಯದೆ ಇರುವವರು ಕೂಡ ಆತ್ಮನನ್ನು ಸಾಕ್ಷಾತ್ಕರಿಸುವುದಕ್ಕೆ ಏನು ಮಾಡಬೇಕು ? ಅವರು ಮೊದಲು ಶ್ರುತಿಗಳು ಅಂದರೆ ಶಾಸ್ತ್ರಗಳು ತಿಳಿಸುವ ಕರ್ಮಯೋಗ, ಜ್ಞಾನಯೋಗ ಮತ್ತು ಧ್ಯಾನಯೋಗ ಇವುಗಳಿಗೆ ಸಂಬಂಧಪಟ್ಟ ತತ್ವಗಳನ್ನು ಜ್ಞಾನಿಗಳಿಂದ ತಿಳಿದು ಅವರು ಉಪದೇಶ ಮಾಡುವ ರೀತಿಯಲ್ಲಿ ಈ ಸಾಧನಗಳನ್ನು ಉಪಾಸನೆ ಮಾಡಿದರೆ ಅಥವ ಅನುಷ್ಠಿಸಿದರೆ ಕ್ರಮೇಣ ಅವರೂ ಕೂಡ ಕೊನೆಯಲ್ಲಿ ತಮ್ಮಲ್ಲಿಯೇ ಆತ್ಮನನ್ನು ಸಾಕ್ಷಾತ್ಕರಿಸಿ ಮುಂದೆ ಮರಣ

ವನ್ನೇ ಹೊಂದುವುದಿಲ್ಲ. ಅಂದರೇನು, ಮುಮುಕ್ಷುವು ಮೊದಲು ಶ್ರುತಿ ಪರಾಯಣನಾಗಬೇಕು, ಅಂದರೆ ಆಚಾರ್ಯರುಗಳಿಂದ ಅಥವ ಜ್ಞಾನಿಗಳಾದ ಗುರುಗಳಿಂದ ಉಪದೇಶಗಳನ್ನು ಕೇಳುವುದರಲ್ಲಿ ಶ್ರದ್ಧೆಯುಳ್ಳವನಾಗಬೇಕು; ತನ್ಮೂಲಕ ಅವನು ಕರ್ಮಯೋಗವನ್ನು ಅನುಷ್ಠಿಸುವ ಯೋಗ್ಯತೆಯನ್ನು ಪಡೆಯುತ್ತಾನೆ; ತನ್ಮೂಲಕ ಸಾಂಖ್ಯಯೋಗ ಅಥವ ಜ್ಞಾನಯೋಗವನ್ನು ಅನುಷ್ಠಿಸುವ ಯೋಗ್ಯತೆಯನ್ನು ಪಡೆಯುತ್ತಾನೆ; ತನ್ಮೂಲಕ ಮನಸ್ಸಿನಲ್ಲಿ ಧ್ಯಾನಯೋಗವನ್ನು ಅನುಷ್ಠಿಸುವ ಯೋಗ್ಯತೆಯನ್ನು ಪಡೆಯುತ್ತಾನೆ; ಕೊನೆಯಲ್ಲಿ ತನ್ನಲ್ಲಿಯೇ ಆತ್ಮನನ್ನು ಸಾಕ್ಷಾತ್ಕರಿಸುತ್ತಾನೆ. ಆದರ ಫಲವಾಗಿ ಕೊನೆಯಲ್ಲಿ ಮೃತ್ಯುವನ್ನೆ ದಾಟುತ್ತಾನೆ, ಅಂದರೆ ಮರಣದ ಅನುಭವವನ್ನೇ ಪಡೆಯುವುದಿಲ್ಲ.

### ಮೂರನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ನಾಲ್ಕು ಶ್ಲೋಕಗಳಲ್ಲಿ ಜೀವಾತ್ಮನ ಸಾಕ್ಷಾತ್ಕಾರದ ಅಥವ ನಿರ್ಗುಣ ಬ್ರಹ್ಮದ ಸಾಕ್ಷಾತ್ಕಾರದ ವಿಷಯವನ್ನು ಪ್ರಸ್ತಾಪಿಸಿಲ್ಲ; ಆದರೆ ದೇಹದಲ್ಲಿರುವ ಜೀವಾತ್ಮನಿಗಿಂತ ಬೇರೆಯವನಾದ ಪರಮಾತ್ಮನನ್ನು ಅಥವ ಸಗುಣ ಬ್ರಹ್ಮನನ್ನು ಸಾಕ್ಷಾತ್ಕರಿಸುವ ವಿಚಾರವನ್ನು ಮಾತ್ರ ತಿಳಿಸಿದೆ ಎಂಬುದೇ ಮೂರನೆಯ ಅಭಿಪ್ರಾಯ.

(ಶ್ಲೋಕ ೨೨) ಪ್ರತಿ ದೇಹದಲ್ಲಿಯೂ ಇರುವ ವೈಯಕ್ತಿಕ ಜೀವಾತ್ಮನಲ್ಲದೆ ಪರಮಾತ್ಮನೂ ಈ ದೇಹಕ್ಕೆ ಮುಖ್ಯ ಯಜಮಾನನಾಗಿರುವನು. ಈ ಪರಮಾತ್ಮನು ಉಪದ್ರಷ್ಟನು; ಏಕೆಂದರೆ ಅವನು ಇದೇ ಜೀವನು ದೇಹದ ಮೂಲಕ ಮಾಡುವ ಸರ್ವ ವ್ಯಾಪಾರಗಳನ್ನೂ ನೋಡುವನು. ಪರಮಾತ್ಮನು ಅನುಮಂತನು; ಏಕೆಂದರೆ ಅವನು ಜೀವಾತ್ಮನ **ಎಲ್ಲಾ ಕಾರ್ಯಗಳನ್ನು** ಅನುಮೋದಿಸುವನು. ಪರಮಾತ್ಮನು ಭರ್ತನು; ಏಕೆಂದರೆ ಅವನು ಜಗತ್ತಿನ ಚರಾಚರ, ಚಿದಚಿತ್ತು ವಸ್ತುಗಳನ್ನೂ ಮತ್ತು ಜೀವಾತ್ಮನನ್ನು ಧರಿಸಿ ಪೋಷಿಸುವನು. ಪರಮಾತ್ಮನು ಭೋಕ್ತಾ; ಏಕೆಂದರೆ ಅವನು ಮನುಷ್ಯರು ಮಾಡುವ ಕರ್ಮಗಳ ಫಲಗಳನ್ನು ಕೊಡುವನಾದರೂ ಅವುಗಳ ಸಾರಾಂಶವನ್ನು ಭೋಗಿಸುವನು. ಅಷ್ಟೇ ಅಲ್ಲ ಜೀವಾತ್ಮನ ಭೋಗ ಶಕ್ತಿಯೂ ಕೂಡ ಪರಮಾತ್ಮನ ಭೋಗಶಕ್ತಿಯಿಂದಲೇ ಉಂಟಾಗಿರುವುದು. ಪರಮಾತ್ಮನು ಮಹೇಶ್ವರನು; ಏಕೆಂದರೆ ಅವನಲ್ಲಿ ಸಂಪೂರ್ಣ ಶಕ್ತಿಯು ಇರುವುದು. ಜೀವಾತ್ಮರೆಲ್ಲಾ ಅವನ ಅಧೀನಕ್ಕೆ ಒಳಪಟ್ಟಿರುವುದರಿಂದ ಅವನೇ ನಿಜವಾಗಿ ಮಹಾಸ್ವಾಮಿಯು, ಮಹೇಶ್ವರನು. ಜೀವಾತ್ಮರುಗಳಿಗೆಲ್ಲಾ ಸತ್ತಿಯನ್ನುಂಟುಮಾಡುವ ಆತ್ಮನಾಗಿರುವುದರಿಂದ ಅವನು ಪರಮಾತ್ಮನು. ಇಷ್ಟೇ ಅಲ್ಲ; ಉಪನಿಷತ್ತುಗಳಲ್ಲಿ ಪರಮಾತ್ಮನನ್ನು ಉಪದ್ರಷ್ಟನು, ಅನುಮಂತನು, ಭರ್ತನು, ಭೋಕ್ತನು, ಮಹೇಶ್ವರನು, ಪರಮಾತ್ಮನು ಎಂಬ ವರ್ಣನೆಗಳು ಇವೆಯಲ್ಲವೆ!

(ಶ್ಲೋಕ ೨೩) ಜೀವಾತ್ಮನು ಪ್ರಕೃತಿಗೂ ಆದರ ಗುಣಗಳಿಗೂ ಒಳಪಟ್ಟಿರುವನಾಗಿರುವುದರಿಂದ ಸುಃಖದುಃಖಾದಿಗಳನ್ನು ಅನುಭವಿಸಲೇಬೇಕು. ಆದರೆ ಪರಮಾತ್ಮನಾದರೋ ಜೀವನಿಗಿಂತ ಬೇರೆಯವನಾಗಿದ್ದು ಅನಂತ ಶಕ್ತಿಯನ್ನು ಪಡೆದಿದ್ದಾನೆ. ಅವನಿಗೆ ಶರೀರ ಸಂಬಂಧದಿಂದ ಉಂಟಾಗುವ ದುಃಖವೂ ಇಲ್ಲ, ಸುಖವೂ ಅಲ್ಲ ಮತ್ತು ಅವನು ಶರೀರದ ಸರ್ವ ವ್ಯಾಪಾರಗಳಿಗೂ ಕಾರಣನಾಗಿ ಅವುಗಳನ್ನು ನಿಯಮಿಸುವನು. ಜೀವಾತ್ಮನೂ ಕೂಡ ಪ್ರಕೃತಿಯ ಬಂಧನಕ್ಕೆ ಒಳಪಟ್ಟಿದ್ದಾಗ್ಯೂ ತನ್ನ ನಿಜಸ್ವರೂಪದಲ್ಲಿ ಅದಕ್ಕಿಂತ ಬೇರೆಯಾಗಿಯೇ ಇರುವನು. ಪ್ರಕೃತಿಯು ಜ್ಞಾನರಹಿತವಾಗಿದ್ದು ಈಶ್ವರನ ಸಂಕಲ್ಪದಿಂದ ವಿಧವಿಧಗಳಾದ ಪರಿಣಾಮಗಳನ್ನು ಹೊಂದುತ್ತಲೇ ಇರುವುದು. ಈ ವಿಧವಾಗಿ ಯಾವನೊಬ್ಬನು ಪರಮಾತ್ಮ, ಜೀವಾತ್ಮರುಗಳು, ಪ್ರಕೃತಿ ಈ ತತ್ವಗಳ ವ್ಯತ್ಯಾಸಗಳನ್ನೂ ಮತ್ತು ಇವು ಒಂದಕ್ಕೊಂದು ಬೇರೆಯಾಗಿವೆ ಎಂಬುದನ್ನೂ ತಿಳಿಯುತ್ತಾನೆಯೋ ಅವನಿಗೆ ಕ್ರಮೇಣ ಪರಮಾತ್ಮನ ಸಾಕ್ಷಾತ್ಕಾರವಾಗುವುದು. ಅಂಥಾ ವಿವೇಕಿಯು ಕೆಟ್ಟಕಾರ್ಯಗಳನ್ನು ಮಾಡುತ್ತಿದ್ದರೂ (ಸರ್ವಥಾವರ್ತಮಾನೋಽಪಿ) ಅವನು ಪರಮಾತ್ಮನ ಜ್ಞಾನವನ್ನು ಪಡೆಯುತ್ತಾನೆಯೇ? ಹೌದು; ಅವನು ಕ್ರಮೇಣ ಮುಕ್ತಿಯನ್ನು ಪಡೆಯುತ್ತಾನೆ; ಏಕೆಂದರೆ, ಅವನು ಮೊದಲು ಅಧರ್ಮ ಕಾರ್ಯಗಳಲ್ಲಿ ನಿರತನಾಗಿದ್ದರೂ ಈ ಪ್ರಕೃತಿ, ಪುರುಷರು, ಈಶ್ವರ ಎಂಬ ಬೇರೆ ಬೇರೆ ತತ್ವಗಳ ವಿವೇಕ ಜ್ಞಾನವನ್ನು ಪಡೆದರೆ ಕ್ರಮೇಣ ಪರಮಾತ್ಮನನ್ನು ಸಾಕ್ಷಾತ್ಕರಿಸಲು ಸಹಾಯಮಾಡುವ ಯೋಗಾಭ್ಯಾಸಗಳನ್ನು ಆಸಂಭಿಸುತ್ತಾ ಕೆಟ್ಟಕಾರ್ಯಗಳನ್ನೆಲ್ಲಾ ಅವುಗಳ ವಾಸನೆಯೊಂದಿಗೆ ತ್ಯಜಿಸುತ್ತಾನೆ.

(ಶ್ಲೋಕಗಳು ೨೪–೨೫) ಹಾಗಾದರೆ ಪರಮಾತ್ಮನನ್ನು ಸಾಕ್ಷಾತ್ಕರಿಸಲು ಸಾಧನಗಳಾದ ಯೋಗಾಭ್ಯಾಸಗಳಾವುವು? ಕೆಲವರು ಪರಮಾತ್ಮನ ಸ್ವರೂಪ, ರೂಪ, ಗುಣ, ವಿಭವಗಳನ್ನು ಶ್ರವಣದಿಂದ ತಿಳಿದು, ಅವುಗಳನ್ನು ಮನನ ಮಾಡುತ್ತಾ ದೃಢವಾಗಿ ನಂಬಿ, ಪರಮಾತ್ಮನನ್ನು ಸರ್ವಪ್ರಕಾರಗಳಲ್ಲಿಯೂ ಧ್ಯಾನ ಮಾಡುವರು. ಆದರ ಫಲವೇನು? (ಮುಂದುವರಿಯುವುದು)

Re-printed from Mysore Vysya Patrika
January 1960)

# ಭಗವದ್ಗೀತಾ ಅಧ್ಯಾಯ ೧೩ ಪಾಠಗಳು ೬ ಮತ್ತು ೭

ಅವರು ತಮ್ಮ ಮನಸ್ಸಿನಲ್ಲಿ ದೇಹದಲ್ಲಿಯೇ ಇರುವ ಪರಮಾತ್ಮನನ್ನು ಸಾಕ್ಷಾತ್ಕರಿಸುತ್ತಾರೆ ಮನನ ಧ್ಯಾನಗಳನ್ನು ಮಾಡಲು ಯೋಗ್ಯತೆ ಇಲ್ಲದ ಇನ್ನು ಕೆಲವರು ಶಾಸ್ತ್ರಗಳನ್ನು ಶ್ರವಣ ಮಾಡಿ ಪರಮಾತ್ಮನ ಸ್ವರೂಪ, ರೂಪ, ಗುಣ, ವಿಭೂತಿಗಳನ್ನು ಮನನ ಮಾಡುವರು, ಹೀಗೆ ಮನನ ರೂಪವಾದ ಸಾಂಖ್ಯಯೋಗ ಅಥವ ಜ್ಞಾನ ಯೋಗವನ್ನು ಆಚರಿಸಿ, ಧ್ಯಾನ ಯೋಗದ ಯೋಗ್ಯತೆಯನ್ನು ಪಡೆದು ಕೊನೆಯಲ್ಲಿ ಪರಮಾತ್ಮ ಸಾಕ್ಷಾತ್ಕಾರವನ್ನು ಪಡೆಯುವರು ಶ್ರವಣ, ಮನನ, ಧ್ಯಾನಗಳನ್ನು ಮಾಡುವ ಯೋಗ್ಯತೆಯನ್ನು ಪಡೆಯದ ಮತ್ತೆ ಕೆಲವರು ತಾವು ಮಾಡಬೇಕಾದ ಉತ್ತಮ ಕರ್ಮಗಳೆಲ್ಲವನ್ನು ಭಗವಂತನಿಗೆ ಅರ್ಪಿಸಿ ಕರ್ಮಯೋಗವನ್ನು ಅನುಷ್ಠಿಸುವರು. ಕರ್ಮಯೋಗವು ಇವರ ಮನಸ್ಸನ್ನು ರಜಸ್ಸು, ತಮಸ್ಸು ಎಂಬ ಕೊಳೆಗಳಿಂದ ಶುದ್ಧಿಪಡಿಸಿ, ಸತ್ವಗುಣವನ್ನು ವೃದ್ಧಿಪಡಿಸುವುದು, ತನ್ಮೂಲಕ ಮನಸ್ಸು ನಿರ್ಮಲವಾಗಿ ಶ್ರವಣವನ್ನು ಮಾಡುವ ಸಾಮರ್ಥ್ಯವನ್ನು ಅವರು ಪಡೆಯುವರು ತರುವಾಯ ಅವರಿಗೆ ಕ್ರಮೇಣ ಮನನ ಧ್ಯಾನ ಮಾಡುವ ಯೋಗ್ಯತೆಯುಂಟಾಗುವುದು, ತನ್ಮೂಲಕ ಕೊನೆಯಲ್ಲಿ ಅವರು ಪರಮಾತ್ಮನನ್ನು ನೋಡುತ್ತಾರೆ. ಹಾಗಾದರೆ ಕರ್ಮಯೋಗವನ್ನೂ ಅನುಷ್ಠಿಸಲು ಯೋಗ್ಯತೆ ಇಲ್ಲದಿರುವವರ ಗತಿಯೇನು? ಅಂಥಾವರೂ ಕೂಡ ಜ್ಞಾನಿಗಳಾದ ಗುರುಗಳನ್ನು ಆಶ್ರಯಿಸಬೇಕು. ಆಗ ಅವರೂ ಕೂಡ ಶ್ರುತಿ ಪರಾಯಣರಾಗಿ ಅಂದರೆ ಶ್ರವಣದಲ್ಲಿ ಆಸಕ್ತರಾಗಿ ಬಿಡದೆ ಅಡಿಗಡಿಗೆ ಗುರುಗಳ ಉಪದೇಶವನ್ನು ಶ್ರವಣ ಮಾಡುತ್ತಾ, ಕರ್ಮಯೋಗಿಗಳಾಗಿ ಕರ್ತವ್ಯ ಕರ್ಮಗಳನ್ನು ನಡೆಸುತ್ತಾ, ಶಾಸ್ತ್ರಾರ್ಥಗಳನ್ನು ಮನನ ಮಾಡಿ, ತೀರ್ಮಾನಿಸಿ, ಪರಮಾತ್ಮನ ಸ್ವರೂಪ ರೂಪಗುಣ ವಿಭೂತಿಗಳನ್ನು ಧ್ಯಾನ ಮಾಡಿ ಕೊನೆಯಲ್ಲಿ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ, ಆಮೇಲೆ ಮೃತ್ಯುವನ್ನು ಅಂದರೆ ಸಂಸಾರವನ್ನು ದಾಟುತ್ತಾರೆ, ಪುನರ್ಜನ್ಮವನ್ನು ಪಡೆಯುವುದಿಲ್ಲ

### ಗಮನಿಸಬೇಕಾದ ವಿಷಯ

ಧ್ಯಾನಯೋಗದ ಕ್ರಮವೇನು ? ನಾವು ನಮ್ಮ ಇಂದ್ರಿಯಗಳನ್ನು ಶಬ್ದ, ಸ್ಪರ್ಶ, ರಸ, ಗಂಧ, ರೂಪಗಳೆಂಬ ವಿಷಯಗಳಲ್ಲಿ ಪ್ರವರ್ತಿಸದ ಹಾಗೆ ಜಯಿಸಿ, ಅವು ಮನಸ್ಸನ್ನು ಆಕರ್ಷಿಸದ ಹಾಗೆ ಅವನ್ನು ತಡೆಯಬೇಕು ಆ ಮೇಲೆ ಶಾಂತವಾದ ಮನಸ್ಸನ್ನು ಒಳಗಿನ ಅರಿಯುವ ಆತ್ಮನಲ್ಲಿ (ಅಂದರೆ ನಿರ್ಗುಣ ಬ್ರಹ್ಮನಲ್ಲಿ, ಶುದ್ಧ ಪ್ರತ್ಯಗಾತ್ಮನಲ್ಲಿ ಅಥವ ಪರಮಾತ್ಮನಲ್ಲಿ) ಅದನ್ನು ಏಕಾಗ್ರವಾಗಿ ಧ್ಯಾನ ಮಾಡಬೇಕು. ಧ್ಯಾನವೆಂದರೆ ಮನಸ್ಸು ಎಣ್ಣೆಯ ಧಾರೆಯಂತೆ ಒಂದೇ ಸಮನಾಗಿ ಆತ್ಮಜ್ಞಾನದಲ್ಲಿ ನಿಲ್ಲಬೇಕು. ಈ ಧ್ಯಾನದಿಂದ ಆತ್ಮನಲ್ಲಿ ಅಂದರೆ ಬುದ್ಧಿಯಲ್ಲಿ, ಆತ್ಮನನ್ನು ಅಂದರೆ ಒಳಗಿನ ಶುದ್ಧ ಚೈತನ್ಯವನ್ನು ಆತ್ಮನಿಂದ ಅಂದರೆ ತನ್ನದೇ ಆದ ಧ್ಯಾನ ಸಂಸ್ಕೃತವಾದ ಅಂತಃಕರಣದಿಂದ ಕೆಲವು ಯೋಗಿಗಳು ಸಾಕ್ಷಾತ್ಕಾರ ಮಾಡುತ್ತಾರೆ. ಅವರು ಹೊರಗಿನ ಜ್ಞಾನವಿಲ್ಲದೆ ಒಂದೇ ಸಮನಾಗಿ ಒಳಗಿನ ಆತ್ಮನ ಸ್ವರೂಪವನ್ನು ಧ್ಯಾನ ಮಾಡುತ್ತಾರೆ

ಸಾಂಖ್ಯಯೋಗದ ಕ್ರಮವೇನು ? ಗುಣಗಳಿಂದ ಮತ್ತು ವಿಕಾರಗಳಿಂದ ಕೂಡಿದ ಪ್ರಕೃತಿ ಮತ್ತು ಪುರುಷರ ಇವೆರಡರ ಸ್ವರೂಪವನ್ನು ಬುದ್ಧಿಯಲ್ಲಿ ತಿಳಿದು ವಿವೇಕದಿಂದ " ಈ ಸತ್ವ ರಜಸ್ತಮೋ ಗುಣಗಳೂ ಮತ್ತು ಪ್ರಕೃತಿಯ ವಿಕಾರಗಳೂ ನನಗೆ ಈಗ ಗೋಚರವಾಗುತ್ತಿದ್ದಾಗ್ಯೂ, ನಾನು ಮಾತ್ರ ಅವುಗಳಿಗಿಂತ ಬೇರೆಯಾಗಿ ಅವುಗಳ ವ್ಯಾಪಾರಗಳಿಗೆ ಸಾಕ್ಷಿಯಾಗಿರುವ, ನಿತ್ಯವಾಗಿರುವ ಯಾವ ಗುಣವನ್ನೂ ಪಡೆಯದ ಆತ್ಮನು " ಎಂದು ಸದಾ ಆಲೋಚಿಸುತ್ತಾ, ಶಾಶ್ವತವಾದ ಸತ್ಯದಲ್ಲಿ ಆಸಕ್ತಿಯನ್ನು ತೋರಿಸುತ್ತಾ, ಕೆಲವು ಕಾಲ ಮಾತ್ರ ಇರುವ ಅನಿತ್ಯ ಪದಾರ್ಥಗಳಲ್ಲಿ ಅಭಿಮಾನವನ್ನು ತೊರೆಯುತ್ತಾ ವಿವೇಕದಿಂದ ಜೀವನವನ್ನು ನಡಿಸುವುದೇ ಸಾಂಖ್ಯಯೋಗವು ಇದರಿಂದ ಆತ್ಮನನ್ನು ಆತ್ಮದಿಂದ ಅಂದರೆ ಬುದ್ಧಿಯಿಂದ ಆತ್ಮನಲ್ಲಿ ಅಂದರೆ ತಮ್ಮಲ್ಲಿಯೇ ಕಂಡು ಕೊಳ್ಳುವರು

ಕರ್ಮಯೋಗವೆಂದರೇನು ? ಕರ್ತವ್ಯ ಕರ್ಮಗಳನ್ನು ಸಾತ್ವಿಕವಾಗಿ ಅಂದರೆ ಯೋಗವಾಗಿ ಮಾಡುವುದೇ ಕರ್ಮಯೋಗವು ಅಂದರೇನು, ಧರ್ಮವಾದ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ, ಅಕರ್ತೃತ್ವಾನು ಸಂಧಾನಯುತವಾಗಿ, ಈಶ್ವರಾರ್ಪಣ ಬುದ್ಧಿಯಿಂದ, ಆತ್ಮ ಮನನ ಮಾಡಿದರೆ ಅದು ಯೋಗ

ವಾಗಿ ಪರಿಣಮಿಸಿ ಕ್ರಮೇಣ ಆತ್ಮ ಸಾಕ್ಷಾತ್ಕಾರವೆಂಬ ಫಲವನ್ನು ಕೊಡುತ್ತದೆ. ಕರ್ಮವನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಿದರೆ ಚಿತ್ತವು ಶುದ್ಧಿಯಾಗಿ, ವೃದ್ಧಿಯಾಗಿ, ತನ್ಮೂಲಕ ಕೆಲವರು ಆತ್ಮನನ್ನು ಆತ್ಮದಿಂದ ಕಂಡುಕೊಳ್ಳುವರು. (ಇಲ್ಲಿ ಆತ್ಮನೆಂದರೆ ನಿರ್ಗುಣ ಬ್ರಹ್ಮವಾಗಿಯೂ ಇರಬಹುದು.)

“ಶ್ರುತಿಪರಾಯಣಾಃ ಉಪಾಸತೆ” ಎಂದರೇನು ? ಇಲ್ಲಿಯವರೆಗೆ ಧ್ಯಾನಯೋಗದಿಂದ, ಸಾಂಖ್ಯಯೋಗದಿಂದ ಮತ್ತು ಕರ್ಮಯೋಗದಿಂದ ಸಂಸ್ಕಾರವನ್ನು ಪಡೆದ ಅಂತಃಕರಣದಿಂದ ಆತ್ಮನನ್ನು (ನಿರ್ಗುಣ ಬ್ರಹ್ಮನನ್ನು, ಶುದ್ಧ ಪ್ರತ್ಯಗಾತ್ಮನನ್ನು ಅಥವ ಪರಮಾತ್ಮನನ್ನು) ಸಾಕ್ಷಾತ್ಕಾರ ಮಾಡುವ ಕ್ರಮಗಳನ್ನು ವಿವರಿಸಿದೆವು ಆದರೆ ಬಹುಮಂದಿ ಸಾಧಾರಣ ಜನರು ತಾವಾಗಿಯೇ ಈ ಕ್ರಮಗಳನ್ನು ತಿಳಿದು,ಅವುಗಳನ್ನು ಅನುಷ್ಟಿಸಿ, ಆತ್ಮ ಸಾಕ್ಷಾತ್ಕಾರವನ್ನು ಪಡೆಯುವ ಯೋಗ್ಯತೆಯನ್ನು ಅಥವ ಶಕ್ತಿಯನ್ನು ಪಡೆದಿಲ್ಲ. ಅವರು ಕ್ರಮೇಣ ಆತ್ಮಸಾಕ್ಷಾತ್ಕಾರವನ್ನು ಪಡೆಯಲು ಏನು ಮಾಡಬೇಕು ? ಅವರು ಇತರರಿಂದ ಅಂದರೆ ಜ್ಞಾನಿಗಳಾದ ಗುರುಗಳಿಂದ ಕರ್ಮಯೋಗ, ಸಾಂಖ್ಯಯೋಗ, ಧ್ಯಾನಯೋಗಗಳ ವಿಚಾರವಾಗಿ ಉಪದೇಶಗಳನ್ನು ಪಡೆಯಬೇಕು. ಈ ಗುರುಗಳು ಶಾಸ್ತ್ರಗಳಲ್ಲಿರುವ ವಿಚಾರಗಳನ್ನೂ ಮತ್ತು ಅನುಭವಗಳನ್ನೂ ತಿಳಿಸಿದಾಗ ಇವರು ಶ್ರದ್ಧೆಯೊಡನೆ ಕೇಳಬೇಕು ; ಆದುದರಿಂದಲೇ ಅವರು “ಶ್ರುತಿ ಪರಾಯಣರು.” ಈ ಉಪದೇಶಗಳನ್ನು ಕೇಳುವುದು ಮಾತ್ರ ಸಾಲದು. “ಉಪಾಸತೆ” ಎಂದರೆ ಅವುಗಳನ್ನು ತಮ್ಮ ನಿತ್ಯ ಜೀವನದಲ್ಲಿ ನಂಬಿಕೆಯನ್ನಿಟ್ಟು ಶ್ರದ್ಧೆಯೊಡನೆ ಆಚರಿಸಬೇಕು. ತಾವಾಗಿಯೇ ವಿವೇಕಿಗಳಲ್ಲದುದರಿಂದ ಇವರು ಜ್ಞಾನಿಗಳಿಂದ ವಿವೇಕ ಜ್ಞಾನವನ್ನು ಪಡೆದು ಮೋಕ್ಷವನ್ನು ಪಡೆಯಲು ತೊಡಗುವರು. ಇಂಥಾ ಶ್ರುತಿ ಪರಾಯಣರೂ ಕೂಡ ಕರ್ಮಯೋಗ, ಸಾಂಖ್ಯಯೋಗ, ಅಥವ ಧ್ಯಾನಯೋಗ ಉಪಾಸನೆಗಳ ಬಲದಿಂದ ಕ್ರಮೇಣ ಮೃತ್ಯುವನ್ನು ದಾಟಿಯೇ ದಾಟುತ್ತಾರೆ ; ಅಂದರೆ ಮೃತ್ಯು ರೂಪವಾದ ಸಂಸಾರದಿಂದ ಅಥವ ಕರ್ಮದಿಂದ ಉಂಟಾಗುವ ಶರೀರ ಸಂಬಂಧದಿಂದ ಬಿಡುಗಡೆಯನ್ನು ಹೊಂದುತ್ತಾರೆ.

ಹೀಗೆ ಶ್ರುತಿ ಪರಾಯಣರೂ ಮೃತ್ಯುವನ್ನು ದಾಟಲು ಯೋಗ್ಯತೆಯನ್ನು ಪಡೆದರೆ ಪ್ರತ್ಯಕ್ಷ, ಅನುಮಾನ, ಶಬ್ದ ಪ್ರಮಾಣಗಳ ಮತ್ತು ಪ್ರಮೇಯಗಳ ವಿವೇಕವನ್ನು ತಿಳಿದು ಸ್ವತಂತ್ರವಾಗಿ ಕರ್ಮಯೋಗ, ಸಾಂಖ್ಯಯೋಗ ಅಥವ ಜ್ಞಾನಯೋಗ ಮತ್ತು ಧ್ಯಾನಯೋಗಗಳನ್ನು ಆಚರಿಸುವವರು ಖಂಡಿತವಾಗಿ ಮೃತ್ಯುವನ್ನು ದಾಟಿ ನಿರ್ಗುಣ ಬ್ರಹ್ಮ ಸಾಕ್ಷಾತ್ಕಾರವನ್ನೋ, ಶುದ್ಧ ಪ್ರತ್ಯಗಾತ್ಮ ಸಾಕ್ಷಾತ್ಕರವನ್ನೋ ಅಥವ ಸಗುಣ ಬ್ರಹ್ಮ ಸಾಕ್ಷಾತ್ಕಾರವನ್ನೋ ಅವರವರು ಸ್ವೀಕರಿಸುವ ಧ್ಯೇಯಕ್ಕೆ ಅನುಗುಣವಾಗಿ ನಿಸ್ಸಂದೇಹವಾಗಿ ಪಡೆಯುವರು.

# ಭಗವದ್ಗೀತಾ ಅಧ್ಯಾಯ ೧೩. ಪಾಠ ೭

## ಜ್ಞಾನಿಗೆ ಶ್ರೇಯಸ್ಸನ್ನುಂಟುಮಾಡುವ ವಿವೇಕ ಜ್ಞಾನ

(ಶ್ಲೋಕಗಳು ೨೬ ರಿಂದ ೩೪.)

**ಯಾವತ್ಸಂಜಾಯತೇ ಕಿಂಚಿತ್ಸತ್ವಂ ಸ್ಥಾವರ ಜಂಗಮಂ ।**
**ಕ್ಷೇತ್ರ ಕ್ಷೇತ್ರಜ್ಞ ಸಂಯೋಗಾತ್ತದ್ವಿದ್ಧಿ ಭರತರ್ಷಭ ॥ ೨೬ ॥**

**ಈ ಶ್ಲೋಕದಲ್ಲಿರುವ ವಾಕ್ಯಗಳ ಅರ್ಥ.**

(1) ಹೇಭರತರ್ಷಭ ! ಸ್ಥಾವರ ಜಂಗಮಂ ಯಾವತ್ ಕಿಂಚಿತ್ ಸತ್ವಂ ಸಂಜಾಯತೇ = ಎಲೈ ಅರ್ಜುನನೇ ! ಸ್ಥಾವರ ಜಂಗಮರೂಪವಾಗಿ ಯಾವುದಾದರೂ ಒಂದು ವಸ್ತುವು ಹುಟ್ಟುತ್ತದೆಯೋ.

(2) ತತ್ ಕ್ಷೇತ್ರ ಕ್ಷೇತ್ರಜ್ಞ ಸಂಯೋಗಾತ್ ವಿದ್ಧಿ = ಅದನ್ನು ಕ್ಷೇತ್ರ ಕ್ಷೇತ್ರಜ್ಞ ಸಂಯೋಗದಿಂದಲೇ ಹುಟ್ಟಿದುದಾಗಿ ತಿಳಿ.

ಈ ಶ್ಲೋಕದಲ್ಲಿಯೂ ಆಚಾರ್ಯರುಗಳು “ಕ್ಷೇತ್ರಜ್ಞ, ಕ್ಷೇತ್ರ, ಸಂಯೋಗ” ಎಂಬ ಪದಗಳಿಗೆ ಬೇರೆ ಬೇರೆ ಅರ್ಥ ಮಾಡಿರುವುದರಿಂದ ಇದರ ತಾತ್ಪರ್ಯದಲ್ಲಿ ಅಭಿಪ್ರಾಯ ಭೇದಗಳಿವೆ.

### ಮೊದಲನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ.

ಸ್ಥಾವರ ಜಂಗಮರೂಪವಾದ ವಸ್ತುಗಳಲ್ಲಿ ಯಾವುದೊಂದು ನಮ್ಮ ಅನುಭವಕ್ಕೆ ಗೋಚರವಾಗುತ್ತದೆಯೋ ಅದು ಕ್ಷೇತ್ರ ಮತ್ತು ಕ್ಷೇತ್ರಜ್ಞ ಇವೆರಡರ ಸಂಯೋಗದಿಂದಲೇ ಉಂಟಾಗುವದೆಂದು ತಿಳಿ. ಇಲ್ಲಿ ಕ್ಷೇತ್ರಜ್ಞನೆಂದರೆ ನಿರ್ಗುಣ ಬ್ರಹ್ಮನು; ಕ್ಷೇತ್ರವೆಂದರೆ ತ್ರಿಗುಣಾತ್ಮಕವಾದ ಪ್ರಕೃತಿಯು ಅಥವ ಮಾಯೆಯು. ಹಾಗಾದರೆ ಬ್ರಹ್ಮನಿಗೂ ಪ್ರಕೃತಿಗೂ ಉಂಟಾಗುವ ಸಂಯೋಗದ ಸ್ವರೂಪವೇನು ? ಒಂದು ಗಿಡದಲ್ಲಿರುವ ಅವಯವಗಳು ಸಂಯೋಗವಾಗಿರುವ ಹಾಗೆ ಕ್ಷೇತ್ರಜ್ಞನಿಗೂ ಕ್ಷೇತ್ರಕ್ಕೂ ಸಂಯೋಗವಾಗುವುದಿಲ್ಲ ; ಏಕೆಂದರೆ ಕ್ಷೇತ್ರಜ್ಞನು ಅಥವ ಬ್ರಹ್ಮನು ಆಕಾಶದಂತೆ ಅವಯವಗಳಿಲ್ಲದವನಾಗಿರುತ್ತಾನೆ. ದಾರಗಳಿಗೂ ಮತ್ತು ಅವುಗಳಿಂದ ತಯಾರಿಸಲ್ಪಟ್ಟ ಬಟ್ಟೆಗೂ ಸಂಯೋಗವಾಗಿರುವ ಹಾಗೆ ಕ್ಷೇತ್ರಜ್ಞನಿಗೂ ಕ್ಷೇತ್ರಕ್ಕೂ ಸಂಯೋಗವಾಗಿರುವುದಿಲ್ಲ. ಹಾಗಾದರೆ ಈ ಸಂಯೋಗದ ಸ್ವರೂಪವೇನು ? ಹಗ್ಗವೂ ಹಾವೂ ಬೇರೆಯಾಗಿದ್ದಾಗ್ಯೂ ಅವುಗಳ ವ್ಯತ್ಯಾಸವನ್ನು ತಿಳಿಯದೆ ಹಾವಿನ ಧರ್ಮವನ್ನು ಹಗ್ಗದಲ್ಲಿ ಆರೋಪಿಸುವುದು. "ಸಂಯೋಗವು". ಹಾಗೆಯೇ ಕ್ಷೇತ್ರಜ್ಞನು ಅರಿಯುವ ಸ್ವಭಾವವುಳ್ಳವನಾಗಿಯೂ ಮತ್ತು ಕ್ಷೇತ್ರವು ಅರಿಯಲ್ಪಡುವ ಸ್ವಭಾವವುಳ್ಳದ್ದಾಗಿಯೂ ಇದ್ದು ಇವೆರಡೂ ಬೇರೆ ಬೇರೆ ಸ್ವಭಾವಗಳುಳ್ಳದ್ದಾಗಿದ್ದರೂ ಕ್ಷೇತ್ರದ ಧರ್ಮವನ್ನು ಕ್ಷೇತ್ರಜ್ಞನ ಧರ್ಮವನ್ನಾಗಿ ತಪ್ಪಾಗಿ ತಿಳಿಯುವದು "ಸಂಯೋಗವು" ಅಥವ ಅಧ್ಯಾಸವು. ಅಂದರೇನು, ಕ್ಷೇತ್ರಜ್ಞನಲ್ಲಿ ಕ್ಷೇತ್ರನನ್ನು ಆರೋಪಿಸುವುದು ತಪ್ಪು ತಿಳುವಳಿಕೆಯು ; ಏಕೆಂದರೆ "ಕ್ಷೇತ್ರಜ್ಞನು ಸತ್ತೆನಿಸುವುದಿಲ್ಲ ; ಅಸತ್ತೆನಿಸುವುದಿಲ್ಲ ; ಅವನು ನಿರ್ಗುಣ ಬ್ರಹ್ಮನು" ಎಂದು ಹಿಂದಿನ ಒಂದು ಶ್ಲೋಕದಲ್ಲಿ ತಿಳಿಸಿದೆ. ಆದರೆ ಕ್ಷೇತ್ರವು ಅಸತ್ತಾಗಿಯೇ ಇದ್ದುಕೊಂಡು ಸತ್ತಿನಂತೆ ಕಾಣುತ್ತದೆಯೇ ಹೊರತು ಅದು ನಿಜವಾಗಿ ಸತ್ತಲ್ಲ. ಉದಾಹರಣೆಗಾಗಿ, ಕನಸಿನಲ್ಲಿ ಕಂಡನಗರ, ಸಿನಿಮಾ ತೆರೆಯ ಮೇಲೆ ಕಾಣುವ ನಾಟಕ ಇವು ಅಸತ್ತಾಗಿದ್ದರೂ ಸತ್ತಾಗಿ ತೋರುತ್ತಿವೆಯಲ್ಲವೆ ! ಹಾಗಾದರೆ, ಪ್ರಕೃತಿಯಿಂದ ಉಂಟಾದ ವಿವಿಧ ಪದಾರ್ಥಗಳು ನಿಜವಾಗಿ ಇಲ್ಲ ; ಅವು ಸತ್ತಾಗಿ ಕೆಲವು ಕಾಲ ಮಾತ್ರ ತೋರುತ್ತವೆ ಮತ್ತು ಮಿಥ್ಯಾ ಜ್ಞಾನವು ಎಂದು ತೀರ್ಮಾನ ಮಾಡಲು ಕಾರಣವೇನು? ಯೋಗಾಭ್ಯಾಸದ ಬಲದಿಂದ ಸಮಾಧಿ ಜ್ಞಾನವನ್ನು ಪಡೆದ ಯೋಗಿಗೆ ಅಥವ ಜ್ಞಾನಿಗೆ ಆ ಸಮಾಧಿ ಜ್ಞಾನವನ್ನು ಅನುಭವಿಸುವಕಾಲದಲ್ಲಿ ಮಿಥ್ಯಾ ಜ್ಞಾನ ಅಥವ ಅವಿದ್ಯೆಯು ತೊಲಗಿ ನಮ್ಮ ಅನುಭವದಲ್ಲಿರುವ ಸ್ಥಾವರ ಜಂಗಮ ವಸ್ತುಗಳೆಲ್ಲವೂ ಅವುಗಳ ನಾಮರೂಪ ರಹಿತವಾಗಿ ನಿರ್ಗುಣ ಬ್ರಹ್ಮವಾಗಿಯೇ ಸಾಕ್ಷಾತ್ಕಾರವಾಗುವುದು ! ಆದುದರಿಂದ ಈ ಶ್ಲೋಕದ ತಾತ್ಪರ್ಯವೇನು ? ನಮಗೆ ತೋರುತ್ತಿರುವ ಸ್ಥಾವರ ಜಂಗಮ ರೂಪವಾದ ವಸ್ತುಗಳೆಲ್ಲವೂ ಕ್ಷೇತ್ರಜ್ಞನಲ್ಲಿ ಮಿಥ್ಯೆಯಾದ ಕ್ಷೇತ್ರದ ಧರ್ಮಗಳನ್ನು ಆರೋಪಿಸುವುದರಿಂದ ಉಂಟಾಗಿವೆ ; ಅಂದರೇನು ಬ್ರಹ್ಮನು ಮಾತ್ರ ಸತ್ಯ, ಇವುಗಳೆಲ್ಲವೂ ಬ್ರಹ್ಮನನ್ನೇ ಆಧಾರವಾಗಿ ಪಡೆದು ಅವಿದ್ಯೆಯ ಅಥವ ಮಿಥ್ಯಾಜ್ಞಾನದ ಸಂಯೋಗದಿಂದ ಹಗ್ಗವು ಹಾವಿನ ಹಾಗೆ ಕಾಣುವ ಹಾಗೆ, ಕನಸಿನಲ್ಲಿ ಗಂಧರ್ವನಗರವು ಕಾಣುವ ಹಾಗೆ ತೋರುತ್ತವೆಯೇ ಹೊರತು ಅವು ಬ್ರಹ್ಮನ ಶಾಶ್ವತವಾದ ಸತ್ಯ ಸ್ವರೂಪವಲ್ಲವೆಂದು ತಿಳಿಯಬೇಕು.

### ಎರಡನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ಶ್ಲೋಕದಲ್ಲಿಯೂ "ಕ್ಷೇತ್ರ" ವೆಂದರೆ ಸತ್ಯವಾದ ಪ್ರಕೃತಿಯು ; "ಕ್ಷೇತ್ರಜ್ಞ" ಎಂದರೆ ಸತ್ಯವಾದ ಪ್ರತ್ಯಗಾತ್ಮನು ಅಥವ ಜೀವಾತ್ಮನು. "ಸ್ಥಾವರ" ಎಂದರೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಓಡಾಡದ ಸಸ್ಯಾಧಿಗಳು ; "ಜಂಗಮ" ವೆಂದರೆ ಒಂದು ಸ್ಥಳದಿಂದ ಬೇರೆ ಬೇರೆಯ ಸ್ಥಳಗಳಿಗೆ ಓಡಾಡುವ ತಿರ್ಯಕ್ಕುಗಳು, ಮನುಷ್ಯರು ಮತ್ತು ದೇವತೆಗಳು. ಈ ಸ್ಥಾವರ ಜಂಗಮಗಳಲ್ಲಿ ಪ್ರತಿಯೊಂದು ಪ್ರಾಣಿಯು ಹೇಗೆ ಹೇಗೆ ಉಂಟಾಗುತ್ತದೆ ಅಂದರೆ ಅದು ಕ್ಷೇತ್ರವಾದ ಪ್ರಕೃತಿಯ ಒಂದು ಭಾಗವು ಕ್ಷೇತ್ರಜ್ಞನಾದ ಒಬ್ಬ ಜೀವಾತ್ಮನೊಡನೆ ಸಂಯೋಗವಾಗುವುದರಿಂದ ಅಂದರೆ ನಿಜವಾಗಿ ಸೇರಿ ಮಿಳಿತವಾಗುವುದರಿಂದ ಉಂಟಾಗುತ್ತದೆ ಎಂದು ತಿಳಿಯಬೇಕು. ಅಂದರೇನು, ಸ್ಥಾವರವೋ ಜಂಗಮವೋ ಆದ ಯಾವುದೊಂದು ಪ್ರಾಣಿಯು ಕ್ಷೇತ್ರ ಮತ್ತು ಕ್ಷೇತ್ರಜ್ಞರ ಸೇರುವಿಕೆಯಿಂದ ಮಾತ್ರ ಉಂಟಾಗುತ್ತದೆಯೇ ವಿನಹ ಇವು ಬೇರೆ ಬೇರೆಯಾಗಿ ಇದ್ದಾಗ ಉಂಟಾಗಲಾರವು ಎಂದು ತಿಳಿಯಬೇಕು. ಬರಿಯ ಪ್ರಕೃತಿಯ ಭಾಗಗಳಲ್ಲೂ ಪ್ರಾಣಿಗಳು ಉಂಟಾಗುವುದಿಲ್ಲ ಮತ್ತು ಶುದ್ಧ ಪ್ರತ್ಯಗಾತ್ಮನಲ್ಲಿಯೂ ಅವು ಉಂಟಾಗುವುದಿಲ್ಲ. ಆದರೆ ಕ್ಷೇತ್ರದ ವಿವಿಧ ಭಾಗಗಳೂ ಮತ್ತು ಬೇರೆ ಬೇರೆ ಕ್ಷೇತ್ರಜ್ಞರೂ ಅವರವರ ಕರ್ಮಾನುಸಾರವಾಗಿ ಸೇರಿದಾಗ ಮಾತ್ರ ಈ ವಿಚಿತ್ರಾನಂತವಾದ ಪ್ರಾಣಿಗಳೆಲ್ಲವೂ ಹುಟ್ಟುತ್ತವೆ. ಎಂದು ತಿಳಿಯಬೇಕು. ಇನ್ನೇನು, ಪ್ರತಿಯೊಂದು ಪ್ರಾಣಿಯೂ ಕ್ಷೇತ್ರ ಮತ್ತು ಕ್ಷೇತ್ರಜ್ಞ ಎಂಬ ಎರಡು ತತ್ವಗಳ ಸಂಯೋಗವೇ ಹೊರತು ಅದು ಕ್ಷೇತ್ರವೂ ಅಲ್ಲದ, ಕ್ಷೇತ್ರಜ್ಞನೂ ಅಲ್ಲದ ಮೂರನೆಯದಾದ ಒಂದು ಹೊಸ ತತ್ವವಲ್ಲ.

## ಮೂರನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ಶ್ಲೋಕದಲ್ಲಿ "ಕ್ಷೇತ್ರಜ್ಞನು" ಎಂದರೆ ಪರಮಾತ್ಮ ಅಥವ ಸಗುಣ ಬ್ರಹ್ಮ ಎಂದು ಅರ್ಥ. ಕ್ಷೇತ್ರವೆಂದರೆ ಈ ಲೋಕದಲ್ಲಿರುವ ಅನೇಕಾನೇಕ ಸ್ಥಾವರವಾಗಿರುವ ಅಂದರೆ ಒಂದೇ ಸ್ಥಳದಲ್ಲಿರುವ ಮತ್ತು ಜಂಗಮವಾಗಿರುವ ಅಂದರೆ ಅಲ್ಲಿ ಇಲ್ಲಿ ಓಡಾಡುವ ಪ್ರಾಣಿಗಳ ಸಮೂಹವು. ಈ ಪ್ರಾಣಿಗಳ ಸಮೂಹವು ಹೇಗೆ ಉಂಟಾಗುತ್ತವೆ? ಇವೆಲ್ಲವೂ ಪ್ರಕೃತಿಯಲ್ಲಿ ಪರಮಾತ್ಮನ ಸಂಯೋಗವಾಗುವುದರಿಂದ ಅಂದರೆ ಪ್ರಕೃತಿಯು ಪರಮಾತ್ಮನ ಸಂಬಂಧವನ್ನು ಪಡೆಯುವದರಿಂದ ಹುಟ್ಟುತ್ತವೆ. ಎಂಬ ತತ್ವವನ್ನು ವಿವೇಕಿಯು ತಿಳಿದು ಕೊಳ್ಳಬೇಕು.

## ಗಮನಿಸಬೇಕಾದ ವಿಷಯ

ಭಾರತದ ಪ್ರಸಿದ್ಧ ವಿಜ್ಞಾನಿ ಜಗದೀಶ ಚಂದ್ರಭೋಸ್ ರವರು ತಮ್ಮ ಪ್ರಯೋಗಗಳ ಆಧಾರದಿಂದ ಪ್ರಾಣದಿಂದ ಕೂಡಿದ ಮತ್ತು ಪ್ರಾಣವಿಲ್ಲದ ಅನೇಕ ಪದಾರ್ಥಗಳಲ್ಲಿ ಚೈತನ್ಯ ಅಥವ ಜ್ಞಾನ ತತ್ವವೂ ಕೂಡ ಒಳಗೆ ಅಂತರ್ಗತವಾಗಿದೆಯೆಂದು ಸ್ಥಾಪಿಸಿದ್ದಾರೆ. ಪ್ರತಿಯೊಬ್ಬನೂ ತನ್ನಲ್ಲಿ ಜ್ಞಾನದ ಅನುಭವವನ್ನು ಪಡೆದಿರುವನು ; ಆದರೆ ಜ್ಞಾನದ ಅನುಭವವು ಇದೆ ಎಂಬುದನ್ನು ಅವರವರ ಬಾಹ್ಯ ಜ್ಞಾನ ಚಿಹ್ನೆಗಳಿಂದ (Intelligent Behaviour) ತೀರ್ಮಾನಿಸುವನು. ಶ್ರೀ ಭೋಸ್‌ರವರು ಪ್ರಾಣವಿಲ್ಲವೆಂದು ನಾವು ತಿಳಿದಿರುವ ಪದಾರ್ಥಗಳಲ್ಲೂ ಚೈತನ್ಯ ಪ್ರವೃತ್ತಿಯು ಕಂಡುಬರುವುದನ್ನು ಆದರ ಬಾಹ್ಯ ಚಿಹ್ನೆಗಳನ್ನು ಪರೀಕ್ಷಿಸಿ ಸಾಧಿಸಿರುವರು. ಈ ತೀರ್ಮಾನವು ಈ ಶ್ಲೋಕದ ಅಭಿಪ್ರಾಯವನ್ನು ಸಾಧಿಸುತ್ತದೆ ಮನುಷ್ಯ, ಮೃಗ, ಸಸ್ಯ, ಬಂಡೆ ಮೊದಲಾದ ಸ್ಥಾವರ ಜಂಗಮ ವಸ್ತುಗಳೆಲ್ಲವೂ ಪ್ರಕೃತಿಯು ಮತ್ತು ಜೀವಾತ್ಮ ಸಂಯೋಗದಿಂದ ಉಂಟಾಗುತ್ತವೆ ಎಂದು ಉಪದೇಶವಿದೆ. ಪ್ರತಿಯೊಂದು ವಸ್ತುವೂ ನಿಜವಾಗಿ ಸಚ್ಚಿದಾನಂದ ಬ್ರಹ್ಮವೇ ಎಂಬುದು ಮೊದಲನೆಯ ಅಭಿಪ್ರಾಯ, ಪ್ರತಿಯೊಂದು ವಸ್ತುವಿನಲ್ಲಿಯೂ ಚೈತನ್ಯ ಸ್ವರೂಪನಾದ ಶುದ್ಧಪ್ರತ್ಯಗಾತ್ಮನೂ ಇರುವವನು ಎಂಬುದು ಎರಡನೆಯ ಅಭಿಪ್ರಾಯ ; ಇಷ್ಟೇ ಅಲ್ಲ ; ಪ್ರತಿಯೊಂದು ವಸ್ತುವಿನಲ್ಲಿ ಅಖಂಡ ಜ್ಞಾನವನ್ನು ಪಡೆದಿರುವ ಪರಮಾತ್ಮನೂ ಇರುವನು ಎಂಬುದು ಮೂರನೆಯ ಅಭಿಪ್ರಾಯ. ಒಟ್ಟಿನಲ್ಲಿ, ಪ್ರಪಂಚದ ಸರ್ವ ವಸ್ತುಗಳಲ್ಲಿಯೂ ಚೈತನ್ಯವು ಒಳಗೆ ಇದೆ. ಆದರೆ ಕೆಲವು ವಸ್ತುಗಳಲ್ಲಿ ಅದು ಚೆನ್ನಾಗಿ ಪ್ರಕಾಶವಾಗಿದೆ ; ಇನ್ನು ಕೆಲವಲ್ಲಿ ಆದು ಸ್ವಲ್ಪ ಹೆಚ್ಚು ಕಮ್ಮಿಯಾಗಿ ಕಂಡು ಬರುತ್ತದೆ. ಮತ್ತೆ ಕೆಲವು ಪದಾರ್ಥಗಳಲ್ಲಿ ಚೈತನ್ಯವು ಹೊರಗೆ ಪ್ರಕಾಶವಾಗುವ ಹಾಗೆ ಕಾಣುವದಿಲ್ಲ ; ಅಷ್ಟೇ.

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೨೭ ॥**

## ಈ ಶ್ಲೋಕದಲ್ಲಿರುವ ವಾಕ್ಯಗಳ ಅರ್ಥ

(1) ಸರ್ವೇಷು ಭೂತೇಷು ಸಮಂತಿಷ್ಠಂತಂ ಪರಮೇಶ್ವರಂ = ಸಮಸ್ತವಾದ ಪ್ರಾಣಿಗಳಲ್ಲೂ ಸಮನಾಗಿ ಇರುವಂಥಾ ಪರಮೇಶ್ವರನನ್ನು

(2) ಯಃವಿನಶ್ಯತ್ಸು ಅವಿನಶ್ಯಂತಂ ಪಶ್ಯತಿ=ಯಾವನು ನಾಶವನ್ನು ಹೊಂದುವಂಥಾವುಗಳಲ್ಲಿ ನಾಶವನ್ನು ಹೊಂದದೆ ಇರುವಂಥಾದ್ದನ್ನಾಗಿ ನೋಡುತ್ತಾನೆಯೋ.

(3) ಸಹ ಪಶ್ಯತಿ = ಅವನು ಜ್ಞಾನಿಯಾಗಿಯೇ ನೋಡುತ್ತಾನೆ ಅಂದರೆ ನಿಜವಾಗಿ ನೋಡುತ್ತಾನೆ—

ಈ ಶ್ಲೋಕದಲ್ಲೂ "ಪರಮೇಶ್ವರಂ" ಎಂಬ ಪದಕ್ಕೆ ನಿರ್ಗುಣ ಬ್ರಹ್ಮ ಶುದ್ಧ ಪ್ರತ್ಯಗಾತ್ಮ, ಸಗುಣ ಬ್ರಹ್ಮ ಎಂಬ ಬೇರೆ ಬೇರೆ ಅರ್ಥಗಳನ್ನು ಮಾಡಿರುವುದರಿಂದ ತಾತ್ಪರ್ಯದಲ್ಲಿ ಅಭಿಪ್ರಾಯ ಭೇದಗಳಿವೆ.

## ಮೊದಲನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಸಮಾಧಿ ಜ್ಞಾನ ಅಥವ ಸಮ್ಯಗ್ದರ್ಶನವನ್ನು ಜ್ಞಾನಿಯು ಪಡೆದಾಗ ಅವನಿಗೆ ಅಂದರೆ ಕ್ಷೇತ್ರಜ್ಞನಿಗೆ ಕ್ಷೇತ್ರದ ಅಧ್ಯಾಸ ರೂಪವಾದ ಸಂಯೋಗವು ನಾಶವಾಗುತ್ತದೆ ಅಂದರೆ ಅವಿದ್ಯೆಯು ನಾಶವಾಗುತ್ತದೆ. ಅದರಿಂದ ಸಂಸಾರದ ಕಾರಣವು ನಾಶವಾಗಿ ಅವನು ಪುನರ್ಜನ್ಮವನ್ನು ಪಡೆಯುವುದಿಲ್ಲ. ಈ ಸಮಾಧಿಜ್ಞಾನ ಅಥವ ಸಮ್ಯಗ್ದರ್ಶನದ ಸ್ವರೂಪವನ್ನು ಈ ಶ್ಲೋಕದಲ್ಲಿ ವರ್ಣಿಸಿದೆ. "ಪರಮೇಶ್ವರನು" ಎಂದರೆ ನಿರ್ಗುಣ ಬ್ರಹ್ಮನು. ಏಕೆಂದರೆ ಅವನು ಪರಿಣಾಮವಾಗುವ ದೇಹ, ಇಂದ್ರಿಯಗಳು, ಮನಸ್ಸು ಬುದ್ಧಿ ಇವೇ ಮೊದಲಾದವುಗಳಲ್ಲದೆ, ಇವೆಲ್ಲವನ್ನೂ ವ್ಯಾವಹಾರಿಕ ದೆಶೆಯಲ್ಲಿ ಆಳುತ್ತಾ ಅವುಗಳೆಲ್ಲಕ್ಕಿಂತಲೂ, ಪರಮನಾಗಿ ಎಂದರೆ ಉತ್ಕೃಷ್ಟನಾಗಿರುವನು. ಎಲ್ಲಾ ಭೂತಗಳಲ್ಲಿಯೂ ನಿರ್ಗುಣ ಬ್ರಹ್ಮನು ಸಮವಾಗಿ ಇರುವನು ; ಇಲ್ಲಿ ಸಮನಾಗಿ ಎಂದರೆ ಯಾವ ವಿಶೇಷವೂ ಇಲ್ಲದೆ ಅದ್ವಿತೀಯ ನಾಗಿ ಶಾಶ್ವತವಾಗಿ ಇರುವನು ಎಂದು ಅರ್ಥ.

(ಮುಂದುವರಿಯುವುದು)

# ಭಗವದ್ಗೀತಾ ಅಧ್ಯಾಯ ೧೩. ಪಾಠ ೭

ಹಾಗಾದರೆ, ಈ ಭೂತಗಳ ಇರುವಿಕೆಯ ಸ್ವಭಾವಕ್ಕೂ ಪರಮೇಶ್ವರನ ಇರುವಿಕೆಯ ಸ್ವಭಾವಕ್ಕೂ ಏನು ವ್ಯತ್ಯಾಸ ? ವ್ಯಾವಹಾರಿಕ ದೆಶೆಯಲ್ಲಿ ಭೂತಗಳಲ್ಲಿ ಪರಮೇಶ್ವನು ಇರುವ ಹಾಗೆ ತೋರಿದಾಗ್ಯೂ, ನಿಜವಾಗಿ ಭೂತಗಳು ಒಂದು ಕಾಲದಲ್ಲಿ ಇದ್ದು ಇನ್ನೊಂದು ಕಾಲದಲ್ಲಿ ನಾಶವಾಗುತ್ತವೆ; ಆದರೆ ಎಲ್ಲಾ ವಸ್ತುಗಳಿಗೂ ಆಶ್ರಯನಾದ ಅದ್ವಿತೀಯ ಬ್ರಹ್ಮನು ಅಥವಾ ಪರಮೇಶ್ವರನು ಎಂದೆಂದಿಗೂ ನಾಶವಾಗುವುದಿಲ್ಲ; ಒಂದೇಸಮನಾಗಿ ಶಾಶ್ವತನಾಗಿರುವನು. ಜ್ಞಾನಿಯು ಸಮ್ಯಗ್ದರ್ಶನ ಕಾಲದಲ್ಲಿ ಈ ರೀತಿಯಲ್ಲಿ ಸಕಲವಸ್ತುಗಳ ನಾಶವನ್ನೂ, ಅವುಗಳಲ್ಲಿರುವ ಪರಮೇಶ್ವರನ ಶಾಶ್ವತವಾದ ಇರುವಿಕೆಯನ್ನೂ ನೋಡುವನು. ನಾವೆಲ್ಲರೂ ವಸ್ತುಗಳನ್ನು ಅವಿದ್ಯೆಯಿಂದ ತಪ್ಪಾಗಿ ನೋಡುವೆವು. ಜ್ಞಾನಿಯಾದರೋ ಪರಮೇಶ್ವರನ ಸ್ವರೂಪವನ್ನೂ, ಭೂತಗಳ ಸ್ವರೂಪವನ್ನೂ ನಿಜವಾಗಿ ನೋಡುವನು.

### ಎರಡನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ.

ಬಹುಮಂದಿ ಮನುಷ್ಯರು ತಾವು ಅಂತಃಕರಣದಿಂದ ಕೂಡಿದ ಶರೀರಗಳೆಂದು ಮಾತ್ರ ತಿಳಿದು, ನಂಬಿ ಆಚರಿಸುತ್ತಿರುವುದರಿಂದ ಅವರು ತಮ್ಮಲ್ಲಿಯೇ ಸದಾ ತೋರುತ್ತಿರುವ ಆತ್ಮನೂ ಕೂಡ ಶರೀರದ ಅವಸ್ಥೆಗಳಿಗೆ ಒಳಪಟ್ಟು ವಿಕಾರವನ್ನು ಹೊಂದುತ್ತಾನೆಯೆಂದು ತಿಳಿದಿರುವರು. ಅಂದರೇನು ? ದೇವ, ಮನುಷ್ಯ, ತಿರ್ಯಕ್ಕು, ಸಸ್ಯ ಮೊದಲಾದ ಶರೀರಗಳು ಹುಟ್ಟುವಾಗ ಮತ್ತು ಸಾಯುವಾಗ ಅವುಗಳೊಳಗಿರುವ ಬೇರೆಬೇರೆಯ ಜೀವಾತ್ಮರುಗಳೂ ಕೂಡ ಹುಟ್ಟುತ್ತಾರೆ, ಪರಿಣಾಮಗಳನ್ನು ಹೊಂದುತ್ತಾರೆ ಮತ್ತು ಸಾಯುತ್ತಾರೆ ಎಂದು ತಿಳಿದಿರುತ್ತಾರೆ. ಆದುದರಿಂದ ಎಲ್ಲಿಯವರೆಗೆ ಮನುಷ್ಯನು ಈ ವಿಧವಾದ ಅಜ್ಞಾನವನ್ನು ಪಡೆದಿರುವನೋ ಅಲ್ಲಿಯವರೆಗೆ ಅವನು ನಿತ್ಯ ಸಂಸಾರಿಯಾಗಿರುತ್ತಾನೆ. ಆದರೆ ಜ್ಞಾನಿಗಳು ಮಾತ್ರ ಕ್ಷೇತ್ರ ಕ್ಷೇತ್ರಜ್ಞರ ನಿಜವಾದ ಸ್ವರೂಪವನ್ನು ಹೀಗೆ ತಿಳಿದಿರುವರು. ಪ್ರತಿಯೊಂದು ಶರೀರದಲ್ಲಿಯೂ ಜೀವಾತ್ಮನು ಮತ್ತು (ಅಂತಃಕರಣದಿಂದ ಕೂಡಿದ) ಶರೀರವೂ ಸೇರಿಕೊಂಡಿದ್ದಾಗ್ಯೂ ಜೀವಾತ್ಮನು ಮಾತ್ರ ದೇಹ, ಮನುಷ್ಯ, ತಿರ್ಯಕ್, ಸಸ್ಯ ಮೊದಲಾದ ವಿಕಾರಗಳನ್ನು ಹೊಂದದೆ ಯಾವಾಗಲೂ ಒಂದೇ ಸಮನಾದ, ವಿಕಾರವಿಲ್ಲದ, ಜ್ಞಾನಾಕಾರಸ್ವರೂಪವನ್ನು ಪಡೆದಿರುವನು. ಅಂದರೇನು, ದೇವಮನುಷ್ಯಾದಿ ಶರೀರಗಳೆಲ್ಲವೂ ಹುಟ್ಟುತ್ತಾ ನಾಶವನ್ನು ಹೊಂದುತ್ತಾ ಇದ್ದಾಗ್ಯೂ ಕೂಡ ಆಯಾ ಶರೀರಗಳನ್ನು ಆಡಿಗಡಿಗೆ ತೆಗೆದುಕೊಳ್ಳುತ್ತಿರುವ ಜೀವಾತ್ಮರು ಮಾತ್ರ ಎಂದೆಂದಿಗೂ ನಾಶ ಹೊಂದುವುದಿಲ್ಲ. ಎಲ್ಲಾ ಜೀವಾತ್ಮರುಗಳೂ ನಿಜಸ್ವರೂಪದಲ್ಲಿ ಜ್ಞಾನಾಕಾರದಿಂದ ಒಂದೇಸಮನಾಗಿ ಇರುವರು. ಯಾರು ಈ ರೀತಿಯಲ್ಲಿ ಶರೀರಗಳ ನಿಜಸ್ವರೂಪವನ್ನೂ ಮತ್ತು ಜೀವಾತ್ಮರುಗಳ ನಿಜ ಸ್ವರೂಪವನ್ನೂ ತಿಳಿಯುತ್ತಾರೆಯೋ ಅವರೇ ನಿಜವಾಗಿ ತಿಳಿಯುತ್ತಾರೆ; ಇದಕ್ಕೆ ವಿರೋಧವಾಗಿ ತಿಳಿಯುವವರು ತಪ್ಪಾಗಿ ತಿಳಿಯುತ್ತಾರೆ.

### ಮೂರನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ.

ಈ ಶ್ಲೋಕದಲ್ಲಿರುವ "ಪರಮೇಶ್ವರ" ಎಂಬ ಪದಕ್ಕೆ ಸಗುಣಬ್ರಹ್ಮ ಎಂದು ಅರ್ಥವೇ ಹೊರತು ನಿರ್ಗುಣಬ್ರಹ್ಮವಲ್ಲ ಅಥವಾ ಜೀವಾತ್ಮನಲ್ಲ. ಅನಂತವಾದ ಪ್ರಾಣಿಗಳಿವೆ; ಅವುಗಳಲ್ಲಿ ಕೆಲವು ಉತ್ತಮ ಜಾತಿಗಳಿಗೆ ಸೇರಿದವುಗಳು; ಇನ್ನು ಕೆಲವು ಮಧ್ಯಮ ಜಾತಿಗಳಿಗೆ ಸೇರಿದವುಗಳು; ಮತ್ತೆ ಕೆಲವು ನೀಚ ಜಾತಿಗೆ ಸೇರಿದವುಗಳು. ಹೀಗೆ ಸಮಸ್ತ ಪ್ರಾಣಿಗಳಲ್ಲಿ ಉತ್ತಮ ಸ್ಥಿತಿ, ಮಧ್ಯಮ ಸ್ಥಿತಿ, ಅಧಮ ಸ್ಥಿತಿ ಎಂಬ ಭೇದಗಳಿವೆ. ಆದರೆ ಪ್ರತಿಯೊಂದು ಪ್ರಾಣಿಯಲ್ಲಿರುವ ಅದ್ವಿತೀಯ ಪರಮಾತ್ಮನು ಮಾತ್ರ ಸಮನಾಗಿ ಅಂದರೆ ಉತ್ತಮತ್ವ, ಮಧ್ಯಮತ್ವ ಮತ್ತು ಅಧಮತ್ವ ಎಂಬ ವ್ಯತ್ಯಾಸಗಳನ್ನು ಪಡೆಯದವನಾಗಿ ಒಂದೇ ಸಮನಾಗಿ, ಅತ್ಯುತ್ತಮನಾಗಿ ಸರ್ವಶ್ರೇಷ್ಠನಾಗಿ ಇರುವನು ಎಂದು ತಿಳಿಯಬೇಕು. ಇಷ್ಟೇ ಅಲ್ಲ; ಪ್ರಾಣಿಗಳೆಲ್ಲವೂ ಜನ್ಮ ಮರಣಗಳಲ್ಲಿ ಅನೇಕಾನೇಕ ದುಃಖಗಳನ್ನು ಅನುಭವಿಸುತ್ತಾ ನಾಶವನ್ನು ಹೊಂದುತ್ತವೆ.

ಆದರೆ ಅವುಗಳಿಲ್ಲದರ ಒಳಗೆ ಇರುವ ಅದ್ವಿತೀಯ ಪರಮಾತ್ಮನು ಮಾತ್ರ ನಾಶವನ್ನು ಹೊಂದುವುದಿಲ್ಲ ; ಅಂದರೆ ಜನ್ಮ ಮರಣ ದುಃಖಾದಿಗಳನ್ನು ಪಡೆಯುವುದಿಲ್ಲ. ಈ ವಿಧವಾಗಿ ಯಾವನು ಪ್ರಾಣಿಗಳ ಸ್ವರೂಪವನ್ನೂ, ಪರಮಾತ್ಮನ ಸ್ವರೂಪವನ್ನೂ, ಇವರುಗಳ ವ್ಯತ್ಯಾಸವನ್ನೂ ತಿಳಿಯುತ್ತಾನೆಯೋ ಅವನೇ ನಿಜವಾಗಿ ತಿಳಿಯುತ್ತಾನೆ, ಅಂದರೆ ಅವನೇ ಪರಮಾತ್ಮನ ನಿಜವಾದ ಸ್ವರೂಪವನ್ನು ತಿಳಿದಿರುವಂಥಾ ಜ್ಞಾನಿಯು. ಮಿಕ್ಕವರು ಪ್ರಾಣಿಗಳ ಸ್ವರೂಪವನ್ನು ತಪ್ಪಾಗಿ ನೋಡುತ್ತಿರುವರು.

### ಗಮನಿಸಬೇಕಾದ ವಿಷಯ

ಆಧುನಿಕ ವಿಜ್ಞಾನಿಗಳು ಪ್ರತಿಯೊಂದು ಪ್ರಾಣಿಯಲ್ಲಿಯೂ ಶರೀರ (body) ಮತ್ತು ಅಂತಃಕರಣ (Mind) ಇವೆರಡು ಮಾತ್ರ ಇವೆಯೆಂದೂ, ಆದರ ಚೈತನ್ಯವು (Consciousness) ಅಂತಃಕರಣದ ಒಂದು ವಿಧವಾದ ಕಾರ್ಯವೆಂದೂ, ಚೈತನ್ಯವು ಬೇರೆ ತತ್ವವಲ್ಲವೆಂದೂ ತಿಳಿದಿರುತ್ತಾರೆ. ಆದರೆ ಭಾರತೀಯ ವೇದಾಂತಿಗಳು ಶರೀರ ಮತ್ತು ಅಂತಃಕರಣ ಈ ಎರಡು ತತ್ವಗಳಲ್ಲದೆ ಪ್ರತಿಯೊಂದು ಪ್ರಾಣಿಯಲ್ಲಿಯೂ ಚೈತನ್ಯ ಅಥವ ಜ್ಞಾನ ಎಂಬ ಮೂರನೆಯ ತತ್ವವು ಪ್ರತ್ಯೇಕವಾಗಿ ಇವೆ ಎಂದು ಉಪದೇಶ ಮಾಡಿದ್ದಾರೆ. ಈ ಮೂರನೆಯದಾದ ತತ್ವವು ಮೊದಲನೆಯ ಅಭಿಪ್ರಾಯದ ಪ್ರಕಾರ ನಿರ್ಗುಣ ಬ್ರಹ್ಮವಾಗಿರಬಹುದು, ಎರಡನೆಯ ಅಭಿಪ್ರಾಯದ ಪ್ರಕಾರ ಶುದ್ಧ ಪ್ರತ್ಯಗಾತ್ಮನಾಗಿರಬಹುದು ಅಥದ ಮೂರನೆಯ ಅಭಿಪ್ರಾಯದ ಪ್ರಕಾರ ಸಗುಣ ಬ್ರಹ್ಮನಾಗಿರಬಹುದು. ಆದರೆ ಈ ಚೈತನ್ಯ ತತ್ವವು ಮಾತ್ರ ಒಂದೇ ಸಮನಾಗಿ ಶಾಶ್ವತವಾಗಿರುವುದು. ಶರೀರ ಮತ್ತು ಅಂತಃಕರಣವು ಬೇರೆ ಬೇರೆ ಅವಸ್ಥೆಗಳನ್ನು ಪಡೆಯುತ್ತಿರುವ ಕಾಲಗಳಲ್ಲಿಯೂ ಮತ್ತು ಅವು ಹುಟ್ಟಿ ನಾಶವಾಗುವ ಕಾಲಗಳಲ್ಲಿಯೂ ಅವುಗಳಲ್ಲಿ ಸಂಬಂಧವನ್ನು ಪಡೆದಿರುವ ಚೈತನ್ಯ ಅಥವ ಜ್ಞಾನ ಮಾತ್ರ ನಾಶವನ್ನು ಪಡೆಯದೇ ಒಂದೇ ವಿಧವಾದ ಸ್ವಭಾವದೊಡನೆ ಕೂಡಿರುವುದು. ಯಾವನು ಹೀಗೆ ಶರೀರ, ಅಂತಃಕರಣ ಮತ್ತು ಚೈತನ್ಯ ಇವುಗಳ ಸ್ವರೂಪಗಳನ್ನೂ, ಅವುಗಳ ವತ್ಯಾಸಗಳನ್ನೂ ಸಂದೇಹರಹಿತವಾಗಿ ತಿಳಿಯುತ್ತಾನೆಯೊ, ಅವನು ತತ್ವಗಳ ಸ್ವರೂಪಗಳನ್ನು ನಿಜವಾಗಿ ತಿಳಿದ ವೇದಾಂತಿಯು ಅಥವ ಜ್ಞಾನಿಯು. ಯಾವನು ಚೈತನ್ಯ ತತ್ವವೂ ಕೂಡ ಶರೀರ ಮತ್ತು ಅಂತಃಕರಣಗಳ ಹಾಗೆ ಹುಟ್ಟುತ್ತಾ ನಾಶವಾಗುತ್ತಾ ಅವುಗಳಿಂದ ಉಂಟಾಗುತ್ತದೆ ಎಂದು ಮಾತ್ರ ತಿರ್ಮಾನ ಮಾಡುತ್ತಾನೆಯೋ ಅವನು ಅಲ್ಪಜ್ಞನಾದ ವಿಜ್ಞಾನಿಯು ಮಾತ್ರ.

**ಸಮಂ ಪಶ್ಯನ್ಹಿಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನಹಿನಸ್ತ್ಯಾತ್ಮನಾತ್ಮಾನಂ ತತೋಯಾತಿ**
**ಪರಾಂಗತಿಮ್ ॥ ೨೮ ॥**

ಈ ಶ್ಲೋಕದಲ್ಲಿರುವ ವಾಕ್ಯಗಳ ಸಾಧಾರಣ ಅರ್ಥ ಹೀಗಿದೆ.

(1) ಹಿ ಸರ್ವತ್ರ ಸಮವಸ್ಥಿತಂ ಈಶ್ವರಮ್ (ಯಃ) ಸಮಂ ಪಶ್ಯನ್ = ಯಾವ ಕಾರಣದಿಂದ ಎಲ್ಲಾ ಜೀವಿಗಳ ದೇಹದಲ್ಲೂ ಸಮವಾಗಿ ಇರತಕ್ಕಂಥಾ ಈಶ್ವರನನ್ನು (ಯಾವನು) ಸಮವಾಗಿ ನೋಡುತ್ತಾನೆಯೋ

(2) (ಸಹ) ಆತ್ಮನಾ ಆತ್ಮಾನಂ ನಹಿನಸ್ತಿ = (ಅವನು) ತನ್ನ ಮನಸ್ಸಿನಿಂದ ಆತ್ಮನನ್ನು ಹಿಂಸಿಸುವುದಿಲ್ಲವು.

(3) ತತಃ ಪರಾಂಗತಿಮ್‌ಯಾತಿ = ಹಾಗೆ ಎಲ್ಲದರಲ್ಲಿಯೂ ಸಮವಾಗಿರುವ ಆತ್ಮನನ್ನು ಸಮವಾಗಿ ತಿಳಿದುಕೊಳ್ಳುವುದರಿಂದ (ತತಃ) ಉತ್ತಮವಾದ ಆತ್ಮಸ್ಥಿತಿಯನ್ನು ಹೊಂದುತ್ತಾನೆ

ಈ ಶ್ಲೋಕದಲ್ಲಿಯೂ ಕೂಡ "ಈಶ್ವರಂ" ಮತ್ತು "ಆತ್ಮಾನಂ" ಎಂಬ ಪದಗಳಿಗೆ ಆಚಾರ್ಯರುಗಳು ಬೇರೆಬೇರೆ ಅರ್ಥ ಮಾಡಿದ್ದಾರೆ ಆದುದರಿಂದ ಈ ಶ್ಲೋಕದ ತಾತ್ಪರ್ಯದಲ್ಲಿಯೂ ಅಭಿಪ್ರಾಯ ಬೇಧಗಳಿವೆ.

### ಮೊದಲನೆ ಅಭಿಪ್ರಾಯದ ಪ್ರಕಾರ ತಾತ್ಪರ್ಯ.

ಈ ಶ್ಲೋಕದಲ್ಲಿರುವ "ಈಶ್ವರಂ" ಮತ್ತು "ಆತ್ಮಾನಂ" ಎಂಬ ಎರಡು ಪದಗಳೂ ಅದ್ವಿತೀಯನಾದ ನಿರ್ಗುಣಬ್ರಹ್ಮನನ್ನೇ ತಿಳಿಸುತ್ತವೆ ; ಎಕೆಂದರೆ, ನಿರ್ಗುಣಬ್ರಹ್ಮನು ವ್ಯಾವಹಾರಿಕ ದೆಶೆಯಲ್ಲಿ ಜಗತ್ತನ್ನು ಸೃಷ್ಟಿಸಿ, ಪಾಲಿಸಿ, ಲಯಮಾಡುವ ಈಶ್ವರನಾಗಿ ತೋರುತ್ತಾನೆ ಮತ್ತು ಆ ಈಶ್ವರನು ಎಲ್ಲರಲ್ಲಿಯೂ ಸಮವಾಗಿ ಇರುತ್ತಾನೆ. ಎಲ್ಲೆಲ್ಲಿಯೂ ಅಂದರೆ ಸಮಸ್ತಪ್ರಾಣಿಗಳಲ್ಲಿಯೂ ಒಬ್ಬನೇ ಆದ ಆತ್ಮನು ಅಥವ ಬ್ರಹ್ಮನು ಇರುತ್ತಾನೆಯೇ ಹೊರತು ನಿಜವಾಗಿ ಪ್ರತಿಯೊಂದು ಪ್ರಾಣಿಯಲ್ಲೂ ಬೇರೆಬೇರೆ ಜೀವಾತ್ಮರು ಇರುವುದಿಲ್ಲ. ನಾವೆಲ್ಲರೂ ಅವಿದ್ಯೆ ಅಥವ ಅಜ್ಞಾನದಿಂದ ಪ್ರಾಣಿಗಳಲ್ಲಿ ಬೇರೆ ಬೇರೆ ಜೀವಾತ್ಮರುಗಳು ಇರುವರೆಂದು ತಪ್ಪಾಗಿ ತಿಳಿದಿದ್ದೇವೆ.

ಆದರೆ ಜ್ಞಾನಿಯು ಮಾತ್ರ ಸರ್ವಪ್ರಾಣಿಗಳಲ್ಲಿಯೂ ಇರುವ ಅದ್ವಿತೀಯ ಆತ್ಮನನ್ನು ಬೇರೆಬೇರೆ ಜೀವಾತ್ಮರುಗಳು ಎಂದು ತಪ್ಪಾಗಿ ತಿಳಿಯದೆ, ಎಲ್ಲರಲ್ಲಿಯೂ ಇರುವ ಆತ್ಮನನ್ನು ಸಮನಾಗಿ ಅಂದರೆ ನಿಜವಾದ ಒಬ್ಬನೇ ಆತ್ಮನನ್ನಾಗಿ ಅಂದರೆ ನಿರ್ಗುಣ ಬ್ರಹ್ಮನನ್ನಾಗಿ ನೋಡುತ್ತಾನೆ ಅಥವಾ ಕಾಣುತ್ತಾನೆ.

ಅವಿದ್ಯೆಯನ್ನು ಪಡೆದಿರುವ ಅಜ್ಞರು ನಿಜವಾದ ಅದ್ವಿತೀಯ ಆತ್ಮನನ್ನು (ಬ್ರಹ್ಮನನ್ನು) ತಿಳಿಯಲು ಯೋಗ್ಯತೆ ಇಲ್ಲದಿರುವುದರಿಂದ ಅನಾತ್ಮವಾದ ಶರೀರದಿಂದ ಕೂಡಿರುವ ಅಂತಃಕರಣವನ್ನು ಅಥವ ಪ್ರಮಾತೃವನ್ನು ಆತ್ಮನನ್ನಾಗಿ ತಿಳಿದು, ಅದಕ್ಕೆ ಅನುಗುಣವಾಗಿ ವ್ಯವಹಾರವನ್ನು ನಡೆಸುವುದರಿಂದ ಅವರು ತಮ್ಮ ನಿಜಸ್ವರೂಪವಾದ ಆತ್ಮನನ್ನು ಮರೆಯುತ್ತಾರೆ ಅಥವ ಹಿಂಸಿಸುತ್ತಾರೆ ಅಥವ ಕೊಲ್ಲುತ್ತಾರೆ. ಅವರು ಒಂದು ದೇಹವು ಸತ್ತಾಗ ಆತ್ಮನಾದ ತಾನು ಸತ್ತನೆಂದೂ. ಪುನಃ ಇನ್ನೊಂದು ದೇಹವು ನಾಶವಾದಾಗ ಪುನಃ ಆತ್ಮನಾದ ತಾನು ಸತ್ತನೆಂದೂ, ಹೀಗೆ ಅಡಿಗಡಿಗೆ ಆತ್ಮನು ಸಾಯುತ್ತಲೂ ಹುಟ್ಟುತ್ತಲೂ ಇರುವನೆಂದು ತಪ್ಪಾಗಿ ಭಾವಿಸುತ್ತಾರೆ. ಆದುದರಿಂದ ಅಜ್ಞರೆಲ್ಲರೂ "ಆತ್ಮಘ್ನರು", ಅಂದರೆ ತಪ್ಪಾಗಿ "ತಾನು" ಎಂದು ತಿಳಿದಿರುವ ಆತ್ಮನನ್ನು ಕೊಲ್ಲುತ್ತಿರುವರು. ಹೀಗೆ ಅಜ್ಞರು ಅಜ್ಞಾನದಿಂದ ತಮ್ಮ ಮನಸ್ಸಿನಲ್ಲಿ ಆತ್ಮನನ್ನು ಕೊಲ್ಲುತ್ತಲೇ ಇರುವುದರಿಂದ ಅವರು ಪರಾಂಗತಿಯನ್ನು ಅಂದರೆ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವುದಿಲ್ಲ

ಜ್ಞಾನಿಯು ಸರ್ವಪ್ರಾಣಿಗಳಲ್ಲಿಯೂ ಇರುವ ಅದ್ವಿತೀಯ ಆತ್ಮನನ್ನು ಅಥವ ಬ್ರಹ್ಮನನ್ನು ಬೇರೆ ಬೇರೆ ಜೀವಾತ್ಮರುಗಳು ಎಂದು ತಪ್ಪಾಗಿ ತಿಳಿಯದೆ ಎಲ್ಲರಲ್ಲಿಯು ಇರುವ ಆತ್ಮನನ್ನು ಸಮನಾಗಿ ಅಂದರೆ ನಿಜವಾದ ಒಬ್ಬನೇ ಆತ್ಮನನ್ನಾಗಿ, ಅಂದರೆ ನಿರ್ಗುಣಬ್ರಹ್ಮನನ್ನಾಗಿ ನೋಡುತ್ತಾನೆ ಅಥವ ಕಾಣುತ್ತಾನೆ. ಜ್ಞಾನಿಯು ಶಾಶ್ವತವಾದ ಅದ್ವಿತೀಯನಾದ ಆತ್ಮನನ್ನು (ಬ್ರಹ್ಮನನ್ನು) ಎಲ್ಲೆಲ್ಲಿಯೂ ಅಂದರೆ ಎಲ್ಲಾ ಪ್ರಾಣಿಗಳಲ್ಲಿಯೂ ಯಾವಾಗಲೂ ಒಂದೇ ಸಮನಾಗಿ ನೋಡುತ್ತಲೇ ಇರುವುದರಿಂದ ಅವನು ತನ್ನ ಮನಸ್ಸಿನಿಂದ ಅಥವ ಅಜ್ಞಾನದಿಂದ ತನ್ನ ಆತ್ಮನನ್ನು ಹಿಂಸಿಸುವುದಿಲ್ಲ ಅಥವ ಕೊಲ್ಲುವುದಿಲ್ಲ. ಅವನು ಮೇಲೆ ಹೇಳಿದ ರೀತಿಯಲ್ಲಿ ಅದ್ವಿತೀಯ ಆತ್ಮ ಅಥವ ಬ್ರಹ್ಮಸ್ವರೂಪವನ್ನು ಅರಿತಿರುವುದರಿಂದ ಅವನು ಪರಾಂಗತಿಯನ್ನು ಅಂದರೆ ಆತ್ಮಸಾಕ್ಷಾತ್ಕಾರವನ್ನು (ಬ್ರಹ್ಮಸಾಕ್ಷಾತ್ಕಾರವನ್ನು) ಹೊಂದುತ್ತಾನೆ.

## ಎರಡನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ಶ್ಲೋಕದಲ್ಲಿ "ಆತ್ಮನಾ–ಆತ್ಮಾನಂ" ಎಂಬ ಎರಡು ಪದಗಳಿಗೆ "ಆತ್ಮನಾ" ಎಂಬ ಪದಕ್ಕೆ "ಅಂತಃಕರಣ" ಎಂಬುದು ವಿಶಾಲವಾದ ಅರ್ಥ; ಮನಸ್ಸು ಎಂಬುದು ಸಂಕುಚಿತವಾದ ಅರ್ಥ; "ಆತ್ಮಾನಂ" ಎಂದರೆ ಒಬ್ಬ ಮನುಷ್ಯನ "ಜೀವಾತ್ಮ" ಎಂದು ಅರ್ಥ. "ಈಶ್ವರಂ" ಎಂದರೂ ಜೀವಾತ್ಮನು. ಆದುದರಿಂದ "ಸಮವಸ್ಥಿತಮೀಶ್ವರಂ" ಎಂದರೆ ಎಲ್ಲರಲ್ಲಿಯೂ ಸಮನಾಗಿರುವ ಈಶ್ವರನು ಎಂದು ಅರ್ಥವಾಗುತ್ತದೆ. ಅಂದರೇನು, ಪ್ರತಿಯೊಂದು ಪ್ರಾಣಿಯಲ್ಲಿಯೂ "ಜೀವಾತ್ಮನು" ಸಮನಾಗಿ ಇರುವನು ಎಂದು ಹೇಳಿದ ಹಾಗೆ ಆಯಿತು. ಹಾಗಾದರೆ ಒಂದು ಪ್ರಾಣಿಗೆ ಸಂಬಂಧಪಟ್ಟ ಜೀವಾತ್ಮನನ್ನು ಹೇಗೆ "ಈಶ್ವರ" ನೆಂದು ಹೇಳಬಹುದು? ದೇವ, ಮನುಷ್ಯ, ತಿರ್ಯಕ್ ಮುಂತಾದ ಪ್ರತಿಯೊಂದು ಶರೀರದಲ್ಲಿಯೂ ಇರುವ ಪ್ರತಿಯೊಂದು ಜೀವಾತ್ಮನು ತನ್ನ ಶರೀರಕ್ಕೆ ಆಧಾರವಾಗಿಯೂ, ಪತಿಯಾಗಿಯೂ, ಆಳುವವನಾಗಿಯೂ ಇರುವುದರಿಂದ ಆಯಾ ಶರೀರಕ್ಕೆ ಆಯಾ ಜೀವಾತ್ಮನು "ಈಶ್ವರ" ನಾಗಿರುವನು. ಆದುದರಿಂದ ಜೀವಾತ್ಮನನ್ನು ತನ್ನ ಶರೀರಕ್ಕೆ ಈಶ್ವರನೆಂದು ಕರೆಯಬಹುದು. "ಸರ್ವತ್ರ ಸಮಂಪಶ್ಯನ್" ಅಂದರೆ ಎಲ್ಲಾ ಪ್ರಾಣಿಗಳಲ್ಲಿರುವ ಜೀವಾತ್ಮರುಗಳೆಲ್ಲರನ್ನೂ ಜ್ಞಾನಿಯು ಸಮವಾಗಿ ನೋಡುವನು ಎಂದು ಅರ್ಥ. ಹಾಗಾದರೆ ಪ್ರತ್ಯಗಾತ್ಮನು ಅಥವ ಜೀವಾತ್ಮನು ಎಲ್ಲಾ ಪ್ರಾಣಿಗಳಲ್ಲೂ ಸಮವಾಗಿ ಅಥವ ಒಂದೇ ಆಗಿ ಹೇಗೆ ಇರಬಲ್ಲನು? ಎಲ್ಲಾ ಪ್ರಾಣಿಗಳಲ್ಲಿಯೂ ಇರುವ ಜೀವಾತ್ಮರುಗಳು ಅವರ ನಿಜ ಸ್ವರೂಪದಲ್ಲಿ ಅಂದರೆ ಅವರ **ಶುದ್ಧ ಪ್ರತ್ಯಗಾತ್ಮ** ಸ್ವರೂಪದಲ್ಲಿ ದೇವ, ಮನುಷ್ಯ, ತಿರ್ಯಕ್ ಮೊದಲಾದ ಬೇರೆ ಬೇರೆ ಆಕಾರದ ಶರೀರಗಳನ್ನು ಪಡೆಯದೆ, ಯಾವ ವಿಧವಾದ ಬೇಧವೂ ಇಲ್ಲದ ಒಂದೇ ಮಾದರಿಯಾದ "ಜ್ಞಾತೃತ್ವ" ಸ್ವರೂಪವನ್ನು ಅಂದರೆ ಜ್ಞಾನಾಕಾರತೆಯನ್ನು ಪಡೆದಿರುವರು. ಆದುದರಿಂದ ಒಂದು ಪ್ರಾಣಿಗೆ ಸಂಬಂಧಪಟ್ಟ ಜೀವಾತ್ಮನು ನಿಜಸ್ವರೂಪದಲ್ಲಿ ಇತರ ಪ್ರಾಣಿಗಳ ಜೀವಾತ್ಮರ ನಿಜಸ್ವರೂಪಕ್ಕೆ ಸಮನಾಗಿರುವನು.

ಬಹು ಮಂದಿ ಮನುಷ್ಯರು ತಮ್ಮನ್ನೂ ಇತರರನ್ನೂ ಹೇಗೆ ತಿಳಿದಿರುವರು? ತಾವೂ ಇತರರೂ ವಿಧವಿಧವಾದ ವ್ಯತ್ಯಾಸಗಳಿಂದ ಕೂಡಿರುವ ಬೇರೆ ಬೇರೆ ಶರೀರಗಳನ್ನು ಪಡೆದಿರುವ ಪ್ರತ್ಯೇಕ ವ್ಯಕ್ತಿಗಳೆಂದು ತಿಳಿದಿರುವರು. ಇಂಥಾವರಲ್ಲಿ ಪ್ರತಿಯೊಬ್ಬನೂ ತಾನೂ ತನ್ನ ಶರೀರಕ್ಕೆ ಈಶ್ವರನು ಅಂದರೆ ಅಧಿಪತಿ

ಅಥವ ನಿಯಾಮಕನು ಎಂದು ತಿಳಿದುಕೊಳ್ಳದೆ ಆ ಶರೀರಕ್ಕೂ, ಅದರ ನಿಯಮಗಳಿಗೂ ಬದ್ಧನು ಎಂದು ನಂಬಿ ಸ್ವಲ್ಪ ಸುಖಗಳನ್ನೂ ಹೆಚ್ಚು ದುಃಖಗಳನ್ನೂ ಅನುಭವಿಸುತ್ತಿರುವನು. ಇನ್ನೇನು, ಎಲ್ಲಾ ಶರೀರಗಳಲ್ಲಿಯೂ ಇರುವ ಜೀವಾತ್ಮರುಗಳು ನಿಜ ಸ್ವರೂಪದಲ್ಲಿ ತನ್ನ ನಿಜ ಸ್ವರೂಪಕ್ಕೆ ಸಮರು ಎಂದು ತಿಳಿದುಕೊಳ್ಳದೆ ದೇವ, ಮನುಷ್ಯ, ತಿರ್ಯಕ್ಕು ಮೊದಲಾದ ಶರೀರಗಳನ್ನು ಪಡೆದಿರುವ ಇತರ ವ್ಯಕ್ತಿಗಳು ತನಗಿಂತ ಬೇರೆಯೆಂದು ತಿಳಿದು, ನಂಬಿ ತನ್ನ ಸ್ವಾರ್ಥತೆಗಾಗಿಯೇ ಯಾವಾಗಲೂ ದುಡಿಯುತ್ತಾ, ಪರಾರ್ಥಕ್ಕಾಗಿ ಪ್ರಯತ್ನಪಡುವುದೇ ಇಲ್ಲ. ಅನೇಕ ವೇಳೆ ತನ್ನ ಸ್ವಾರ್ಥಸಾಧನೆಗಾಗಿ ಅವರಿಗೆ ಹಿಂಸೆಗಳನ್ನೂ ಕೊಡುವನು. ಇಂಥಾ ಮನುಷ್ಯನು ಅಜ್ಞಾನಿಯು ; ಅವಿದ್ಯಾಮೂಲವಾದ ಕರ್ಮಸಂಬಂಧಕ್ಕೆ ಸಿಕ್ಕಿಕೊಂಡಿರುವುದರಿಂದ ಇವನು ತನ್ನ ಮತ್ತು ಇತರರ ಜೀವಾತ್ಮರ ನಿಜಸ್ವರೂಪವನ್ನು ತಿಳಿದಿಲ್ಲ. ಆದುದರಿಂದಲೇ ಈ ಅಜ್ಞಾನಿಯು ಸ್ವಾರ್ಥಭಾವನೆಗಳನ್ನು ಪಡೆದಿರುವ ತನ್ನ ಮನಸ್ಸಿನಿಂದಲೇ ತನ್ನ ನಿಜವಾದ ಆತ್ಮಸ್ವರೂಪವನ್ನೂ, ಇತರ ಪ್ರಾಣಿಗಳ ಆತ್ಮ ಸ್ವರೂಪವನ್ನೂ ಹಿಂಸಿಸುತ್ತಾನೆ, ಕೆಡಿಸುತ್ತಾನೆ ಮತ್ತು ಕೊಲ್ಲುತ್ತಾನೆ. ಹೀಗೆ ತಪ್ಪು ತಿಳುವಳಿಕೆಯನ್ನು ಪಡೆದಿರುವವರೆಗೂ ಇವನು ಸಂಸಾರ ಚಕ್ರದಲ್ಲಿ ಸಿಕ್ಕಿಕೊಂಡು, ಪರಂಪರೆಯಾಗಿ ಹುಟ್ಟುಸಾವುಗಳನ್ನು ಪಡೆಯುತ್ತಾ, ಅಲ್ಪವಾದ ಸುಖದುಃಖಗಳನ್ನು ಅನುಭವಿಸುತ್ತಾ ಹೀನಸ್ಥಿತಿಯಲ್ಲಿರುವನು. ಈ ಅಜ್ಞಾನಿಯು ತನ್ನ ನಿಜವಾದ ಉತ್ತಮವಾದ ಶುದ್ಧಪ್ರತ್ಯಗಾತ್ಮಸ್ವರೂಪವನ್ನು ಸಾಕ್ಷಾತ್ಕಾರಮಾಡಲು ಯೋಗ್ಯನಲ್ಲ.

ಜ್ಞಾನಿಯು ತಾನು ತನ್ನ ನಿಜಸ್ವರೂಪದಲ್ಲಿ ತನ್ನ ಶರೀರಕ್ಕೆ ಈಶ್ವರನೆಂದೂ ಅಂದರೆ ಅದಕ್ಕೆ ಪತಿಯಾಗಿಯೂ, ಆಧಾರವಾಗಿಯೂ, ಆಳುವವನಾಗಿಯೂ ಇರುವವನೆಂದೂ ದೃಢವಾಗಿ ತಿಳಿದಿರುವನು. ಇಷ್ಟೇ ಅಲ್ಲ, ಅವನು ಎಲ್ಲಾ ಶರೀರಗಳಲ್ಲಿಯೂ ಇರುವ ಜೀವಾತ್ಮರೆಲ್ಲರೂ ಅವರವರ ಶರೀರಗಳಿಗೆ ಈಶ್ವರರೆಂದೂ ಮತ್ತು ಅವರೆಲ್ಲರೂ ತಮ್ಮತಮ್ಮ ಪರಿಶುದ್ಧ ಆತ್ಮಸ್ವರೂಪದಲ್ಲಿ ಅಥವಾ ಜ್ಞಾನಾಕಾರ ಸ್ವರೂಪದಲ್ಲಿ ಸಮರೆಂದೂ ತಿಳಿದಿರುವನು. ಅವನು ತನ್ನ ನಿಜಸ್ವರೂಪದಲ್ಲಿ ದೇವ, ಮನುಷ್ಯ, ತಿರ್ಯಕ್ ಮೊದಲಾದ ಶರೀರಗಳ ಆಕಾರಗಳನ್ನು ಪಡೆದಿಲ್ಲವೆಂದೂ, ಜ್ಞಾನಾಕಾರವಾಗಿ ಇರುತ್ತಾನೆಂದೂ ಸಂದೇಹವಿಲ್ಲದೆ ಅರಿತಿರುವನು. ಆದುದರಿಂದ ಅವನು ಈ ವಿಧವಾದ ತನ್ನ ಮನಸ್ಸಿನಿಂದಲೇ ತನ್ನ ಆತ್ಮನನ್ನು ಸಂಸಾರದಿಂದ ಉಜ್ಜೀವಿಸುವ ಹಾಗೆ ಮಾಡುತ್ತಾನೆ ; ಅಂದರೆ ಅವನು ಸಂಸಾರದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಜ್ಞಾನಿಯು ಎಂದಿಗೂ ತನ್ನ ಮನಸ್ಸಿನಿಂದ ತನ್ನ ಆತ್ಮನನ್ನು ಹಿಂಸಿಸುವುದಿಲ್ಲ, ಕೆಡಿಸುವುದಿಲ್ಲ ಅಥವ ನಾಶಮಾಡುವುದಿಲ್ಲ. ಹೀಗೆ ಎಲ್ಲೆಲ್ಲಿಯೂ, ಯಾವಾಗಲೂ ಜ್ಞಾನಿಗೆ ತಾನು ಶರೀರವಲ್ಲವೆಂದೂ, ಜ್ಞಾತಾ (ಅರಿಯುವವನು) ಎಂದೂ, ಒಂದೇ ರೂಪವಾಗಿ ಇರುವನೆಂದೂ ತೋರುವುದರಿಂದ ಅವನು ಉತ್ತಮ ಗತಿಯನ್ನು ಹೊಂದುತ್ತಾನೆ; ಅಂದರೆ ಅವನು ನಿಶ್ಚಯವಾದ ಆತ್ಮಸ್ವರೂಪದ ಸಾಕ್ಷಾತ್ಕಾರವನ್ನು ಶಾಶ್ವತವಾಗಿ ಪಡೆಯುತ್ತಾನೆ.

## ಮೂರನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ಶ್ಲೋಕದಲ್ಲಿರುವ " ಈಶ್ವರಂ–ಆತ್ಮಾನಾ–ಆತ್ಮಾನಂ " ಎಂಬ ಪದಗಳಿಗೆ ಅರ್ಥಗಳೇನು " ಈಶ್ವರಂ " ಎಂದರೆ ಪರಮಾತ್ಮನು ಅಥವ ಸಗುಣ ಬ್ರಹ್ಮನು ; " ಆತ್ಮಾನಾ " ಎಂದರೆ ತನ್ನ ಅಂತಃಕರಣದಿಂದ ಅಥವ ಮನಸ್ಸಿನಿಂದ ; " ಆತ್ಮಾನಂ "ಎಂದರೆ ತನ್ನನ್ನು. " ಸಮವಸ್ಥಿತಮೀಶ್ವರಮ್ " ಎಂದರೇನು ? ದೇವ, ಮನುಷ್ಯ, ತಿರ್ಯಕ್, ಸಸ್ಯ, ಸ್ಥಾವರ ಮೊದಲಾದ ಸಾತ್ವಿಕ, ರಾಜಸಿಕ, ತಾಮಸಿಕ ಸ್ವಭಾವಗಳನ್ನು ಪಡೆದಿರುವ ಪ್ರಾಣಿಗಳೆಲ್ಲರಲ್ಲಿಯೂ ಪರಮಾತ್ಮನು ಒಂದೇ ಸಮನಾಗಿ ಇದ್ದಾನೆ ಎಂದು ವೇದಶಾಸ್ತ್ರವು ತಿಳಿಸುತ್ತದೆ. " ಸರ್ವತ್ರಸಮಂ ಪಶ್ಯತಿ " ಎಂದರೇನು ? ಆಯಾ ಪ್ರಾಣಿಗಳ ಶರೀರಗಳಲ್ಲಿ ಎಷ್ಟೇ ದೋಷಗಳಿದ್ದಾಗ್ಯೂ ಅವುಗಳೊಳಗಿರುವ ಪರಮಾತ್ಮನು ಮಾತ್ರ ಅನಂತ ಕಲ್ಯಾಣಗುಣಗಳಿಂದ ಕೂಡಿರುವುದರಿಂದ ಅವನಲ್ಲಿ ಸ್ವಲ್ಪವೂ ಯಾವ ವಿಧವಾದ ದೋಷವೂ ಇರುವುದಿಲ್ಲವೆಂದು ತಿಳಿಯಬೇಕು.

ಅಜ್ಞಾನಿಗಳು ರಾಜಸಿಕ ಮತ್ತು ತಾಮಸಿಕ ಸ್ವಭಾವಗಳನ್ನು ಪಡೆದಿರುವ ಪ್ರಾಣಿಗಳೊಳಗೆ ಪರಮಾತ್ಮನು ಇಲ್ಲವೇ ಇಲ್ಲ ಎಂದು ಭಾವಿಸುತ್ತಾರೆ. ಹಾಗೆ ಅವನು ಅವುಗಳೊಳಗೆ ಇರುವನಾದರೆ ದೋಷಗಳಿಂದ ಕೂಡಿದ ಮೇಲು–ಕೀಳಿನ ಶರೀರಗಳಲ್ಲಿರುವ ದೋಷಗಳ ಸಂಪರ್ಕವು ಪರಮಾತ್ಮನಿಗೂ ಉಂಟಾಗುತ್ತದೆ ಎಂದು ಅವರು ಸಂದೇಹ ಪಡುತ್ತಾರೆ. ಹೀಗೆ ಪರಮಾತ್ಮನಲ್ಲಿ ದೋಷವನ್ನು ಆರೋಪಿಸುವ ಮನಸ್ಸನ್ನು ಪಡೆದಿರುವ ಅಜ್ಞಾನಿಗಳು ತಮ್ಮ ಮನಸ್ಸಿನಿಂದಲೇ ತಮ್ಮನ್ನು ಹಿಂಸಿಸುತ್ತಾರೆ ಅಥವ ನಾಶಪಡಿಸುತ್ತಾರೆ ; ಏಕೆಂದರೆ ಯಾವನು ಪರಮಾತ್ಮನು ಎಲ್ಲಾ ಪ್ರಾಣಿಗಳಲ್ಲಿಯೂ ಇರುವುದಿಲ್ಲ ಮತ್ತು ಅವನು ಇದ್ದರೆ ದೋಷದಿಂದ ಕೂಡಿದ್ದಾನೆ ಎಂದು ಭಾವಿಸುತ್ತಾನೋ ಅವನು ನರಕಕ್ಕೆ ಹೋಗುತ್ತಾನೆ.

Re-printed from Mysore Vysya Patrika April 1960)

# ಭಗವದ್ಗೀತಾ ಅಧ್ಯಾಯ ೧೩. ಪಾಠ ೭

ಜ್ಞಾನಿಗಳು ಮಾತ್ರ ತಾಮಸಿಕ, ರಾಜಸಿಕ ಮತ್ತು ಸಾತ್ವಿಕ ಸ್ವಭಾವಗಳನ್ನು ಪಡೆದಿರುವ ಎಲ್ಲಾ ಪ್ರಾಣಿಗಳಲ್ಲಿಯೂ ಒಂದನ್ನೂ ಬಿಡದೆ ಪರಮಾತ್ಮನು ಒಂದೇ ಸಮನಾಗಿ ಇರುವನೆಂದೂ, ಈ ಅದ್ವಿತೀಯ ಪರಮಾತ್ಮನಿಗೆ ಆಯಾ ಪ್ರಾಣಿಗಳ ಶರೀರ ಸಂಪರ್ಕಗಳಿಂದ ಯಾವ ವಿಧವಾದ ದೋಷಗಳೂ ಉಂಟಾಗುವುದಿಲ್ಲವೆಂದೂ ಮತ್ತು ಪರಮಾತ್ಮನು ಅನಂತ ಕಲ್ಯಾಣಗುಣಗಳನ್ನು ಪಡೆದಿರುವನೆಂದೂ ಸಂದೇಹರಹಿತರಾಗಿ ತಿಳಿದಿರುವರು. ಇಂಥಾ ಪವಿತ್ರವಾದ ಮನಸ್ಸನ್ನು ಪಡೆದಿರುವ ಜ್ಞಾನಿಯು ತನ್ನ ಅಂತಃಕರಣದಿಂದ ಅಥವ ಬುದ್ಧಿಯಿಂದ ತನ್ನನ್ನು ಹಿಂಸಿಸುವುದಿಲ್ಲ ಅಥವ ನಾಶಮಾಡಿಕೊಳ್ಳುವುದಿಲ್ಲ; ಏಕೆಂದರೆ ಕೆಟ್ಟಬುದ್ಧಿಯಿಲ್ಲದೆ ಪರಮಾತ್ಮನ ವಿಚಾರದಲ್ಲಿ ನಿಜವಾದ ಜ್ಞಾನವನ್ನು ಪಡೆದಿರುವ ಜ್ಞಾನಿಯು ಎಂದಿಗೂ ನರಕವಾಸವೆಂಬ ಹೀನಸ್ಥಿತಿಯನ್ನು ಪಡೆಯುವುದಿಲ್ಲ. ಇನ್ನೇನು, ಅವನು ಪರಮಾತ್ಮನ ದೋಷರಹಿತವಾದ ಕಲ್ಯಾಣ ಗುಣಗಳನ್ನು ತಿಳಿದು, ಅನುಭವಿಸಿ, ಯಾವಾಗಲೂ ಸ್ಮರಿಸುತ್ತಾ ಸರ್ವೋತ್ತಮವಾದ, ಪವಿತ್ರವಾದ, ಸಂಸಾರವನ್ನು ಬಿಡಿಸುವ ಸ್ಥಾನವನ್ನು ಅಥವ ಸ್ಥಿತಿಯನ್ನು ಅಥವ ಅವಸ್ಥೆಯನ್ನು ಅಥವ ಗತಿಯನ್ನು ಪಡೆಯುತ್ತಾನೆ. (ಹಿ) ಇದರಲ್ಲಿ ಯಾವ ಸಂದೇಹವೂ ಇಲ್ಲ ಎಂಬುದು ನಮಗೆ ಶಾಸ್ತ್ರದಿಂದ ತಿಳಿದು ಬರುತ್ತದೆಯಲ್ಲವೆ?

### ಗಮನಿಸಬೇಕಾದ ವಿಷಯ

ಪ್ರತಿಯೊಬ್ಬ ಮನುಷ್ಯನಲ್ಲಿಯೂ, ಏಕೆ ಪ್ರತಿಯೊಂದು ಪ್ರಾಣಿಯಲ್ಲಿಯೂ ಶರೀರ ಮತ್ತು ಅಂತಃಕರಣ ಎಂಬ ಎರಡು ತತ್ವಗಳಲ್ಲದೆ ಚೈತನ್ಯ ಅಥವ ಜ್ಞಾನ ಎಂಬ ಮೂರನೆಯ ತತ್ವವು ಪ್ರತ್ಯೇಕವಾಗಿ ಒಳಗೆ ಇದೆ ಎಂದು ಹಿಂದಿನ ಶ್ಲೋಕದಲ್ಲಿ ತಿಳಿಸಿದೆ. ಈ ಮೂರನೆಯ ತತ್ವವು ನಿರ್ಗುಣಬ್ರಹ್ಮನಾಗಿರಬಹುದು ಅಥವ ಶುದ್ಧ ಪ್ರತ್ಯಗಾತ್ಮನಾಗಿರಬಹುದು ಅಥವ ಸಗುಣಬ್ರಹ್ಮನಾಗಿರಬಹುದು. ಚೈತನ್ಯದ ಸ್ವರೂಪವು ಯಾವುದೇ ಆಗಿರಲಿ ಅದು ಪ್ರತಿಯೊಂದು ಪ್ರಾಣಿಯಲ್ಲಿಯೂ ಹೆಚ್ಚುಕಮ್ಮಿ ಇಲ್ಲದೆ ಸಮನಾಗಿಯೇ ಇರುವುದು. ಯಾವನು ಈ ಚೈತನ್ಯ ಸ್ವರೂಪವು ತನ್ನಲ್ಲಿಯೂ ಮತ್ತು ಸರ್ವಪ್ರಾಣಿಗಳಲ್ಲಿಯೂ ಒಂದೇ ರೀತಿಯಲ್ಲಿರುತ್ತಾ, ಅವುಗಳ ಶರೀರಗಳಿಗೆ ಧಾರಕ, ಪೋಷಕ, ನಿಯಾಮಕನಾದ ಈಶ್ವರನಾಗಿರುವನೆಂದೂ ಮತ್ತು ಎಲ್ಲಾ ಪ್ರಾಣಿಗಳಲ್ಲಿರುವ ಚೈತನ್ಯಸ್ವರೂಪವು ಒಂದೇ ಸಮನಾಗಿರುವುದೆಂದೂ ದೃಢವಾಗಿ ತಿಳಿದಿರುತ್ತಾನೆಯೋ ಅವನು ಜ್ಞಾನಿಯು. ಅವನು ಆತ್ಮದ ನಿಜಸ್ವರೂಪವನ್ನು ತಿಳಿದಿರುವುದರಿಂದ, ತನ್ನ ಮತ್ತು ಇತರರ ಶರೀರಗಳು ಬೇರೆಬೇರೆಯಾಗಿದ್ದಾಗ್ಯೂ, ಎಲ್ಲಾ ಪ್ರಾಣಿಗಳು ತನಗೆ ಸಮಾನರು ಅಥವ ತಾನೇ ಎಂದು ಭಾವಿಸುತ್ತಾ, ಸ್ವಾರ್ಥಭಾವನೆಗಳನ್ನು ನಿರ್ಮೂಲ ಮಾಡಿ ನಿತ್ಯಜೀವನದಲ್ಲಿ ತನ್ನ ಕುಟುಂಬ, ಹಳ್ಳಿ, ಪಟ್ಟಣ, ದೇಶ, ಲೋಕದ ಜನರೆಲ್ಲರಿಗೂ ಪರೋಪಕಾರಗಳನ್ನು ಮಾಡುತ್ತಲೇ ಇರುವನು. ಇಂಥಾ ಜ್ಞಾನಿಯು ತನ್ನ ಮತ್ತು ಇತರರ ನಿಜ ಆತ್ಮಸ್ವರೂಪವನ್ನು ಎಂದಿಗೂ ಮರೆಯುವುದಿಲ್ಲ. ಆದುದರಿಂದ ಅವನು ತನ್ನ ಮನಸ್ಸಿನಿಂದ ತನ್ನೊಡನೆ ಸಂಪರ್ಕವನ್ನು ಪಡೆದಿರುವ ಆತ್ಮನನ್ನು ಹಿಂಸಿಸುವುದಿಲ್ಲ, ಹೀನಸ್ಥಿತಿಗೆ ತರುವುದಿಲ್ಲ ಅಥವ ನಾಶ ಮಾಡುವುದಿಲ್ಲ. ಈ ಜ್ಞಾನಿಯು ಪರಾಂಗತಿಯನ್ನು ಅಥವ ಶ್ರೇಯಸ್ಸನ್ನು ಅಥವ ಈ ಜನ್ಮದಲ್ಲಿಯೇ ಪರಿಪೂರ್ಣಾವಸ್ಥೆಯನ್ನು ಪಡೆಯುವನು. ಆದರೆ ಸಾಧಾರಣವಾದ ಮನುಷ್ಯರು ತಮ್ಮಲ್ಲಿ ಆತ್ಮಸ್ವರೂಪವು ಅಡಗಿದೆ, ಅದು ಈಶ್ವರನು, ಎಲ್ಲರಲ್ಲಿಯೂ ಆತ್ಮಸ್ವರೂಪವು ಸಮನಾಗಿದೆ ಎಂಬೀ ತತ್ವಗಳನ್ನು ನಂಬದೆ, ತಾವು ಶರೀರಗಳು ಮಾತ್ರವೆಂದೂ ಮತ್ತು ಮನುಷ್ಯಮನುಷ್ಯರಿಗೆ ಭೇದವಿದೆಯೆಂದೂ ತಿಳಿದು, ಪರಾರ್ಥಭಾವನೆಯನ್ನು ಪಡೆಯದೆ, ಸ್ವಾರ್ಥತೆಯನ್ನೇ ನಿತ್ಯಜೀವನದಲ್ಲ ಕೈಗೊಂಡು ತಮ್ಮ ಆತ್ಮಸ್ವರೂಪವನ್ನು ಹಿಂಸಿಸುತ್ತಾರೆ ಅಥವ ಕೊಲ್ಲುತ್ತಾರೆ.

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ||೨೯||**

ಈ ಶ್ಲೋಕದಲ್ಲಿರುವ ಸಾಮಾನ್ಯ ಅರ್ಥಗಳು ಹೀಗಿವೆ:

(1) ಸರ್ವಶಃ ಕರ್ಮಾಣಿ ಪ್ರಕೃತ್ಯೈವ ಕ್ರಿಯಾಮಾಣಾನಿ ಯಃ ಪಶ್ಯತಿ=ಸರ್ವಪ್ರಕಾರದಲ್ಲಿಯೂ ಮಾಡಲ್ಪಡುವ ಕರ್ಮಗಳು ಪ್ರಕೃತಿಯಿಂದಲೇ ಮಾಡಲ್ಪಡುತ್ತವೆ ಎಂದು ಯಾವನು ನೋಡುತ್ತಾನೋ ಅಥವ ತಿಳಿದುಕೊಳ್ಳುತ್ತಾನೋ ಅಥವ ಅನುಸಂಧಾನ ಮಾಡುತ್ತಾನೋ

(2) ಚ ತಥಾ ಆತ್ಮಾನಂ ಅಕರ್ತಾರಂ (ಯಃ ಪಶ್ಯತಿ) = ಮತ್ತು ಹಾಗೆಯೇ ಆತ್ಮನಾದ ತನ್ನನ್ನು ಕರ್ತನಲ್ಲವೆಂದು ಯಾವನು ನೋಡುತ್ತಾನೋ, ಅಥವ ತಿಳಿದುಕೊಳ್ಳುತಾನೋ ಅಥವ ಅನುಸಂಧಾನ ಮಾಡುತ್ತಾನೋ

(3) ಸಃ ಪಶ್ಯತಿ = ಆ ಜ್ಞಾನಿಯು ಪ್ರಕೃತಿ, ಆತ್ಮ, ಕರ್ಮ, ಕರ್ತ ಇವುಗಳ ನಿಜಸ್ವರೂಪವನ್ನು ಸಾಕ್ಷಾತ್ಕರಿಸುತ್ತಾನೆ.

ಈ ಶ್ಲೋಕದ ತಾತ್ಪರ್ಯದಲ್ಲಿಯೂ ಅಭಿಪ್ರಾಯ ಬೇಧಗಳಿವೆ.

## ಮೊದಲನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ಶ್ಲೋಕದಲ್ಲಿರುವ "ಪ್ರಕೃತಿ" ಎಂಬ ಪದಕ್ಕೆ ಪ್ರಪಂಚದಲ್ಲಿರುವ ವಿವಿಧ ಚರಾಚರ ಪದಾರ್ಥಗಳನ್ನು ಉಂಟುಮಾಡುವ ಅಥವ ತೋರಿಸುವ ಭಗವಂತನ ತ್ರಿಗುಣಾತ್ಮಕವಾದ ಮಾಯಾ ಶಕ್ತಿಯೆಂದು ಅರ್ಥ "ಆತ್ಮಾನಂ" ಎಂಬ ಪದಕ್ಕೆ ಪ್ರತಿಯೊಬ್ಬನಲ್ಲಿಯೂ ಅಂತರಾತ್ಮನಾಗಿರುವ "ಅದ್ವಿತೀಯ ನಿರ್ಗುಣಬ್ರಹ್ಮ" ಎಂದು ಅರ್ಥ. ಪ್ರಕೃತಿಯ ವಿಕಾರಗಳಾದ ಮಹತ್ತು, ಅಹಂಕಾರ, ಮನಸ್ಸು, ಇಂದ್ರಿಯಗಳು, ತನ್ಮಾತ್ರೆಗಳು, ಭೂತಗಳು ಇವುಗಳ ಭಾಗಗಳ ಸಂಯೋಗದಿಂದ ಉಂಟಾಗಿರುವ ಮನುಷ್ಯ ಶರೀರದಲ್ಲಿ ನಡೆಯುತ್ತಿರುವ ಎಲ್ಲಾ ವಿಧಗಳಾದ ಕರ್ಮಗಳೂ ಪ್ರಕೃತಿಯಿಂದಲೇ ಅಂದರೆ ಭಗವಂತನ ತ್ರಿಗುಣಾತ್ಮಕವಾದ ಮಾಯೆಯಿಂದಲೇ ಮಾಡಲ್ಪಡುತ್ತವೆ ಎಂದು ಯಾವ ವಿವೇಕಿಯು ತಿಳಿಯುತ್ತಾನೆಯೋ ಅವನು ಜ್ಞಾನಿಯು. ಮನುಷ್ಯನು ಅಜ್ಞಾನದಿಂದ ಆತ್ಮನಾದ ತಾನು ಕರ್ಮಗಳನ್ನು ಮಾಡುತ್ತಿರುವುದಾಗಿ ತಪ್ಪು ತಿಳುವಳಿಕೆಯನ್ನು ಪಡೆದಿರುತ್ತಾನೆ. ಆದರೆ ಜ್ಞಾನಿಯು ಮಾತ್ರ ಆತ್ಮನಾದ ತಾನು ಉಪಾಧಿರಹಿತನಾದ ನಿರ್ಗುಣಬ್ರಹ್ಮನು ಎಂದೂ, ಆತ್ಮನು ಕರ್ಮಗಳಿಗೆ ಕರ್ತನಲ್ಲವೆಂದೂ ನೋಡುವನು ಅಥವ ದಢ್ಯವಾಗಿ ತಿಳಿದಿರುವನು. ಯಾವನು ಆಶೆಗಳನ್ನು ಪಡೆದಿರುವನೋ ಅವನು ಕರ್ಮಗಳನ್ನು ಮಾಡುತ್ತಾನೆ; ಆದರೆ ಆತ್ಮನು ಆಶಾರಹಿತನಾಗಿ ಪರಿಪೂರ್ಣನಾಗಿರುವುದರಿಂದ ಅವನು ಯಾವ ವಿಧವಾದ ಕರ್ಮಗಳನ್ನೂ ಮಾಡುವುದಿಲ್ಲ. ಹೀಗೆ ಯಾವ ಜ್ಞಾನಿಯು (ಶರೀರಾದಿಗಳಿಗೆ ಕಾರಣವಾದ ಮೂರು ಗುಣಗಳನ್ನು ಪಡೆದಿರುವ ಮಾಯಾ ಶಕ್ತಿಯಿಂದಲೇ ಎಲ್ಲಾ ಕರ್ಮಗಳೂ ಉಂಟಾಗುತ್ತವೆಯೆಂದೂ ಮತ್ತು ತನ್ನ ನಿಜಸ್ವರೂಪವಾದ ನಿರ್ಗುಣ ಬ್ರಹ್ಮವು ಯಾವ ಕರ್ಮಗಳನ್ನೂ ಮಾಡುವುದಿಲ್ಲವೆಂದೂ ನೋಡುತ್ತಾನೆಯೋ ಅಥವ ದೃಢವಾಗಿ ತಿಳಿಯುತ್ತಾನೆಯೋ ಅವನು ಮಾಯಾಶಕ್ತಿಯ ಸ್ವರೂಪವನ್ನೂ ಮತ್ತು ತಾನೇ ಆದ ನಿರ್ಗುಣಬ್ರಹ್ಮಸ್ವರೂಪವನ್ನೂ ನಿಜಸ್ವರೂಪದಲ್ಲಿ (ತಪ್ಪುತಿಳುವಳಿಕೆ ಇಲ್ಲದೆ) ಇರುವ ಹಾಗೆ ನೋಡುತ್ತಾನೆ. ಯಾವನು ಈ ರೀತಿಯಲ್ಲಿ ತಿಳಿಯುತ್ತಾನೆಯೋ ಅವನು ಸತ್ಯವನ್ನು ಸಾಕ್ಷಾತ್ಕರಿಸುವ ಜ್ಞಾನಿಯು.

## ಎರಡನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಈ ಶ್ಲೋಕದಲ್ಲರುವ "ಪ್ರಕೃತಿ" ಎಂಬ ಪದಕ್ಕೆ ಮೂಲ ಪ್ರಕೃತಿಯೆಂದೂ. "ಆತ್ಮಾನಂ" ಎಂಬ ಪದಕ್ಕೆ ಶುದ್ಧಪ್ರತ್ಯಗಾತ್ಮನು ಎಂದು ಅರ್ಥಮಾಡಿದ್ದಾರೆ. ಜೀವಾತ್ಮನಿಗೆ ಬದ್ಧ ಅವಸ್ಥೆ ಎಂದೂ ಮುಕ್ತ ಅವಸ್ಥೆ ಎಂದೂ ಎರಡು ಅವಸ್ಥೆಗಳಿವೆ. ಬದ್ಧದೆಶೆಯಲ್ಲಿ ಜೀವಾತ್ಮನು ಶರೀರ ಬಂಧನಕ್ಕೆ ಒಳಪಟ್ಟ ಮನುಷ್ಯನಾಗಿ ಎಲ್ಲಾ ವಿಧಗಳಾದ ಕರ್ಮಗಳನ್ನು ಮಾಡುತ್ತಾನೆ. ಆದರೆ ತನ್ನ ಮುಕ್ತದೆಶೆಯಲ್ಲಿ ಅಂದರೆ ನಿಜಸ್ವರೂಪದಲ್ಲಿ ಪ್ರಕೃತಿ ಅಥವ ಶರೀರಬಂಧನದಿಂದ ಬಿಡಲ್ಪಟ್ಟವನಾಗಿ ಕೇವಲ ಶುದ್ಧ ಜ್ಞಾನಾಕಾರಸ್ವರೂಪವನ್ನು ಪಡೆದಿರುವನು. ಈ ತತ್ವವನ್ನು ತಿಳಿದ ಜ್ಞಾನಿಯು ಹೀಗೆ ಅನುಸಂಧಾನ ಮಾಡುತ್ತಲೇ ಇರುವನು. "ನಾನು ಈಗ ಪ್ರಕೃತಿಯಭಾಗವಾದ ಶರೀರದಮೂಲಕ ಮಾಡುತ್ತಿರುವ ಎಲ್ಲಾ ವಿಧಗಳಾದ ಕರ್ಮಗಳು ಶರೀರಕ್ಕೆ ಕಾರಣವಾದ ಪ್ರಕೃತಿಯಿಂದಲೇ ಮಾಡಲ್ಪಡುತ್ತವೆ. ಕೇವಲ ಜ್ಞಾನಾಕಾರನಾದ, ಶುದ್ಧ ಆತ್ಮನಾದ ನಾನು ನನ್ನ ನಿಜಸ್ವರೂಪದಲ್ಲಿ ಶರೀರವನ್ನು ಪಡೆದಿಲ್ಲದುದರಿಂದ ನಾನು ಯಾವ ಕರ್ಮಗಳನ್ನೂ ಮಾಡುವುದೂ ಇಲ್ಲ ಮತ್ತು ಅವುಗಳನ್ನು ಮಾಡಲು ಅವಶ್ಯಕತೆಯೂ ಇರುವುದಿಲ್ಲ. ಆದರೆ ನನಗೆ ಕರ್ಮದಿಂದ ಉಂಟಾದ ಅಜ್ಞಾನದಿಂದ ಪ್ರಕೃತಿಯ ಭಾಗವಾದ ಶರೀರ ಸಂಬಂಧ ಉಂಟಾಗಿದೆ; ಈ ಬದ್ಧದೆಶೆಯಲ್ಲಿ ನನಗೆ ಶರೀರವೆಂಬ ಕ್ಷೇತ್ರವು, ವಾಸಮಾಡಲು ಆಶ್ರಯವಾಗಿದೆ ಮತ್ತು ಈ ಶರೀರದಿಂದ ಮಾಡಲ್ಪಡುವ ಎಲ್ಲಾ ಕರ್ಮಗಳಿಂದ ಉಂಟಾಗುವ ಸುಖದುಃಖಗಳೆಲ್ಲವನ್ನೂ ನಾನು ಪ್ರಾರಬ್ಧಕರ್ಮ ರೂಪವಾದ ಅಜ್ಞಾನದಿಂದಲೇ ಅನುಭವಿಸುತ್ತಿರುವೆನು. ನನ್ನ ನಿಜವಾದ ಜ್ಞಾನಾಕಾರವಾದ ಆತ್ಮಸ್ವರೂಪದಲ್ಲಿ ನನಗೆ ಈ ಸುಖದುಃಖಗಳು

ಅನುಭವವು ಸ್ವಲ್ಪವೂ ಇರುವುದಿಲ್ಲ. ನಾನು ಆಗ ನಿಕತಿಶಯ ವಾದ ಆತ್ಮಾನಂದವನ್ನು ಪಡೆಯುತ್ತೇನೆ. ಎಲ್ಲಾ ಜೀವಾತ್ಮರುಗಳೂ ತಮ್ಮ ಜ್ಞಾನಾಕಾರವಾದ ನಿಜಸ್ವರೂಪದಲ್ಲಿ ಸಮರು; ಆದರೆ ಅವರು ಬದ್ಧದೆಶೆಯಲ್ಲಿ ವಿಧ ವಿಧಗಳಾದ ಶರೀರಗಳನ್ನೂ ಪಡೆದು ಅವುಗಳ ಮೂಲಕ ವಿಧ ವಿಧಗಳಾದ ಕರ್ಮಗಳನ್ನು ಮಾಡುತ್ತಾ, ವಿಧ ವಿಧಗಳಾದ ಸುಖದುಃಖಗಳನ್ನು ಅನುಭವಿಸುತ್ತಾ ಬೇರೆ ಬೇರೆಯಾಗಿಯೇ ಇರುವ ಹಾಗೆ ಅಜ್ಞಾನದಿಂದ ತಿಳಿಯುವರು". ಯಾವನು ವಿವೇಕಿಸಿ ಹೀಗೆ ತಿಳಿಯುತ್ತಾನೆಯೋ ಅವನು ಆತ್ಮನಾದ ತನ್ನನ್ನು ಅಂದರೆ ತನ್ನ ಯಥಾವತ್ತಾಗಿರುವ ನಿಜಸ್ವರೂಪವನ್ನು ತಿಳಿಯುವನು ಅಥವ ಸಾಕ್ಷಾತ್ಕರಿಸುವನು.

### ಮೂರನೆ ಅಭಿಪ್ರಾಯದ ಪ್ರಕಾರ ತಾತ್ಪರ್ಯ.

ಮನುಷ್ಯನು ಮಾಡುವ ಎಲ್ಲಾ ವಿಧವಾದ ಕರ್ಮಗಳಿಗೆ ಜೀವಾತ್ಮನು ಕರ್ತನೇ ಅಥವ ಪರಮಾತ್ಮನು ಕರ್ತನೇ ಎಂಬ ಸಂದೇಹವನ್ನು ಈ ಶ್ಲೋಕವು ಪರಿಹರಿಸುತ್ತದೆ. ಈ ಶ್ಲೋಕದಲ್ಲಿರುವ "ಪ್ರಕೃತ್ಯೈವ-ಚ" ಎಂಬ ಎರಡು ಪದಗಳಲ್ಲಿ 'ಚ' ಎಂಬ ಪದಕ್ಕೆ 'ಪರಮಾತ್ಮನು' ಎಂದು ಅರ್ಥ. ಆದುದರಿಂದ "ಪ್ರಕೃತ್ಯೈವ ಚ ಕರ್ಮಾಣಿ ಸರ್ವಶಃ ಕ್ರಿಯಮಾಣಾನಿ" ಎಂಬ ವಾಕ್ಯಕ್ಕೆ ಈಶ್ವರನಿಂದ ಪೂರ್ವಕರ್ಮಾನುಸಾರವಾಗಿ ಪ್ರಕೃತಿಯ ಭಾಗವಾದ ಶರೀರದ ಮೂಲಕ ಸಮಸ್ತ ಕರ್ಮಗಳು ಮಾಡಲ್ಪಡುತ್ತವೆ ಎಂದು ಅರ್ಥವಾಗುತ್ತದೆ. ಯಾವನು ಈಶ್ವರನು ಮನುಷ್ಯನ ಕರ್ಮಗಳನ್ನು ಅವನ ಪೂರ್ವ ಕರ್ಮಾನುಸಾರವಾಗಿ ಮಾಡಿಸುತ್ತಾನೆ ಮತ್ತು ಅವನಿಗೆ ಫಲವನ್ನು ಕೊಡುತ್ತಾನೆ ಎಂದು ತಿಳಿಯುತ್ತಾನೆಯೋ ಅವನು ಜ್ಞಾನಿಯು. ಇನ್ನೇನು, ಮನುಷ್ಯನು ಮಾಡುವ ಕರ್ಮಗಳಿಗೆ ಜೀವಾತ್ಮನು ಸ್ವತಂತ್ರಕರ್ತನು ಅಲ್ಲವೆಂದು ಜ್ಞಾನಿಯು ತಿಳಿಯುತ್ತಾನೆ. ಈ ರೀತಿಯಲ್ಲಿ ಜ್ಞಾನಿಯು ಈಶ್ವರನೇ ನಿಜವಾದ ಕರ್ತೃವು, ಜೀವಾತ್ಮನು ಸ್ವತಂತ್ರಕರ್ತನಲ್ಲ ಮತ್ತು ಈಶ್ವರನು ಅವರವರ ಕರ್ಮಾನುಸಾರವಾಗಿ ಕರ್ಮಫಲಗಳನ್ನು ಕೊಡುವುದರಿಂದ ಅವನಿಗೆ ಒಬ್ಬರನ್ನು ಪ್ರೀತಿಸುತ್ತಾನೆ ಇನ್ನೊಬ್ಬರನ್ನು ದ್ವೇಷಿಸುತ್ತಾನೆ ಎಂಬ ದೋಷಗಳು ಬರುವುದಿಲ್ಲ ಎಂದು ದೃಢವಾಗಿ ತಿಳಿದು ನಂಬಿರುವುದರಿಂದ ಅವನು ಪರಮಾತ್ಮನ ಸ್ವರೂಪವನ್ನೂ, ಜೀವಾತ್ಮನ ಸ್ವರೂಪವನ್ನೂ ಮತ್ತು ಕರ್ಮದ ಸ್ವರೂಪವನ್ನೂ ಚೆನ್ನಾಗಿ ತಿಳಿದು ಪರಮಾತ್ಮನನ್ನು ಸಾಕ್ಷಾತ್ಕರಿಸುವ ಶ್ರೇಯಸ್ಸನ್ನು ಪಡೆಯುತ್ತಾನೆ.

### ಗಮನಿಸಬೇಕಾದ ವಿಷಯ.

ಮನುಷ್ಯನ ಅಂತರಾತ್ಮನು ನಿರ್ಗುಣಬ್ರಹ್ಮನಾಗಿರಬಹುದು ಅಥವ ಶುದ್ಧಪ್ರತ್ಯಗಾತ್ಮನಾಗಿರಬಹುದು ಅಥವ ಸಗುಣಬ್ರಹ್ಮನಾಗಿರಬಹುದು. ಆದರೆ ಮನುಷ್ಯನು ಮಾಡುವ ಕರ್ಮಗಳಿಗೆ ಜೀವಾತ್ಮನು ಮಾತ್ರ ಸ್ವತಂತ್ರ ಕರ್ತನಲ್ಲ ಎಂದು ಎಲ್ಲರೂ ಒಪ್ಪುತ್ತಾರೆ. ಅವಿದ್ಯಾಕಲ್ಪಿತವಾದ ಪ್ರಕೃತಿ ಎಂಬ ಈಶ್ವರನ ಮಾಯಾಶಕ್ತಿಯಿಂದ ಕರ್ಮಗಳೆಲ್ಲವೂ ಮಾಡಲ್ಪಡುತ್ತವೆ ಎಂದು ಕೆಲವರು ಹೇಳುತ್ತಾರೆ; ಬದ್ಧದೆಶೆಯಲ್ಲಿ ಅಜ್ಞಾನದಿಂದ ಶುದ್ಧಪ್ರತ್ಯಗಾತ್ಮನು ತಾನು ಕರ್ಮಗಳನ್ನು ಮಾಡುವುದಾಗಿ ತಪ್ಪಾಗಿ ತಿಳಿಯುತ್ತಾನೆ ಎಂದು ಇನ್ನು ಕೆಲವರು ಹೇಳುತ್ತಾರೆ; ಪರಮಾತ್ಮನೇ ನಿಜವಾದ ಕರ್ತೃವಾಗಿ ಅವರವರ ಪೂರ್ವ ಕರ್ಮಾನುಸಾರವಾಗಿ, ಅವರವರ ದೇಹಗಳ ಮೂಲಕ ಕರ್ಮಗಳನ್ನು ಮಾಡಿಸುತ್ತಾನೆ ಎಂದು ಮತ್ತೆ ಕೆಲವರು ಹೇಳುತ್ತಾರೆ. ಹೀಗೆ ಪ್ರಕೃತಿ, ಶರೀರ, ಜೀವಾತ್ಮ, ಶುದ್ಧಪ್ರತ್ಯಗಾತ್ಮ, ಪರಮಾತ್ಮ, ನಿರ್ಗುಣಬ್ರಹ್ಮ ಇವರುಗಳಿಗೂ ಕರ್ಮಗಳಿಗೂ ಇರುವ ನಿಜವಾದ ಸಂಬಂಧಗಳನ್ನು ಯಾವನು ವಿವೇಕದಿಂದ ತಿಳಿಯುತ್ತಾನೆಯೋ ಅವನೇ ಜ್ಞಾನಿಯು; ಅವನು ಖಂಡಿತವಾಗಿಯೂ ಸತ್ಯಸ್ವರೂಪದ ಸಾಕ್ಷಾತ್ಕಾರವನ್ನು ಕ್ರಮೇಣ ಪಡೆಯುತ್ತಾನೆ.

ಯದಾ ಭೂತ ಪೃಥಗ್ಭಾವಮೇಕಸ್ಥ ಮನುಪಶ್ಯತಿ ।
ತತ ಏವ ಚ ವಿಸ್ತಾರಂ ಬ್ರಹ್ಮಸಂಪದ್ಯತೇ ತದಾ ॥೩೦॥

ಈ ಶ್ಲೋಕದಲ್ಲಿರುವ ವಾಕ್ಯಗಳ ಅರ್ಥವು ಹೀಗಿದೆ:

(1) ಯದಾ ಭೂತ ಪೃಥಗ್ಭಾವಂ ಏಕಸ್ಥಂ ಅನು ಪಶ್ಯತಿ=ಯಾವಾಗ (ಯಾವಕಾಲದಲ್ಲಿ) ಭೂತಗಳ ಬೇರೆಬೇರೆಯಾದ ಬೇಧಗಳನ್ನು ಒಬ್ಬನಲ್ಲಿ ಅಥವ ಒಂದರಲ್ಲಿ ಇರುವುದಾಗಿ ತಿಳಿದುಕೊಳ್ಳುತ್ತಾನೋ,

(2) ಚ ತತ ಏವಂ ವಿಸ್ತಾರಂ ಅನು ಪಶ್ಯತಿ=ಮತ್ತು ಅದರಿಂದಲೇ ವಿಸ್ತಾರವಾಗಿರುವುದನ್ನು ಅಥವ ಉತ್ಪತ್ತಿಯಾಗುವುದನ್ನೂ ತಿಳಿಯುತ್ತಾನೆಯೋ,

(3) ತದಾ ಬ್ರಹ್ಮಸಂಪದ್ಯತೇ=ಆಗ (ಆ ಕಾಲದಲ್ಲಿ) ಬ್ರಹ್ಮವನ್ನು ಸೇರಿಕೊಳ್ಳುತ್ತಾನೆ ಅಥವ ಹೊಂದುತ್ತಾನೆ.

ಆಚಾರ್ಯರುಗಳು "ಏಕಸ್ಥಂ" ಮತ್ತು "ಬ್ರಹ್ಮ" ಎಂಬ ಪದಗಳಿಗೆ ಬೇರೆಬೇರೆ ಅರ್ಥಗಳನ್ನು ಮಾಡಿರುವುದರಿಂದ ಈ ಶ್ಲೋಕದ ತಾತ್ಪರ್ಯದಲ್ಲಿಯೂ ಬೇಧಗಳಿವೆ.

### ಮೊದಲನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

"ಏಕಸ್ಥಂ" ಮತ್ತು "ಬ್ರಹ್ಮ" ಎಂಬ ಪದಗಳಿಗೆ "ನಿರ್ಗುಣಬ್ರಹ್ಮ" ಎಂದು ಅರ್ಥ. ಬಹುಮಂದಿ ಸಾಧಾರಣ ಮನುಷ್ಯರು ಪ್ರಪಂಚದಲ್ಲಿರುವ ಲಕ್ಷಾಂತರ ಸಜೀವ ಮತ್ತು ನಿರ್ಜೀವ ಪದಾರ್ಥಗಳನ್ನು ಬೇರೆಬೇರೆಯಾಗಿಯೇ ಇರುವಹಾಗೆ ಪ್ರತ್ಯಕ್ಷಿಸುವರು; ಇದು ಅವಿದ್ಯೆಯಿಂದ ಉಂಟಾದ ತಪ್ಪುತಿಳುವಳಿಕೆಯು. ವಿವೇಕಿಯು ಸದ್ಗುರುಗಳ ಉಪದೇಶವನ್ನು ಪಡೆದು, ಶಾಸ್ತ್ರಗಳನ್ನು ವ್ಯಾಸಂಗಮಾಡಿದರೆ ಈ ಬೇರೆಬೇರೆಯಾದ ವಸ್ತುಗಳೆಲ್ಲವೂ ಒಬ್ಬನೇ ಆದ ಆತ್ಮ ಅಥವ ನಿರ್ಗುಣ ಬ್ರಹ್ಮನಲ್ಲಿಯೇ ತೋರುತ್ತಿವೆಯೆಂದೂ ಮತ್ತು ಆ ಆತ್ಮನಿಂದಲೇ ಇವೆಲ್ಲವೂ ವಿಸ್ತಾರವಾಗಿರುವ ಹಾಗೆ ತೋರುತ್ತಿವೆಯೆಂದೂ ತಿಳಿಯುವನು. ಮಲಗಿರುವನೊಬ್ಬನಲ್ಲಿಯೇ ಕನಸಿನ ಪ್ರಪಂಚದ ವಿಸ್ತಾರವುಂಟಾಗುವಹಾಗೆ ಅದ್ವಿತೀಯ ಆತ್ಮನಿಂದಲೇ ವ್ಯಾವಹಾರಿಕ ಪ್ರಪಂಚದ ವಿಸ್ತಾರವಾಗಿರುವುದು. ಆದುದರಿಂದ ಯಾವಾಗ ಜ್ಞಾನಿಯು ಈ ಪ್ರಪಂಚವೂ ಮತ್ತು ಅದರಲ್ಲಿರುವ ಚರಾಚರಾವಸ್ತುಗಳೆಲ್ಲವೂ ನಿಜಸ್ವರೂಪದಲ್ಲಿ ಆತ್ಮನು ಅಥವ ನಿರ್ಗುಣ ಬ್ರಹ್ಮನು ಎಂದು ತಿಳಿದು, ಆ ಬ್ರಹ್ಮನೇ ತಾನು ಎಂದು ಸಾಕ್ಷಾತ್ಕರಿಸುತ್ತಾನೆಯೋ ಆಗ ಅವನು ಆತ್ಮ ಅಥವ ಬ್ರಹ್ಮಸ್ವರೂಪವನ್ನೇ ಪಡೆಯುತ್ತಾನೆ. ಅಂದರೇನು, ಅವನು ಬ್ರಹ್ಮವನ್ನು ಸೇರಿಕೊಳ್ಳುವನು ಅಥವ ಬ್ರಹ್ಮವೇ ಆಗುವನು.

### ಎರಡನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ.

"ಏಕಸ್ಥಂ" ಎಂಬ ಪದಕ್ಕೆ ಪುರುಷ, ಪ್ರಕೃತಿ ಎಂಬ ಎರಡರಲ್ಲಿ ಒಂದರಿಂದ ಅಂದರೆ ಪ್ರಕೃತಿಯಿಂದ ಉಂಟಾದದ್ದು ಎಂದು ಅರ್ಥ. "ಬ್ರಹ್ಮ" ಎಂದರೆ ಶುದ್ಧ ಪ್ರತ್ಯಗಾತ್ಮ ಅಥವ ಜೀವಾತ್ಮ ಎಂದು ಅರ್ಥ. ಜೀವಾತ್ಮ ಮತ್ತು ಮೂಲಪ್ರಕೃತಿ ಎಂಬ ಎರಡು ತತ್ವಗಳೂ ಪರಮಾತ್ಮನಿಗೆ ಶರೀರಗಳಾಗಿವೆ. ಬಹುಮಂದಿ ಸಾಧಾರಣ ಜನರು ಪ್ರಕೃತಿಯ ಭಾಗವಾದ ತಮ್ಮ ಶರೀರಗಳನ್ನೇ ಜೀವಾತ್ಮನೆಂದು ತಿಳಿದು ಮನುಷ್ಯ, ಪ್ರಾಣಿ, ದೇವತೆಗಳಿಗೆ ಬೇಧಗಳನ್ನು ಕಾಣುತ್ತಾ ಜೀವಾತ್ಮರುಗಳಲ್ಲೇ ಬೇಧಗಳಿರುವಹಾಗೆ ಭಾವಿಸುವರು. ಆದರೆ ತತ್ವಗಳ ನಿಜಸ್ವರೂಪವನ್ನು ತಿಳಿದ ಜ್ಞಾನಿಯು ಮಾತ್ರ ಬೇರೆಬೇರೆಯಾಗಿರುವ ಸಕಲವಸ್ತುಗಳಲ್ಲಿರುವ ಪ್ರತ್ಯೇಕವಾದ ದೇವ, ಮನುಷ್ಯ, ಪ್ರಾಣಿ, ನಿರ್ಜೀವ ಪದಾರ್ಥ ಇವುಗಳ ಸ್ವಭಾವಗಳೂ ಮತ್ತು ಅವು ಸಂಕುಚಿತವಾಗಿರುವುದು ಅಥವ ಉದ್ಧವಾಗಿರುವುದು ಮುಂತಾದ ವ್ಯತ್ಯಾಸಗಳೂ ಇವೆಲ್ಲವೂ ಆ ಪ್ರಕೃತಿ ಪುರುಷರೆಂಬ ಎರಡು ತತ್ವಗಳಲ್ಲಿ ಒಂದಾದ ಮೂಲ ಪ್ರಕೃತಿ ಎಂಬ ಒಂದೇ ತತ್ವದಲ್ಲಿ ಮಾತ್ರವೇ ಇರುತ್ತದೆಂದೂ, ಹಾಗೆಯೇ ಆ ಮೂಲ ಪ್ರಕೃತಿಯ ದೆಸೆಯಿಂದಲೇ ಪುತ್ರನೂ, ಪೌತ್ರನೂ, ಬೆಟ್ಟ, ನದಿ, ಸಮುದ್ರ ಮುಂತಾದ ವಿಸ್ತಾರವುಂಟಾಗಿದೆಯೆಂದೂ ನೋಡುತ್ತಾನೆ. ಜೀವಾತ್ಮರುಗಳೆಲ್ಲಾ ನಿಜಸ್ವರೂಪದಲ್ಲಿ ಜ್ಞಾನಾಕಾರವಾಗಿ ಒಂದೇಸಮನಾಗಿರುವುದರಿಂದ ಅವನು ಅವುಗಳಲ್ಲಿ ಯಾವ ಬೇಧವನ್ನೂ ಕಾಣುವುಲ್ಲ. ಬೇಧಗಳೆಲ್ಲವೂ ಪ್ರಕೃತಿಯಲ್ಲೇ ಇರುವುದನ್ನೂ ಮತ್ತು ಅವು ಪ್ರಕೃತಿಯಿಂದಲೇ ಉಂಟಾಗಿ ವಿಸ್ತಾರವಾಗುವುದನ್ನೂ ಜ್ಞಾನಿಯು ಕಾಣುವನು. ಯಾವಾಗ ಜ್ಞಾನಿಯು ಈ ರೀತಿಯಲ್ಲಿ ಪ್ರಕೃತ ಪುರುಷರ ನಿಜಸ್ವರೂಪವನ್ನು ಸಂದೇಹರಹಿತವಾಗಿ ತಿಳಿಯುತ್ತಾನೆಯೋ ಆವಾಗ ಅವನು ಅಪರಿಮಿತ ಜ್ಞಾನವೇ ಆಕಾರವಾದ ತನ್ನ ನಿಜಸ್ವರೂಪವಾದ ಶುದ್ಧ ಪ್ರತ್ಯಗಾತ್ಮನನ್ನೇ ಸಾಕ್ಷಾತ್ಕರಿಸುತ್ತಾನೆ.

### ಮೂರನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ.

"ಏಕಸ್ಥಂ" ಎಂಬ ಪದಕ್ಕೂ "ಬ್ರಹ್ಮ" ಪದಕ್ಕೂ "ಸಗುಣಬ್ರಹ್ಮ" ಅಥವ "ಪರಮಾತ್ಮ" ಎಂದು ಅರ್ಥ. ವಿಜ್ಞಾನಶಾಸ್ತ್ರಗಳನ್ನು ಮಾತ್ರ ವ್ಯಾಸಂಗ ಮಾಡಿರುವ ಬಹುಮಂದಿ ಮನುಷ್ಯರು ಪ್ರಪಂಚದ ವಿಚಿತ್ರ ಅನಂತ ಪದಾರ್ಥಗಳು ತಾವಾಗಿಯೇ ಅಂದರೆ ಸ್ವಾಭಾವಿಕವಾಗಿಯೇ ಉಂಟಾಗುತ್ತವೆ, ವಿಸ್ತಾರವಾಗುತ್ತವೆ ಮತ್ತು ಅವುಗಳು ಬೇರೆಬೇರೆಯಾಗಿಯೇ ಇವೆ ಎಂದು ತಿಳಿಯುತ್ತಾರೆ. ಆದರೆ ಗುರುಗಳ ಉಪದೇಶವನ್ನು ಪಡೆದ ಮತ್ತು ಶಾಸ್ತ್ರಗಳನ್ನು ವ್ಯಾಸಂಗಮಾಡಿದ ಜ್ಞಾನಿಯು ಮಾತ್ರ ಸಜೀವ ಮತ್ತು ನಿರ್ಜೀವ ವಸ್ತುಗಳೆಲ್ಲವೂ ಬೇರೆ ಬೇರೆಯಾಗಿದ್ದಾಗ್ಯೂ ಒಬ್ಬನೇ ಆದ ಪರಮಾತ್ಮನಲ್ಲಿಯೇ ಇರುತ್ತವೆ ಎಂಬುದನ್ನು ನೋಡುತ್ತಾನೆ. ಇಷ್ಟೇ ಅಲ್ಲ; ಆ ಪರಮಾತ್ಮನಿಂದಲೇ ಎಲ್ಲಾ ಸಜೀವ ನಿರ್ಜೀವ ಪದಾರ್ಥಗಳು ಉಂಟಾಗುವುದನ್ನೂ ನೋಡುತ್ತಾನೆ ಯಾವ ಜ್ಞಾನಿಯು ಈ ರೀತಿಯಲ್ಲಿ ಪ್ರಾಣಿ ಪ್ರಾಣಿಗಳಿಗೆ, ಪದಾರ್ಥ ಪದಾರ್ಥಗಳಿಗೆ ಬೇಧವನ್ನು ಸತ್ಯವೆಂದು ತಿಳಿಯುತ್ತಾ, ಈ ಬೇರೆ ಬೇರೆಯಾದ ಸಜೀವ ನಿರ್ಜೀವ ವಸ್ತುಗಳನ್ನೆಲ್ಲಾ ಪರಮಾತ್ಮನ ಶಕ್ತಿಯಿಂದಲೇ ಹುಟ್ಟುವುದನ್ನೂ, ಅವನಲ್ಲಿಯೇ ಇರುವುದನ್ನೂ ಮತ್ತು ಅವನಿಂದಲೇ ವಿಸ್ತಾರ—ಸಂಕುಚಿತವಾಗುವುದನ್ನು ಸಂದೇಹ ರಹಿತವಾಗಿ ತಿಳಿಯುತ್ತಾನೆಯೋ ಅವನು ಶರೀರ ಬಂಧನದಿಂದಬಿಡಲ್ಪಟ್ಟು ಪರಮಾತ್ಮನನ್ನು ಸೇರುತ್ತಾನೆ.

(Re-printed from Mysore Vysya Patrika
May 1960).

# ಭಗವದ್ಗೀತಾ ಅಧ್ಯಾಯ ೧೩ ಪಾಠಗಳು ೭ ಮತ್ತು ೮

### ಗಮನಿಸಬೇಕಾದ ವಿಷಯ

ಆಧುನಿಕ ವಿಜ್ಞಾನಶಾಸ್ತ್ರಜ್ಞರು ವಿಚಿತ್ರ ಮತ್ತು ಅನಂತವಾದ ಪ್ರಪಂಚದ ಪದಾರ್ಥಗಳು ಈಗ ಬೇರೆಬೇರೆಯಾಗಿದ್ದಾಗ್ಯೂ ಅವು ಆದಿಯಲ್ಲಿ ಜ್ಞಾನರಹಿತವಾದ ಅದ್ಭುತಶಕ್ತಿಯಿಂದ ಕೂಡಿದ ಅವ್ಯಕ್ತವಾದ ಮತ್ತು ಅವಿಭಕ್ತವಾದ ಮೂಲಪ್ರಕೃತಿಯಿಂದ ಉಂಟಾಗುತ್ತಾ, ವಿಸ್ತಾರವಾಗುತ್ತಾ ಅದರ ಆಧಾರದಲ್ಲಿಯೇ ನಿಂತಿದೆ ಎಂದು ಅನುಮಾನಿಸಿ ತೀರ್ಮಾನಿಸಿದ್ದಾರೆ. ಅವರುಜೀವಾತ್ಮನು ಮತ್ತು ಈಶ್ವರನು ಸತ್ಯಸ್ವರೂಪರಾಗಿ ಇದ್ದಾರೆ ಎಂಬ ಅವಶ್ಯಕತೆಯನ್ನು ಇನ್ನೂ ಮನಗಂಡಿಲ್ಲ. ಸಾಂಖ್ಯ ದಾರ್ಶನಿಕರು ಮೂಲಪ್ರಕೃತಿಯಿಂದಲೇ ಸಕಲವಾದ ಬೇರೆ ಬೇರೆಯ ಸಜೀವ ನಿರ್ಜೀವ ಪರ್ಥಗಳು ಉಂಟಾಗಿ ವಿಸ್ತಾರವಾಗಿವೆ ; ಅದರಲ್ಲಿಯೇ ನಿಂತಿವೆ ಎಂದು ಒಪ್ಪಿರುತ್ತಾರೆ; ಆದರೆ ಅವರು ಪ್ರಕೃತಿಗೆ ಯಾವವಿಧದಲ್ಲಿಯೂ ಸಂಬಂಧವನ್ನು ಪಡೆಯದ ಕೇವಲ ಜ್ಞಾನಸ್ವರೂಪರಾದ ಪುರುಷರು ಇರುವರೆಂದೂ ಮತ್ತು ಈ ಪುರುಷರುಗಳ ಸಾನ್ನಿಧ್ಯದಿಂದ ಮಾತ್ರವೇ ಮೂಲಪ್ರಕೃತಿಯು ಬೇರೆಬೇರೆಯ ಸಜೀವ ನಿರ್ಜೀವ ಪದಾರ್ಥಗಳಾಗಿ ಉಂಟಾಗುತ್ತದೆಂದೂ ಮತ್ತು ವಿಸ್ತಾರವಾಗುತ್ತದೆಂದೂ ಉಪದೇಶ ಮಾಡಿದ್ದಾರೆ. ವೇದಾಂತಿಗಳು ಅಂದರೆ ಬ್ರಹ್ಮಸೂತ್ರ ಸಿದ್ಧಾಂತವನ್ನು ಒಪ್ಪಿರುವವರು ಇನ್ನೂ ಮುಂದುವರೆದು ಅನಂತ ಪ್ರಕೃತಿ ಪುರುಷರಿಂದ ಕೂಡಿದ ಜಗತ್ತಿಗೆ ಸಚ್ಚಿದಾನಂದ ಸ್ವರೂಪನಾದ ಬ್ರಹ್ಮನು ಆಧಾರನು ; ಪುರುಷನು ಜ್ಞಾನಸ್ವರೂಪನು ಮತ್ತು ಪ್ರಕೃತಿಯು ಜ್ಞಾನವನ್ನು ಪಡೆಡಿಲ್ಲ ಎಂದ ಅನುಮಾನ ಶಬ್ಧಪ್ರಮಾಣಗಳ ಆಧಾರದಿಂದ ಸಾಧಿಸಿರುವರು. ಜ್ಞಾನಸ್ವರೂಪನಾದ ಅದ್ವಿತೀಯ ಬ್ರಹ್ಮನಲ್ಲಿಯೇ ಅನಂತವಾದ ಬೇರೆಬೇರೆಯಾದ ಸಜೀವ ನಿರ್ಜೀವ ಪದಾರ್ಥಗಳು ಇರುವುವು ಮತ್ತು ಅವನಿಂದಲೇ ಇವೆಲ್ಲವೂ ಹೊರಟು, ವಿಸ್ತಾರವಾಗುತ್ತಾ ಇವೆ ಎಂದು ತಿಳಿಯಬೇಕು. ಈ ರೀತಿಯಲ್ಲಿ ಯಾವ ವಿವೇಕಿಯು ವಿಜ್ಞಾನಶಾಸ್ತ್ರವನ್ನೂ, ಸಾಂಖ್ಯದರ್ಶನವನ್ನೂ, ವೇದಾಂತದರ್ಶನವನ್ನೂ ಸಮನ್ವಯಮಾಡಿ ತತ್ವಗಳ ನಿಜಸ್ವರೂಪವನ್ನು ಸಂದೇಹ ರಹಿತವಾಗಿ ತಿಳಿಯುತ್ತಾನೆಯೋ ಅವನು ಬ್ರಹ್ಮವನ್ನು ಪಡೆಯುತ್ತಾನೆ ಅಥವ ಹೊಂದುತ್ತಾನೆ. ಅಂದರೆ ಅವನು ಸತ್ಯವನು ಸಾಕ್ಷಾತ್ಕರಿಸುವ ಪರಿಪೂರ್ಣತೆಯನ್ನು ಹೊಂದುತ್ತಾನೆ.

# ಭಗವದ್ಗೀತಾ ಅಧ್ಯಾಯ ೧೩ ಪಾಠ ೮

(ಶ್ಲೋಕಗಳು ೩೧, ೩೨ ಮತ್ತು ೩೩)

## ಕ್ಷೇತ್ರಿ ಕ್ಷೇತ್ರದಲ್ಲಿದ್ದಾಗ್ಯೂ ಕ್ಷೇತ್ರದ ಗುಣದೋಷಗಳನ್ನು ಪಡೆಯುವುದಿಲ್ಲ.

**ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ||**
**ಶರೀರಸ್ಥೋ (ऽ) ಪಿ ಕೌಂತೇಯ ನ ಕರೋತಿ**
**ನ ಲಿಪ್ಯತೇ || ೩೧ ||**

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ**
**ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ**
**ನೋಪಲಿಪ್ಯತೇ || ೩೨ ||**

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ**
**ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ**
**ಭಾರತ || ೩೩ ||**

**ಈ ಶ್ಲೋಕಗಳಲ್ಲಿರುವ ವಾಕ್ಯಗಳ ಸಾಮಾನ್ಯ ಅರ್ಥ**

ಕೌಂತೇಯ ! ಭಾರತ !

(1) ಅಯಂ ಪರಮಾತ್ಮಾ ಅನಾದಿತ್ವಾತ್ ನಿರ್ಗುಣತ್ವಾತ್ ಅವ್ಯಯಃ=ಈ ಪರಮಾತ್ಮನು ಉತ್ಪತ್ತಿರಹಿತನಾದುದರಿಂದಲೂ ಅಥವ ಕಾರಣರಹಿತನಾದುದರಿಂದಲೂ ಮತ್ತು ಸತ್ವರಜಸ್ತಮೋಗುಣಗಳ ವಿಕಾರಗಳನ್ನು ಪಡೆದವನಲ್ಲವಾದುದರಿಂದಲೂ ನಾಶರಹಿತನಾಗಿದ್ದಾನೆ.

(2) (ಅಯಂ ಪರಮಾತ್ಮಾ) ಶರೀರಸ್ಥೋಽಪಿ ನ ಕರೋತಿ ನ ಲಿಪ್ಯತೇ=(ಈ ಪರಮಾತ್ಮನು) ಶರೀರದಲ್ಲಿದ್ದರೂ ಕರ್ಮ ಮಾಡುವುದಿಲ್ಲ ಮತ್ತು ಕರ್ಮಫಲಗಳಿಂದ ಬಂಧಿಸಲ್ಪಡುವುದಿಲ್ಲ.

(3) ಸರ್ವಗತಂ ಆಕಾಶಂ ಸೌಕ್ಷ್ಮ್ಯಾತ್ ಯಥಾನೋಪಲಿಪ್ಯತೇ=ಎಲ್ಲಾವಸ್ತುಗಳನ್ನೂ ಒಳಹೊಕ್ಕಿದ್ದರೂ ಆಕಾಶವು ಸೂಕ್ಷ್ಮವಾದದ್ದರಿಂದ ಹೇಗೆ ಆ ವಸ್ತುಗಳ ಗುಣದೋಷಗಳನ್ನು ತಾನು ಪಡೆಯುವುದಿಲ್ಲವೋ

(4) ತಥಾ ಆತ್ಮಾ ಸರ್ವತ್ರ ದೇಹೇ ಅವಸ್ಥಿತಃ ನೋಪಲಿಪ್ಯತೇ=ಹಾಗೆಯೇ ಆತ್ಮನು ಸಮಸ್ತವಾದ ಶರೀರಗಳಲ್ಲೂ ಇರುವವನಾದರೂ (ಆಯಾದೇಹಗಳ) ಗುಣದೋಷಗಳನ್ನು ಅಂಟಿಸಿಕ್ಕೊಳ್ಳುವುದಿಲ್ಲ.

(5) ಯಥಾ ಏಕಃ ರವಿಃ ಇಮಂ ಕೃತ್ಸ್ನಂ ಲೋಕಂ ಪ್ರಕಾಶಯತಿ=ಹ್ಯಾಗೆ ಒಬ್ಬನಾದ ಸೂರ್ಯನು ಈ ಸಮಸ್ತವಾದ ಲೋಕವನ್ನು ಪ್ರಕಾಶಗೊಳಿಸುತ್ತಾನೆಯೋ

(6) ತಥಾ ಕ್ಷೇತ್ರೀ ಕೃತ್ಸ್ನಂ ಕ್ಷೇತ್ರಂ ಪ್ರಕಾಶಯತಿ=ಹಾಗೆಯೇ ಕ್ಷೇತ್ರದಲ್ಲಿರುವ ಕ್ಷೇತ್ರಜ್ಞನು ಸಮಸ್ತವಾದ ಕ್ಷೇತ್ರಗಳನ್ನೂ ಪ್ರಕಾಶಗೊಳಿಸುತ್ತಾನೆ.

ಆಚಾರ್ಯರುಗಳು "ಪರಮಾತ್ಮಾ–ಆತ್ಮಾ–ಕ್ಷೇತ್ರೀ" ಎಂಬ ಪದಗಳಿಗೆ ಮೊದಲನೆಯ ಅಭಿಪ್ರಾಯದ ಪ್ರಕಾರ ನಿರ್ಗುಣ ಬ್ರಹ್ಮನೆಂದೂ, ಎರಡನೆಯ ಅಭಿಪ್ರಾಯದ ಪ್ರಕಾರ ಶುದ್ಧ ಪ್ರತ್ಯಗಾತ್ಮನೆಂದೂ, ಮೂರನೆಯ ಅಭಿಪ್ರಾಯದ ಪ್ರಕಾರ ಸಗುಣಬ್ರಹ್ಮನೆಂದೂ ಅರ್ಥ ಮಾಡಿರುವರು. ಆದುದರಿಂದ ಈ ಶ್ಲೋಕಗಳ ತಾತ್ಪರ್ಯಗಳಲ್ಲಿ ಬೇಧಗಳಿವೆ.

### ಮೊದಲನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಮಡಿಕೆಯು ಮಣ್ಣು ಎಂಬ ಕಾರಣದಿಂದ ಉಂಟಾಗಿದೆ; ಆದುದರಿಂದ ಅದು ಆದಿಯನ್ನು ಪಡೆದಿದೆ; ಅನಾದಿಯಲ್ಲ. ಒಬ್ಬ ಮನುಷ್ಯನಲ್ಲಿ ಒಂದು ಕಾಲದಲ್ಲಿ ತಮೋಗುಣವೂ, ಇನ್ನೊಂದುಕಾಲದಲ್ಲಿ ರಜೋಗುಣವೂ, ಮತ್ತೊಂದುಕಾಲದಲ್ಲಿ ಸತ್ವಗುಣವೂ ತೋರುವುದರಿಂದ ಈ ಗುಣಗಳಿಗೆ ನಾಶವುಂಟು. ಆದುದರಿಂದ ಆದಿಯನ್ನು ಅಥವ ಕಾರಣವನ್ನು ಪಡೆದಿರುವ ಮತ್ತು ಗುಣಗಳನ್ನು ಪಡೆದಿರುವ ವಸ್ತುಗಳೆಲ್ಲವೂ ಬದಲಾವಣೆಗಳನ್ನು ಹೊಂದುತ್ತಾ ನಾಶವಾಗುವುವು. ಆದರೆ ನಿರ್ಗುಣ ಬ್ರಹ್ಮನು ಆದಿ ಅಥವ ಕಾರಣವನ್ನು ಪಡೆದಿಲ್ಲ ಮತ್ತು ಸತ್ವರಜಸ್ತಮೋಗುಣಗಳನ್ನು ಪಡೆದಿಲ್ಲ. ಆದುದರಿಂದ ಅವ್ಯಯನು ಅಥವ ನಾಶರಹಿತನು; ಹುಟ್ಟುಸಾವುಗಳನ್ನು ಪಡೆಯದವನು. ಇಂಥಾ ನಿರ್ಗುಣಸ್ವರೂಪನಾದ ಪರಮಾತ್ಮನು ಅವಿದ್ಯೆಯಿಂದ ಶರೀರದಲ್ಲಿರುವ ಹಾಗೂ, ಅದರಲ್ಲಿ ಕೆಲಸಮಾಡುವ ಹಾಗೂ, ಮತ್ತು ಶರೀರದಲ್ಲಿ ಮಾಡುವ ಕರ್ಮಫಲಗಳನ್ನು ಅನುಭವಿಸುವ ಹಾಗೆ ಕಾಣುತ್ತಾನೆ. ಆದರೆ ನಿಜವಾಗಿ ಅವನು ಶರೀರದಲ್ಲೂ ಇಲ್ಲ; ಕರ್ಮಗಳನ್ನು ಮಾಡುವುದೂ ಇಲ್ಲ ಮತ್ತು ಕರ್ಮಫಲಗಳನ್ನು ಅಂಟಿಸಿಕ್ಕೊಳ್ಳುವುದೂ ಇಲ್ಲ. ಬ್ರಹ್ಮನು ಪ್ರತಿಯೊಂದು ದೇಹದಲ್ಲಿಯೂ ಪ್ರತಿಬಿಂಬಿಸಿದರೂ ಆ ದೇಹಗಳ ಕಾರ್ಯಗಳಿಂದ ಉಂಟಾಗುವ ಗುಣದೋಷಗಳು ಅವನಿಗೆ ನಿಜವಾಗಿ ಸ್ವಲ್ಪವೂ ತಗಲುವುದಿಲ್ಲ. (೩೧)

ಹೀಗೆ ಪರಮಾತ್ಮನು ಶರೀರದಲ್ಲಿದ್ದರೂ ಶರೀರದಿಂದ ಮಾಡಲ್ಪಟ್ಟ ಕರ್ಮಗಳಿಂದ ಲಿಪ್ತನಾಗುವುದಿಲ್ಲ ಎಂಬುದನ್ನು ತೋರಿಸಿಕೊಡುವುದಕ್ಕಾಗಿ ಮೂವತ್ತೆರಡು ಮತ್ತು ಮೂವತ್ತಮೂರನೇ ಶ್ಲೋಕಗಳಲ್ಲಿ ಎರಡು ಉದಾಹರಣೆಗಳನ್ನು ಕೊಟ್ಟಿದೆ. (1) ಆಕಾಶವು ಎಲ್ಲೆಲ್ಲಿಯೂ ತುಂಬಿಕೊಂಡಿದೆ; ಅಂದರೆ ಅದು ಎಲ್ಲಾ ಪದಾರ್ಥಗಳ ಒಳಗೂ ಹೊರಗೂ ಇದೆ. ಇಷ್ಟೇ ಅಲ್ಲ, ಅದು ಬಹುಸೂಕ್ಷ್ಮವಾಗಿದೆ. ಆದುದರಿಂದ ಯಾವ ಪದಾರ್ಥದ ಒಳಗೆ ಅದು ಇದೆಯೋ ಆ ಪದಾರ್ಥಗಳ ಗುಣದೋಷಗಳು ಅದನ್ನು ಅಂಟುವುದಿಲ್ಲ ಅಥವ ಸೇರುವುದಿಲ್ಲವಷ್ಟೆ. ಹಾಗೆಯೇ ಆತ್ಮನು ಅಥವ ನಿರ್ಗುಣಬ್ರಹ್ಮನು ಸ್ಥಾವರ, ಜಂಗಮ, ಪ್ರಾಣಿಗಳು, ಮನುಷ್ಯರು, ದೇವತೆಗಳು ಮೊದಲಾದ ಎಲ್ಲಾದೇಹಗಳಲ್ಲಿ ಇರುವನಾದರೂ ಅಥವ ಇರುವ ಹಾಗೆ ತೋರಿದರೂ ಅವನು ದೇಹಗಳಿಂದ ಮಾಡಲ್ಪಡುವ ಕರ್ಮಗಳ ಗುಣದೋಷಗಳಿಗೆ ಸ್ವಲ್ಪವೂ ಬದ್ಧನಾಗುವುದಿಲ್ಲ. ಅಥವ ಅವು ಅವನನ್ನು ನಿಜವಾಗಿ ಸ್ವಲ್ಪವೂ ತಗಲುವುದಿಲ್ಲ. (2) ಸೂರ್ಯನು ಒಬ್ಬನೇ ಆಗಿ ಅಂತರಿಕ್ಷದಲ್ಲಿರುವನು; ಆದಾಗ್ಯೂ ಅವನು ಎಲ್ಲಾ ಕಡೆಯಲ್ಲಿರುವ ಲೋಕಗಳನ್ನೂ ಮತ್ತು ಅವುಗಳಲ್ಲಿರುವ ಪದಾರ್ಥಗಳನ್ನೂ ಪ್ರಕಾಶಪಡಿಸುತ್ತಾನೆ ಅಥವ ಅಲ್ಲೆಲ್ಲಾ ಬೆಳಕನ್ನು ಹರಡುತ್ತಾನೆ ಅಲ್ಲವೆ? ಹಾಗೆಯೇ ಕ್ಷೇತ್ರಿಯು ಅಥವ ಕ್ಷೇತ್ರದಲ್ಲಿ ಇರುವ ಹಾಗೆ ತೋರುವ

ನಿರ್ಗುಣಬ್ರಹ್ಮನು ಅಥವ ಆತ್ಮನು ಪ್ರಪಂಚದಲ್ಲಿರುವ ಕ್ಷೇತ್ರಗಳನ್ನೆಲ್ಲಾ ಅಥವ ಶರೀರಗಳನ್ನೆಲ್ಲಾ ಜ್ಞಾನಜ್ಯೋತಿಸ್ಸಿನಿಂದ ಪ್ರಕಾಶಪಡಿಸುವನು. ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು. ಸೂರ್ಯನಿಂದ ಪ್ರಕಾಶವನ್ನು ಪಡೆದಿರುವ ವಸ್ತುಗಳ ಗುಣದೋಷಗಳು ಸ್ವಲ್ಪವೂ ಸೂರ್ಯನನ್ನು ತಗಲುವುದಿಲ್ಲ ; ಅವನು ಅವನ್ನು ಅಂಟಿಸಿಕ್ಕೊಳ್ಳುವುದಿಲ್ಲ. ಹಾಗೆಯೇ, ಆತ್ಮದ ತೇಜಸ್ಸಿನಿಂದ ಪ್ರಕಾಶವಾಗಿರುವ ದೇಹಗಳ ಮತ್ತು ಅವುಗಳ ಕರ್ಮಗಳ ಗುಣದೋಷಗಳು ಆತ್ಮನನ್ನು ಅಥವ ನಿರ್ಗುಣಬ್ರಹ್ಮನನ್ನು ಅಂಟುವುದಿಲ್ಲ ಅಥವ ಸೇರುವುದಿಲ್ಲ.

### ಎರಡನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಮನುಷ್ಯ ಶರೀರವು ಒಂದು ಕಾಲದಲ್ಲಿ ಹುಟ್ಟುವುದರಿಂದ ಅದಕ್ಕೆ ಆದಿಯು ಇದೆ ಮತ್ತು ಅದು ಪ್ರಕೃತಿಯ ಭಾಗವಾದ್ದರಿಂದ ಸತ್ವರಜಸ್ತಮೋಗುಣಗಳನ್ನು ಪಡೆದಿದೆ ಆದರೆ ತನ್ನ ಶರೀರ, ಇಂದ್ರಿಯಾದಿಗಳಿಗಿಂತ ಪರನಾದ ಅಂದರೆ ಅವುಗಳಿಗೆ ಪರಮಾತ್ಮನಾದ ಶುದ್ಧ ಪ್ರತ್ಯಗಾತ್ಮನಿಗೆ ಆದಿ ಅಥವ ಉತ್ಪತ್ತಿಯು ಇರುವುದಿಲ್ಲ. ಮತ್ತು ಅವನು ತ್ರಿಗುಣಗಳ ಸಂಬಂಧವನ್ನು ಪಡೆದಿಲ್ಲ ಆದುದರಿಂದ ಅವನು ಅವ್ಯಯನು ಅಥವ ನಾಶರಹಿತನು ; ಅಂದರೆ ಹುಟ್ಟು ಸಾವುಗಳು ಇಲ್ಲದವನು. ಯಾವುದಕ್ಕೆ ಆರಂಭವಿಲ್ಲವೋ ಅದಕ್ಕೆ ನಾಶವೂ ಇಲ್ಲ. ಈ ಜೀವಾತ್ಮನು ಈಗ ಪೂರ್ವ ಕರ್ಮಗಳ ದೆಶೆಯಿಂದ ಶರೀರ ಬಂಧನಕ್ಕೆ ಒಳಪಟ್ಟು ಶರೀರದಲ್ಲಿರುವನು ಮತ್ತು ಶರೀರದಲ್ಲಿ ನಡೆಯುವ ಕರ್ಮಗಳೆಲ್ಲವನ್ನೂ ಅಜ್ಞಾನದಿಂದ ತಾನು ಮಾಡುವ ಹಾಗೆ ಅನುಭವಿಸುವನು. ಆದರೆ ಶುದ್ಧ ಪ್ರತ್ಯಗಾತ್ಮನು ಶರೀರದಲ್ಲಿ ನಡೆಯುತ್ತಿರುವ ಕರ್ಮಗಳನ್ನು ಮಾಡುವುದಿಲ್ಲ. ಆದುದರಿಂದ ಅವನ ಶರೀರದಲ್ಲಿ ಮಾಡಲ್ಪಟ್ಟ ಕರ್ಮಗಳ ಗುಣದೋಷಗಳು ಅವನ ನಿಜಸ್ವರೂಪಕ್ಕೆ ತಗಲುವುದಿಲ್ಲ ಅಥವ ಅಂಟುವುದಿಲ್ಲ. ಕರ್ಮಬಂಧನವೂ ಮತ್ತು ಶರೀರ ಸಂಬಂಧವೂ ನಾಶವಾದ ಒಡನೆಯೇ ಜೀವಾತ್ಮನ ಜ್ಞಾನಾಕಾರವಾದ ಸ್ವರೂಪವು ಯಾವ ದೋಷವೂ ಇಲ್ಲದೆ ಯಾವಾಗಲೂ ಇರುವ ಹಾಗೆ ಪ್ರಕಾಶಿಸುತ್ತದೆ. ಶುದ್ಧಪ್ರತ್ಯಗಾತ್ಮನಿಗೆ ಗುಣವಿಲ್ಲದುದರಿಂದ ತನ್ನ ನಿಜಸ್ವರೂಪದಲ್ಲಿ ಅವನು ಕರ್ಮಗಳನ್ನು ಮಾಡುವುದೂ ಇಲ್ಲ ಮತ್ತು ಕರ್ಮಫಲಗಳು ಅವನನ್ನು ಬಂಧಿಸುವುದೂ ಇಲ್ಲ. (೩೧)

ಶುದ್ಧ ಪ್ರತ್ಯಗಾತ್ಮನಿಗೆ ಗುಣವಿಲ್ಲದುದರಿಂದ ಅವನಿಗೆ ಕರ್ಮಗಳನ್ನು ಮಾಡುವ ಸ್ವಭಾವವೇ ಇಲ್ಲವೆಂದು ಒಪ್ಪಬಹುದು ಆದರೆ ಅಜ್ಞಾನದಿಂದ ಅವನು ಜನ್ಮಜನ್ಮಗಳಲ್ಲಿ ಪರಂಪರೆಯಾಗಿ ಒಂದಾದವೇಲೆ ಇನ್ನೊಂದು ಶರೀರದೊಂದಿಗೆ ಅನಾದಿಕಾಲದಿಂದ ಸೇರಿಕೊಂಡಿರುವುದರಿಂದ ಅವನಿಗೆ ಆಯಾ ಶರೀರಗಳ ಗುಣದೋಷಗಳು ಅಂಟುವುದಿಲ್ಲ ಎಂದು ಹೇಗೆ ಹೇಳಬಹುದು ? ಈ ಸಂದೇಹನನ್ನು ಪರಿಹರಿಸುವುದಕ್ಕಾಗಿ ನಮ್ಮ ಅನುಭವಕ್ಕೆ ಒಳಪಟ್ಟ ಪ್ರಪಂಚದ ಎರಡು ಉದಾಹರಣೆಗಳನ್ನು ಮೂವತ್ತೆರಡು ಮತ್ತು ಮೂವತ್ತುಮೂರನೇ ಶ್ಲೋಕಗಳಲ್ಲಿ ವಿವರಿಸಿದೆ. (1) ಆಕಾಶವು ಎಲ್ಲೆಲ್ಲೂ ವಿಸ್ತಾರವಾಗಿ ಎಲ್ಲಾ ವಸ್ತುಗಳಿಂದಲೂ ಕೂಡಿದೆಯಲ್ಲವೆ ? ಆದಾಗ್ಯೂ ಅದು ಬಹು ಸೂಕ್ಷ್ಮವಾಗಿರುವುದರಿಂದ ತಾನು ಒಳಗೂ ಹೊರಗೂ ಇರುವ ಯಾವ ವಸ್ತುವಿನ ಸ್ವಭಾವದೊಂದಿಗೆ ಅಥವ ಗುಣದೋಷಗಳೊಡನೆ ಸೇರದೆ ಇರುವುದನ್ನು ನಾವು ಪ್ರತ್ಯಕ್ಷಿಸುತ್ತೇವೆ ಹಾಗೆಯೇ ಶುದ್ಧಪ್ರತ್ಯಗಾತ್ಮನು ಬಹುಸೂಕ್ಷ್ಮನಾಗಿರುವುದರಿಂದ ದೇವ, ಮನುಷ್ಯ, ತಿರ್‍ಯಕ್ಕು, ವೃಕ್ಷ, ಸ್ಥಾವರ ಮುಂತಾದ ಸಕಲ ಶರೀರಗಳಲ್ಲಿ ಇದ್ದಾಗ್ಯೂ ಕೂಡ ಅವುಗಳ ಗುಣದೋಷಗಳಾಗಲೀ ಅಥವ ಸ್ವಭಾವಗಳಾಗಲೀ ಅವನನ್ನು ಅಂಟುವುದಿಲ್ಲ ಅಥವ ಸೇರುವುದಿಲ್ಲ. ಅವನ ಸ್ವರೂಪವು ಬದಲಾಯಿಸಿ ಆಯಾ ಶರೀರಗಳ ಸ್ವರೂಪವನ್ನು ಪಡೆಯುವುದಿಲ್ಲ. (2) ಒಬ್ಬನೇ ಆದ ಸೂರ್ಯನು ತನ್ನ ಕಾಂತಿಯಿಂದ ಈ ಲೋಕದ ಪದಾರ್ಥಗಳೆಲ್ಲವನ್ನೂ ಪ್ರಕಾಶಪಡಿಸುತ್ತಾನೆ. ಹಾಗೆಯೇ ಕ್ಷೇತ್ರಿಯಾದ ಜೀವಾತ್ಮನೂ ಕೂಡ ಒಟ್ಟು ಕ್ಷೇತ್ರವನ್ನೂ ಮತ್ತು ಕ್ಷೇತ್ರದ ಭಾಗಗಳಾದ ಶರೀರ, ಇಂದ್ರಿಯಗಳು, ಮನಸ್ಸು, ಅಹಂಕಾರ, ಬುದ್ಧಿ ಇವೆಲ್ಲವನ್ನೂ "ಇದು ನನ್ನ ಕ್ಷೇತ್ರ, ಇದು ನನ್ನ ಶರೀರ, ಇವು ನನ್ನ ಇಂದ್ರಿಯಗಳು, ಇದು ನನ್ನ ಮನಸ್ಸು, ಇದು ನನ್ನ ಬುದ್ಧಿ, ಇವು ಈ ವಿಧಗಳಾಗಿವೆ." ಎಂದು ಒಳಗೂ ಹೊರಗೂ ಕಾಲು ಮೊದಲುಗೊಂಡು ತಲೆಯವರೆಗೆ ಎಲ್ಲೆಲ್ಲೂ ಜ್ಞಾನದಿಂದ ಪ್ರಕಾಶಪಡಿಸುತ್ತಾನೆ. ಪ್ರಕಾಶಪಡಿಸುವಂಥಾ ಸೂರ್ಯನು ಪ್ರಕಾಶಿಸುವಂಥಾ ಸಕಲಲೋಕದ ಪದಾರ್ಥಗಳಿಗಿಂತಲೂ ವಿಲಕ್ಷಣನಾಗಿರುವನು. ಹಾಗೆಯೇ ತಿಳಿಯಲ್ಪಡುವ ಕ್ಷೇತ್ರ ಮತ್ತು ಅದರ ಭಾಗಗಳಿಗಿಂತಲೂ ತಿಳಿಯುವ ಜೀವಾತ್ಮನು ವಿಲಕ್ಷಣನಾಗಿರುವನು. ಸೂರ್ಯನ ಪ್ರಭೆಯಿಂದ ಪ್ರಕಾಶಿಸುವ ಪದಾರ್ಥಗಳ ಗುಣದೋಷಗಳು ಸೂರ್ಯನನ್ನು ಅಂಟುವುದಿಲ್ಲ ಅಥವ ಸೇರುವುದಿಲ್ಲ. ಹಾಗೆಯೇ ತಿಳಿಯಲ್ಪಡುವ ಕ್ಷೇತ್ರದ ಮತ್ತು ಅದರ ಭಾಗಗಳ ಗುಣದೋಷಗಳು ಕ್ಷೇತ್ರಿಯಾದ ಶುದ್ಧಪ್ರತ್ಯಗಾತ್ಮನನ್ನು ಅಂಟುವುದಿಲ್ಲ ಅಥವ ಸೇರುವುದಿಲ್ಲ.

### ಮೂರನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಮೂವತ್ತೊಂದನೇ ಶ್ಲೋಕದಲ್ಲಿರುವ "ಪರಮಾತ್ಮ" ಎಂಬ ಪದಕ್ಕೆ ಸಗುಣಬ್ರಹ್ಮ ಅಥವ ಈಶ್ವರ ಎಂದು ಅರ್ಥವೇ

ಹೊರತು ನಿರ್ಗುಣಬ್ರಹ್ಮ ಅಥವ ಶುದ್ಧ ಪ್ರತ್ಯಗಾತ್ಮ ಎಂದು ಅರ್ಥವಲ್ಲ. ಈಶ್ವರನು ಪ್ರತಿಯೊಂದು ಶರೀರದಲ್ಲೂ ಅಂತರ್ಯಾಮಿಯಾಗಿ ಇದ್ದಾನೆ. ಹಾಗಾದರೆ ಶರೀರವು ನಾಶವಾಗುವಾಗ ಈಶ್ವರನೂ ನಾಶವಾಗುತ್ತಾನೆಯೆ? ಅವನು ಎಂದೆಂದಿಗೂ ನಾಶವಾಗುವುದೇ ಇಲ್ಲ; ಏಕೆಂದರೆ ಈ ಪರಮಾತ್ಮನು ಯಾವುದೋ ಒಂದು ಕಾಲದಲ್ಲಿ ಉತ್ಪತ್ತಿಯಾದವನು ಅಲ್ಲ ಮತ್ತು ಇವನಿಗೆ ಸತ್ವರಜಸ್ತಮೋಗುಣಗಳ ಸಂಬಂಧವು ಸ್ವಲ್ಪವೂ ಇರುವುದಿಲ್ಲ. ಅವನು ಪರಿಪೂರ್ಣನಾಗಿ ಸಕಲ ಐಶ್ವರ್ಯಗಳನ್ನೂ ಪಡೆದಿರುವನಾದುದರಿಂದ ಕರ್ಮಫಲಗಳನ್ನು ಪಡೆಯಬೇಕೆಂಬ ಆಶೆಗಳನ್ನು ಸ್ವಲ್ಪವೂ ಪಡೆದಿಲ್ಲ. ಆದುದರಿಂದಲೇ ಅವನು ವಿವಿಧ ಫಲಗಳನ್ನು ಪಡೆಯುವುದಕ್ಕಾಗಿ ಯಾವ ಕರ್ಮಗಳನ್ನೂ ಮಾಡುವವನೇ ಅಲ್ಲ. ಪರಮಾತ್ಮನು ಎಂದಿಗೂ ಕರ್ಮಫಲದ ದೋಷದಿಂದ ಕೂಡಿದ ಕರ್ಮಗಳನ್ನು ಮಾಡುವುದೇ ಇಲ್ಲ. (೩೧)

ಪರಮಾತ್ಮನು ಹೀನವಾದ, ಮಧ್ಯಸ್ಥವಾದ ಮತ್ತು ಮೇಲಾದ ದೇಹಗಳಲ್ಲಿ ಅಂತರ್ಯಾಮಿಯಾಗಿರುವನಲ್ಲವೆ? ಹಾಗಾದರೆ ಆಯಾ ದೇಹಗಳ ಗುಣದೋಷಗಳು ಅವನಿಗೆ ಅಂಟುವುದಿಲ್ಲವೆ? ಆ ದೋಷಗಳು ಪರಮಾತ್ಮನಿಗೆ ಅಂಟುವುದಿಲ್ಲ ಎಂಬುದನ್ನು ತೋರಿಸುವುದಕ್ಕಾಗಿ ಎರಡು ಉದಾಹರಣೆಗಳನ್ನು ಮೂವತ್ತೆರಡು ಮತ್ತು ಮೂವತ್ತುಮೂರನೇ ಶ್ಲೋಕಗಳಲ್ಲಿ ಕೊಟ್ಟಿದೆ. (1) ಆಕಾಶವು ಜಗತ್ತಿನ ಎಲ್ಲಾ ಪದಾರ್ಥಗಳ ಒಳಗೂ ಹೊರಗೂ ಇದೆ. ಅದು ಬಹು ಸೂಕ್ಷ್ಮವಾಗಿರುವುದರಿಂದ ಆಯಾ ಪದಾರ್ಥಗಳ ಗುಣಗಳೂ ದೋಷಗಳೂ ಆಕಾಶಕ್ಕೆ ಸ್ವಲ್ಪವೂ ಅಂಟುವುದಿಲ್ಲ. ಹಾಗೆಯೇ ಪದಾರ್ಥಗಳ ಗುಣದೋಷಗಳು ಅಂತರ್ಯಾಮಿಯಾದ ಪರಮಾತ್ಮನಿಗೆ ಅಂಟುವುದಿಲ್ಲ. (2) ಸೂರ್ಯನು ಒಬ್ಬನೇ ಆದಾಗ್ಯೂ ತನ್ನ ಅನಂತವಾದ ತೇಜಸ್ಸಿನಿಂದ ಎಲ್ಲೆಲ್ಲಿಯೂ ಇರುವ ಲೋಕಗಳನ್ನೂ, ಅವುಗಳ ಪದಾರ್ಥಗಳನ್ನೂ ಪ್ರಕಾಶಪಡಿಸುತ್ತಾನಲ್ಲವೆ? ಹಾಗೆಯೇ ಪ್ರಕೃತಿ ಮಹದಹಂಕಾರಗಳಿಂದ ಕೂಡಿದ ಜಗತ್ತಿನಲ್ಲಿ ಅಂತರ್ಯಾಮಿಯಾದ ಕ್ಷೇತ್ರಿಯಾದ ಪರಮಾತ್ಮನು ಸಮಸ್ತವಾದ ಕ್ಷೇತ್ರವನ್ನು ಅಂದರೆ ಜಗತ್ತಿನ ಎಲ್ಲಾ ಭಾಗಗಳನ್ನೂ ಮತ್ತು ಎಲ್ಲಾ ಪದಾರ್ಥಗಳನ್ನೂ ಪ್ರಕಾಶಪಡಿಸುತ್ತಾನೆ. ಹ್ಯಾಗೆ ಪ್ರಕಾಶಿಸಲ್ಪಟ್ಟ ಪದಾರ್ಥಗಳ ಗುಣದೋಷಗಳು ಪ್ರಕಾಶವನ್ನುಂಟುಮಾಡುವ ಸೂರ್ಯನಿಗೆ ತಗಲುವುದಿಲ್ಲವೋ ಹಾಗೆಯೇ ಪರಮಾತ್ಮನಿಂದ ಪ್ರಕಾಶವನ್ನು ಪಡೆಯುವ ಲೋಕದ ಗುಣದೋಷಗಳು ಪರಮಾತ್ಮನಿಗೆ ಸ್ವಲ್ಪವೂ ತಗಲುವುದಿಲ್ಲ.

## ಗಮನಿಸಬೇಕಾದ ವಿಷಯಗಳು

ಪರಮಾತ್ಮನು ನಿರ್ಗುಣಬ್ರಹ್ಮನಾಗಿರಬಹುದು; ಶುದ್ಧ ಪ್ರತ್ಯಗಾತ್ಮನಾಗಿರಹುದು ಅಥವ ಸಗುಣಬ್ರಹ್ಮನಾಗಿರಬಹುದು. ಆದಾಗ್ಯೂ ಕೆಳಗಿನ ಅಭಿಪ್ರಾಯಗಳು ಪರಮಾತ್ಮನಿಗೆ ಅನ್ವಯಿಸುತ್ತವೆ.

(1) ಪ್ರಕೃತಿಯು ಬದಲಾವಣೆಗಳನ್ನು ಪಡೆಯುವ ಸ್ವಭಾವವನ್ನು ಪಡೆದಿದೆ. ಮತ್ತು ಸತ್ವರಜಸ್ತಮೋಗುಣಗಳ ಮೂಲಕವಾಗಿ ಕಾರ್ಯಗಳನ್ನು ಮಾಡುತ್ತ ಇದೆ. ಪರಮಾತ್ಮನಿಗೆ ಆದಿಯೂ ಇಲ್ಲ ಮತ್ತು ಅಂತ್ಯವೂ ಇಲ್ಲ; ಅಂದರೆ ಅವನು ಪ್ರಕೃತಿಯ ಹಾಗೆ ಬದಲಾವಣೆಗಳನ್ನು ಪಡೆಯುವುದಿಲ್ಲ. ಇಷ್ಟೇ ಅಲ್ಲ, ಅವನಿಗೆ ಸತ್ವರಜಸ್ತಮೋಗುಣಗಳು ಇಲ್ಲದೇ ಇರುವುದರಿಂದ ಅವನು ಶರೀರದ ಯಾವಕಾರ್ಯವನ್ನೂ ನೇರಾಗಿ ತಾನೇ ಮಾಡುವುದೇ ಇಲ್ಲ. ಆದರೆ ಪ್ರಕೃತಿಗೆ ಮತ್ತು ಅದರ ಭಾಗಗಳಾದ ಶರೀರಗಳಿಗೆ ಕರ್ಮಗಳನ್ನು ಮಾಡುವ ಶಕ್ತಿಯನ್ನೂ, ಮತ್ತು ಚಿತ್ತಕ್ಕೆ ವೃತ್ತಿಗಳನ್ನು ಪಡೆಯುವ ಶಕ್ತಿಯನ್ನೂ ಅವನೇ ಕೊಡುತ್ತಾನೆಂಬುದನ್ನು ಮಾತ್ರ ಮರೆಯಕೂಡದು. ಯಾವ ಬದಲಾವಣೆಗಳನ್ನೂ ಪಡೆಯದೇ ಇರುವುದರಿಂದ ಪರಮಾತ್ಮನು ಶಾಶ್ವತನು; ಶರೀರದ ಕರ್ಮಗಳ ಗುಣದೋಷಗಳು ಅವನನ್ನು ಅಂಟುವುದಿಲ್ಲ.

(2) ಆಕಾಶವು (Space Time) ಸೂಕ್ಷ್ಮವಾದ, ನಿರವಯವವಾದ, ವಿಭುವಾದ ವಸ್ತು ಎಂದು ಐರೋಪ್ಯ ಮತ್ತು ಭಾರತೀಯ ದಾರ್ಶನೀಕರು ಒಪ್ಪಿರುವರು. ಅದರಿಂದ ಪದಾರ್ಥಗಳು ಪರಿಣಾಮವಾಗುತ್ತಾ ಉತ್ಪತ್ತಿಯಾಗುವಾಗ ಆಕಾಶವು ಪ್ರತಿಯೊಂದು ಪದಾರ್ಥದ ಒಳಗೂ ಹೊರಗೂ ಇರುತ್ತದೆ. ಉದಾಹರಣೆಗಾಗಿ, ಒಂದು ಗೋಡೆಯನ್ನು ಕಟ್ಟಿದರೆ ಆಕಾಶವು ಎರಡುಭಾಗವಾಗುವುದಿಲ್ಲ. ಏಕೆಂದರೆ ಗೋಡೆಯ ಆಕಡೆ, ಈಕಡೆ ಮತ್ತು ಒಳಗಡೆ ಆಕಾಶವು ಅಖಂಡವಾಗಿ ಇದ್ದೇ ಇರುತ್ತದೆ. ಇನ್ನೇನು, ಕಟ್ಟಿದ ಗೋಡೆಯನ್ನು ಒಡೆದರೆ ಸ್ವಲ್ಪಕಾಲವಿದ್ದ ಆ ಗೋಡೆಯ ಗುಣದೋಷಗಳು ಆಕಾಶಕ್ಕೆ ತಗಲುವುದಿಲ್ಲ ಅಥವ ಸೇರುವುದಿಲ್ಲ ಹಾಗೆಯೇ ಪರಮಾತ್ಮನಿಗೂ ಅವನಿಂದ ಉಂಟಾಗಿ ಅವನು ವಾಸಮಾಡುವ ಶರೀರಗಳಿಗೂ ಸಂಬಂಧವಿದೆಯೆಂದು ತಿಳಿಯಬೇಕು.

(3) ಪರಮಾತ್ಮನನ್ನು ಮೂವತ್ತುಮೂರನೆಯ ಶ್ಲೋಕದಲ್ಲಿ ಸೂರ್ಯನಿಗೆ ಹೋಲಿಸಿದೆ. ಹಾಗಾದರೆ ಪರಮಾತ್ಮನು ಸೂರ್ಯನ ಹಾಗೆ ಪ್ರಕೃತಿಯ ಭಾಗವಾದ ಜ್ಯೋತಿಸ್ಸಿನಿಂದ ಕೂಡಿದ ಒಂದು ಪದಾರ್ಥವೇ? ಎಂದಿಗೂ ಅಲ್ಲ, ಆದರೆ

ಹೀಗೆ ಹೋಲಿಸಲು ಕಾರಣವೇನು ? ' ಸೂರ್ಯನು ತೇಜಸ್ಸನ್ನು ಪಡೆದಿರುವುದರಿಂದ ಪ್ರೇಕ್ಷಕನಿಗೆ ತನ್ನನ್ನೂ ತೋರಿಸಿಕೊಳ್ಳು ತ್ತಾನೆ ಮತ್ತು ತನ್ನ ರಶ್ಮಿಯಿಂದ ಇತರ ಪದಾರ್ಥಗಳನ್ನೂ ಪ್ರಕಾಶ ಪಡಿಸುತ್ತಾನೆ. ಹಾಗೆಯೇ ಪರಮಾತ್ಮನೂ ಕೂಡ ಜ್ಞಾನಸ್ವರೂಪನಾದ್ದರಿಂದ ತನ್ನನ್ನು ತಾನು ತಿಳಿದು ಕ್ಕೊಳ್ಳುತ್ತಾನೆ ಮತ್ತು ಯಾವುದರಲ್ಲಿ ತಾನು ಅಂತರ್ಯಾಮಿಯಾಗಿ ರುವನೋ ಆ ಕ್ಷೇತ್ರವನ್ನೂ ಅದರ ಭಾಗಗಳನ್ನೂ ತಿಳಿಯುವನು. ಆದರೆ ಒಂದು ವ್ಯತ್ಯಾಸವನ್ನು ಗಮನಿಸಬೇಕು. ಪರಮಾತ್ಮನು ತನ್ನನ್ನು ತಾನು ತಿಳಿದು ತಾನೇ ಕ್ಷೇತ್ರವನ್ನೆಲ್ಲಾ ತಿಳಿಯುವನು. ಆದರೆ ಸೂರ್ಯನು ತನ್ನನ್ನು ತಾನು ತಿಳಿಯುವುದೂ ಇಲ್ಲ ಮತ್ತು ತಾನು ಇತರ ವಸ್ತುಗಳನ್ನೂ ತಿಳಿಯುವುದೂ ಇಲ್ಲ.

### ಈ ಅಧ್ಯಾಯದ ಮುಕ್ತಾಯ ಶ್ಲೋಕ

**ಕ್ಷೇತ್ರ ಕ್ಷೇತ್ರಜ್ಞಯೋರೇವ ಮಂತರಂ ಜ್ಞಾನ ಚಕ್ಷುಷಾ ।**
**ಭೂತ ಪ್ರಕೃತಿ ಮೋಕ್ಷಂಚ ಯೇ ವಿದುರ್ಯಾಂತಿ ತೇ ಪರಂ ॥ ೩೪ ॥**

**ಈ ಶ್ಲೋಕದಲ್ಲಿರುವ ವಾಕ್ಯಗಳ ಸಾಮಾನ್ಯ ಅರ್ಥ ಹೀಗಿದೆ.**

(1) ಏವಂ ಜ್ಞಾನಚಕ್ಷುಷಾ ಕ್ಷೇತ್ರಕ್ಷೇತ್ರಜ್ಞಯೋಃ ಅಂತರಂ ಯೇ ವಿದುಃ = ಮೇಲೆ ವಿವರಿಸಿರುವ ಪ್ರಕಾರದಲ್ಲಿ ಜ್ಞಾನವೆಂಬ ಕಣ್ಣಿನ ಸಹಾಯದಿಂದ ಕ್ಷೇತ್ರದ ಮತ್ತು ಕ್ಷೇತ್ರಜ್ಞನ ಸ್ವರೂಪ ವ್ಯತ್ಯಾಸಗಳನ್ನು ಯಾರು ತಿಳಿದುಕ್ಕೊಳ್ಳು ವರೋ,

(2) ಚ ಭೂತ ಪ್ರಕೃತಿ ಮೋಕ್ಷಂ (ವಿದುಃ) = ಹಾಗೆಯೇ ಭೂತ ಪ್ರಕೃತಿ ಮೋಕ್ಷವನ್ನೂ (ತಿಳಿಯುತ್ತಾರೆಯೋ),

(3) ತೇ ಪರಂ ಯಾನ್ತಿ = ಅವರು ಪರವನ್ನು ಪಡೆಯುವರು.

ಆಚಾರ್ಯರುಗಳು ಈ ಶ್ಲೋಕದಲ್ಲಿರುವ " ಕ್ಷೇತ್ರ–ಕ್ಷೇತ್ರಜ್ಞ ಜ್ಞಾನಚಕ್ಷುಷಾ–ಭೂತ ಪ್ರಕೃತಿ ಮೋಕ್ಷಂ–ಪರಂ " ಎಂಬ ಪದಗಳಿಗೆ ಬೇರೆಬೇರೆ ಅರ್ಥಮಾಡಿರುವುದರಿಂದ ಶ್ಲೋಕದ ತಾತ್ಪರ್ಯದಲ್ಲಿ ಭೇದಗಳಿವೆ.

### ಮೊದಲನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಕ್ಷೇತ್ರ ಎಂದರೆ ಜೀವಿಯ ಶರೀರ ; ಕ್ಷೇತ್ರಜ್ಞನೆಂದರೆ ನಿರ್ಗುಣಬ್ರಹ್ಮ ; ಜ್ಞಾನಚಕ್ಷುಷಾ ಎಂದರೆ ಶಾಸ್ತ್ರದ ಮತ್ತು ಆಚಾರ್ಯರ ಉಪದೇಶದಿಂದ ಒಬ್ಬನ ಅನುಭವಕ್ಕೆ ಬಂದಿರುವ ಜ್ಞಾನ ; ಭೂತಪ್ರಕೃತಿ ಎಂದರೆ ಭೂತಗಳ ಪ್ರಕೃತಿಯು, ಅಂದರೆ ವಿಧವಿಧವಾದ ಸಜೀವ ನಿರ್ಜೀವ ಪದಾರ್ಥಗಳ ಇರು ವಿಕೆಯನ್ನು ತೋರಿಸುವ ಅವಿದ್ಯಾಕಲ್ಪಿತವಾದ ಅವ್ಯಕ್ತವೆಂಬ ಹೆಸರಿಗೆ ಆಧಾರವಾದದ್ದು, ಅದರ ಮೋಕ್ಷವೆಂದರೆ ಜ್ಞಾನದಿಂದ ಅದನ್ನು ಇಲ್ಲವಾಗಿಸುವಿಕೆ ; ಪರಂ ಎಂದರೆ ಪರಮಾರ್ಥ ತತ್ವ ವಾದ ಪರಬ್ರಹ್ಮವನ್ನು ಎಂದು ಅರ್ಥ.

ಮೇಲೆ ವಿವರಿಸಿದ ರೀತಿಯಲ್ಲಿ ಯಾವ ಮಹಾತ್ಮರುಗಳು ಶಾಸ್ತ್ರ ಮತ್ತು ಆಚಾರ್ಯರ ಉಪದೇಶದಿಂದ ಉತ್ತಮವಾದ ಜ್ಞಾನವನ್ನು ಪಡೆದು, ತನ್ಮೂಲಕ ನಿರ್ಗುಣಬ್ರಹ್ಮನ ಮತ್ತು ಶರೀರಗಳ ವ್ಯತ್ಯಾಸವನ್ನೂ, ಅಜ್ಞಾನವೆಂಬ ಮಾಯೆಯಿಂದ ಜಗತ್ತು ತೋರುವುದನ್ನೂ ಮತ್ತು ಜ್ಞಾನದಿಂದ ಮಾಯೆಯು ತೊಲಗಿ ಜಗತ್ತೇ ಇಲ್ಲದ ಹಾಗೆ ಆಗುವುದನ್ನೂ ಚೆನ್ನಾಗಿ ಅರಿ ಯುತ್ತಾರೆಯೋ ಅವರು ಪರಮಾರ್ಥತತ್ವವಾದ ಪರಬ್ರಹ್ಮನನ್ನು ಸೇರುತ್ತಾರೆ. ಅವರು ಪುನಃ ಶರೀರವನ್ನು ಪಡೆಯುವುದಿಲ್ಲ.

### ಎರಡನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಕ್ಷೇತ್ರವೆಂದರೆ ಪ್ರಾಣಿಯ ಶರೀರ ; ಕ್ಷೇತ್ರಜ್ಞನೆಂದರೆ ಜೀವಾತ್ಮ (ನಿರ್ಗುಣಬ್ರಹ್ಮನಲ್ಲ–ಸಗುಣಬ್ರಹ್ಮನಲ್ಲ) ; ಜ್ಞಾನ ಚಕ್ಷುಷಾ ಎಂದರೆ ವಿವೇಕವೆಂಬ ಕಣ್ಣು ; ಭೂತಪ್ರಕೃತಿ ಮೋಕ್ಷ ಅಂದರೆ ದೇವಮನುಷ್ಯಾದಿ ರೂಪವಾಗಿ ವಿಕಾರಪಟ್ಟಿರು ವಂಥಾ ಪ್ರಕೃತಿ ದೆಶೆಯಿಂದ ಬಿಡಲ್ಪಡಲು ಉಪಾಯವಾದ ಅಮಾನಿತ್ವಾದಿ ಸಾಧನಗಳು ; ಪರಂ ಎಂದರೆ ಶುದ್ಧಪ್ರತ್ಯಗಾತ್ಮ (ಜೀವಾತ್ಮ) ಸಾಕ್ಷಾತ್ಕಾರವು.

ಇಲ್ಲಿಯವರೆಗೆ ವಿವರಿಸಿರುವ ಶರೀರವೆಂಬ ಕ್ಷೇತ್ರದಸ್ವರೂಪ ವನ್ನೂ, ಶುದ್ಧಪ್ರತ್ಯಗಾತ್ಮನೆಂಬ ಕ್ಷೇತ್ರಜ್ಞನ ಸ್ವರೂಪವನ್ನೂ, ಇವರುಗಳ ವ್ಯತ್ಯಾಸವನ್ನೂ, ಕ್ಷೇತ್ರಜ್ಞನು ಪ್ರಕೃತಿಯ ಬಂಧನ ದಿಂದ ಬಿಡಲ್ಪಡುವುದನ್ನೂ ಮತ್ತು ದೇವಮನುಷ್ಯಾದಿ ರೂಪ ವಾಗಿ ವಿಕಾರಪಟ್ಟಿರುವಂಥಾ ಪ್ರಕೃತಿಯ ದೆಶೆಯಿಂದ ಬಿಡಲ್ಪಡಲು ಉಪಾಯವಾದ ಅಮಾನಿತ್ವಾದಿಗಳನ್ನೂ, ಯಾರು ವಿವೇಕಜ್ಞಾನವೆಂಬ ಕಣ್ಣಿನಿಂದ ತಿಳಿಯುತ್ತಾರೆಯೋ ಅವರು

ಗಳು ಪ್ರಕೃತಿಬಂಧನದಿಂದ ಬಿಡಲ್ಪಟ್ಟವರಾಗಿ, ತಾನೇತಾನಾಗಿ ಜ್ಞಾನವೇ ಆಕಾರವಾದಂಥಾ ಶುದ್ಧಪ್ರತ್ಯಗಾತ್ಮಸ್ವರೂಪವನ್ನು ಹೊಂದುತ್ತಾರೆ.

### ಮೂರನೆಯ ಅಭಿಪ್ರಾಯದ ಪ್ರಕಾರ ತಾತ್ಪರ್ಯ

ಕ್ಷೇತ್ರವೆಂದರೆ ಒಟ್ಟು ವಿಶಾಲವಾದ ಜಗತ್ತು ; ಕ್ಷೇತ್ರಜ್ಞನೆಂದರೆ ಸಗುಣಬ್ರಹ್ಮ ಅಥವ ಪರಮಾತ್ಮ; ಜ್ಞಾನಚಕ್ಷುಷಾ ಅಂದರೆ ವಿವೇಕಜ್ಞಾನ ; ಭೂತಪ್ರಕೃತಿಮೋಕ್ಷ ಅಂದರೆ ಜೀವಿಗಳಿಗೆ ಮೋಕ್ಷವನ್ನು ಸಾಧಿಸಿಕೊಡುವ ಯೋಗಸಾಧನಗಳ ಅಂದರೆ ಅಮಾನಿತ್ವ, ಅದಂಭಿತ್ವ ಮೊದಲಾದ ಜ್ಞಾನಾಭ್ಯಾಸಗಳು ; ಪರಂ ಎಂದರೆ ಸಗುಣಬ್ರಹ್ಮನನ್ನು ಎಂದು ಅರ್ಥ.

ಯಾವ ಮನುಷ್ಯರು ಇಲ್ಲಿಯವರೆಗೆ ವಿವರಿಸಿರುವ ಕ್ಷೇತ್ರವೆಂಬ ಸಮಸ್ಥವಾದ ಜಗತ್ತಿನ ಸ್ವರೂಪವನ್ನೂ, ಕ್ಷೇತ್ರಜ್ಞನಾದ ಪರಮಾತ್ಮನ ಸ್ವರೂಪವನ್ನೂ, ಇವೆರಡರ ವ್ಯತ್ಯಾಸಗಳನ್ನೂ ಮತ್ತು ಶರೀರಬಂಧನದಲ್ಲಿರುವ ಪ್ರಾಣಿಗಳಿಗೆ ಪ್ರಕೃತಿಬಂಧನವನ್ನು ಬಿಡಿಸುವುದಕ್ಕೆ ಉಪಾಯವಾದ ಅಮಾನಿತ್ವ, ಅದಂಭಿತ್ವ ಮೊದಲಾದ ಜ್ಞಾನಾಭ್ಯಾಸಗಳನ್ನೂ ಚೆನ್ನಾಗಿ ಆಲೋಚನೆ ಮಾಡಿ ವಿವೇಕಜ್ಞಾನದ ಮೂಲಕ ತಿಳಿದುಕ್ಕೊಳ್ಳುತ್ತಾರೆಯೋ ಅವರು ಸಗುಣಬ್ರಹ್ಮನನ್ನು ಅಥವ ಪರಮಾತ್ಮನನ್ನು ಪಡೆಯುತ್ತಾರೆ.

### ಗಮನಿಸಬೇಕಾದ ವಿಷಯ

ಅಮಾನಿತ್ವ, ಅದಂಭಿತ್ವ, ಅಹಿಂಸೆ ಮುಂತಾದ ಜ್ಞಾನಾಭ್ಯಾಸಗಳಿಂದ ಮನುಷ್ಯನು ತನ್ನ ಸ್ವಾರ್ಥತೆಯನ್ನು ಬಿಡುವನು ಮತ್ತು ಇಂದ್ರಿಯ ಸುಖಗಳಿಗೆ ಗುಲಾಮನಾಗುವುದಿಲ್ಲ. ಯಾವನು ಇಂದ್ರಿಯಸುಖಾದಿಗಳನ್ನು ತಡೆಗಟ್ಟಿ, ಸ್ವಾರ್ಥತೆಯನ್ನು ನಿರ್ಮೂಲಮಾಡುವನೋ ಅವನು ಪ್ರಕೃತಿಬಂಧನದಿಂದ ಮುಕ್ತನಾಗಿ ಆತ್ಮಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಆದರೆ ಈ ಜ್ಞಾನಾಭ್ಯಾಸಗಳನ್ನು ಬುದ್ಧಿಯಲ್ಲಿ ಮಾತ್ರ ತಿಳಿದರೆ ಸಾಲದು ; ಅವುಗಳನ್ನು ನಿತ್ಯಜೀವನದಲ್ಲಿ ಶ್ರದ್ಧೆಯಿಂದ, ಉತ್ಸಾಹದಿಂದ, ಜಯಪ್ರದವಾಗಿ ಆಚರಿಸಬೇಕು. ಇಷ್ಟೇ ಅಲ್ಲ, ಕ್ಷೇತ್ರಕ್ಷೇತ್ರಜ್ಞನ ಸ್ವರೂಪಗಳನ್ನೂ ಮತ್ತು ವ್ಯತ್ಯಾಸಗಳನ್ನೂ ಬುದ್ಧಿಯಲ್ಲಿ ಮಾತ್ರ ತಿಳಿದರೆ ಸಾಲದು ; ಅವರುಗಳ ನಿಜಸ್ವರೂಪದ ಸಾಕ್ಷಾತ್ಕಾರವನ್ನು ಪಡೆಯಬೇಕು. ಇನ್ನೇನು, ಅಮಾನಿತ್ವಾದಿ ಜ್ಞಾನಾಭ್ಯಾಸಗಳು ಹೇಗೆ ಆತ್ಮಸಾಕ್ಷಾತ್ಕಾರವನ್ನು ಉಂಟುಮಾಡುತ್ತವೆ ಎಂಬುದನ್ನೂ ತಿಳಿಯಬೇಕು.

(Re-printed from Mysore Vysya Patrike
June 1960)

M. V. P. PRESS, MYSORE.